ಹಾನಗಲ್ಲ

# ಶ್ರೀ ಕುಮಾರೇಶ್ವರ ಪುರಾಣ

( ದ್ಯಾಂಪುರದ ಶ್ರೀ ಚನ್ನಕವಿ ಕೃತ )

' ಸುಕುಮಾರ ' ಗ್ರಂಥಮಾಲೆಯ ದ್ವಿತೀಯ ಪುಷ್ಪ

# ಶ್ರೀ ಹಾನಗಲ್ಲ ಕುಮಾರೇಶ್ವರ ಪುರಾಣ



'ಕವಿರತ್ನ'

ಲಿಂ. ಪ್ಯಾಂಪುರದ ಚೆನ್ನಕವಿ ವಿರಚಿತ

೧೯೫೪



ಮುದ್ರಣ–ಪ್ರಕಾಶನ

ಶ್ರೀ ಸದಾಶಿವ ಮುದ್ರಣಾಲಯ, ಶಿವಯೋಗಮಂದಿರ

ಬೆಲೆ: ಐದು ರೂಪಾಯಿಗಳು

# ಮುನ್ನುಡಿ

ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ಈ ನಾಡಿನಲ್ಲಿ ಧರ್ಮ, ನೀತಿ, ಸದಾಚಾರಗಳ ಕಡೆಗೆ ಜನರ ದೃಷ್ಟಿ ಅಷ್ಟೊಂದು ವಿಶೇಷವಾಗಿ ಹರಿದಿರಲಿಲ್ಲ. ಪರಕೀಯ ಧರ್ಮದ ಪ್ರಭಾವವನ್ನು ಜನರ ಮೇಲೆ ಬೀರಿ, ಧರ್ಮಾಂತರಗೊಳಿಸುವ ಕಾರ್ಯವು ಆಯಾ ಧರ್ಮದ ಪೋಷಕರಿಂದಲೂ ಧರ್ಮೋಪದೇಶಕರಿಂದಲೂ ಭರದಿಂದ ಸಾಗಿದ್ದಿತು. ಇದೇ ಪರಿಸ್ಥಿತಿಯು ಕೆಲವು ವರ್ಷಗಳ ವರೆಗೆ ಹಾಗೆ ಅವ್ಯಾಹತವಾಗಿ ಸಾಗಿದ್ದರೆ ಇಲ್ಲಿಯೇ ಹುಟ್ಟಿ ಬೆಳೆದಂತಹ ಹಲಕೆಲವು ಧರ್ಮಗಳೂ ಸಂಘಗಳೂ ಗಂಡಾಂತರಕ್ಕೀಡಾಗಬಹುದಾಗಿತ್ತು. ಇದನ್ನು ತಪ್ಪಿಸಲು ಭರತಖಂಡದ ಬೇರೆ ಬೇರೆ ಭಾಗಗಳಲ್ಲಿ ಮಹಾನುಭಾವರನೇಕರು ಉದ್ಭವಿಸಿ ಭಾರತೀಯರ ಧರ್ಮ, ಸಂಸ್ಕೃತಿ, ನೀತಿ, ನಡೆನುಡಿಗಳನ್ನುಳಿಸಿ, ಶೋಧಿಸಿ ಅವು ಪ್ರಕಾಶಮಾನವಾಗುವಂತೆ ಪರಿಶ್ರಮಪಟ್ಟರು. ಇಂತಹ ಮಹನೀಯರಲ್ಲಿ ಪೂಜ್ಯರಾದ ಲಿಂಗೈಕ್ಯ ಶ್ರೀ ಹಾನಗಲ್ಲ ಕುಮಾರ ಮಹಾಸ್ವಾಮಿಗಳವರು ಒಬ್ಬರು. ಅವರು ಕರ್ನಾಟಕದಲ್ಲಿ ಖಿಲವಾಗುತ್ತಲಿದ್ದ ವೀರಶೈವ ಧರ್ಮಕ್ಕೆ ಪುಟಕೊಟ್ಟು ಅದು ಬೆಳಗುವಂತೆ ಮಾಡಿದರು. ಈ ಪುರಾಣವು ಅವರ ಜೀವನ ಚರಿತೆಯನ್ನೂ ಅವರಿಂದಾದ ಘನವಾದ ಕಾರ್ಯಗಳನ್ನೂ ನಿರೂಪಿಸುವದು.

ಈ ಪುರಾಣವನ್ನು ಬರೆದವರು ಶಿವೈಕ್ಯ ಶ್ರೀ ದ್ಯಾಂಪುರದ ಚೆನ್ನಕವಿಗಳು. ಇವರು ಗದುಗಿನ ಹತ್ತಿರವಿರುವ ನಾರಾಯಣಪುರದಲ್ಲಿ ಕ್ರಿ. ಶ. ೧೮೭೯ ರ ಸುಮಾರಿಗೆ ಜನಿಸಿದರು. ಇವರ ತಂದೆ ಕೊಟ್ಟೂರ ಬಸವಯ್ಯನವರು; ತಾಯಿ ನೀಲಾಂಬಿಕೆ. ಈ ದಂಪತಿಗಳು ಕೊಪ್ಪಳ ಜಿಲ್ಹೆಯ ದ್ಯಾಂಪುರದಲ್ಲಿ ವಾಸವಾಗಿದ್ದುದರಿಂದ ಕವಿಗಳಿಗೆ "ದ್ಯಾಂಪುರದ ಚೆನ್ನಯ್ಯನವರು" ಎಂಬ ಹೆಸರು ಬಂದಿತು. ಕವಿಗಳ ತಾಯಿ ತಂದೆಗಳು ಚಿಕ್ಕಂದಿನಲ್ಲಿಯೇ ತೀರಿಕೊಂಡರು. ಇವರ ತಂದೆಯ ತಾಯಿ ಸಿದ್ದಮ್ಮನವರು ಇವರನ್ನು ಜೋಕೆ ಮಾಡಿದರು. ತಮ್ಮ ಸೋದರ ಮಾವಂದಿರಾದ ನಾರಾಯಣಪುರದ ಕಲ್ಯಾಣ ಶಾಸ್ತ್ರಿಗಳವರಲ್ಲಿ ಚೆನ್ನಕವಿಗಳು ಕನ್ನಡ ಹಾಗೂ ಸಂಸ್ಕೃತವನ್ನು ಕಲಿತರು. ಆ ಮೇಲೆ ವೀರಯ್ಯನವರೆಂಬ ಶಿಕ್ಷಕರ ಸಹಾಯದಿಂದ ತಮ್ಮ ಅಭ್ಯಾಸವನ್ನು ಬೆಳಿಸಿಕೊಂಡರು. ಕನ್ನಡದಲ್ಲಿ ಪ್ರಸಿದ್ಧ ಕಾವ್ಯಗಳಾದ ಶಬರಶಂಕರವಿಳಾಸ, ರಾಜಶೇಖರವಿಳಾಸ, ಜೈಮಿನಿಭಾರತ ಮೊದಲಾದವುಗಳನ್ನು ಆಸ್ಥೆಯಿಂದ ಅಭ್ಯಾಸಮಾಡಿ, ಕಾವ್ಯಸಾಹಿತ್ಯದಲ್ಲಿ ಪರಿಣತೆಯನ್ನು ಪಡೆದರು. ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕರಾಗಿ ಹದಿನಾರು ವರ್ಷ ಕೆಲ

ಸವಾಡಿದರು. ಆ ಸಮಯದಲ್ಲಿ ವೀರಶೈವ ಮಹಾಸಭೆ, ಶಿವಯೋಗಮಂದಿರ ಮೊದಲಾದ ಸಂಸ್ಥೆಗಳ ಆಧಾರ ಸ್ತಂಭರಾಗಿ ವೀರಶೈವರಲ್ಲಿ ಧರ್ಮ, ಆಚಾರ, ನೀತಿಗಳು ನೆಲೆಗೊಳ್ಳುವಂತೆ ಶ್ರೀ ಮ. ನಿ. ಪ್ರ. ಹಾನಗಲ್ಲ ಕುಮಾರ ಸ್ವಾಮಿಗಳವರು ಅವಿಶ್ರಾಂತವಾಗಿ ಪರಿಶ್ರಮಪಡುತ್ತಲಿದ್ದರು. ಶ್ರೀಗಳವರ ಅಪ್ಪಣೆಯಂತೆ ಚೆನ್ನಕವಿಗಳು ಧರ್ಮೋಪದೇಶ ಹಾಗೂ ಸಾಹಿತ್ಯ ಸೇವೆಗಾಗಿ ತಮ್ಮ ಉಳಿದ ಆಯುಷ್ಯವನ್ನು ಮೀಸಲಾಗಿಟ್ಟರು. ಈ ಅವಧಿಯು ಅವರ ಕಾವ್ಯ ನಿರ್ಮಾಣಕ್ಕೆ ಹೆಚ್ಚು ಅನುಕೂಲತೆಯನ್ನೊದಗಿಸಿಕೊಟ್ಟಿತು. ಅವರ ಒಳ್ಳೆಯ ಕೃತಿಗಳೆಲ್ಲ ಈ ಕಾಲದಲ್ಲಿಯೇ ರಚಿತವಾದವು. ಇವುಗಳಲ್ಲಿ ಒಂಬತ್ತು ಪುರಾಣಗಳು † ವಾರ್ಧಿಕ ಷಟ್ಪದಿಯಲ್ಲಿವೆ. ಉಳಿದ ಸುಮಾರು ಹನ್ನೆರಡು ಕೃತಿಗಳು ‡ ಶತಕ ಹಾಗೂ ಹಾಡುಗಬ್ಬಗಳ ರೂಪದಲ್ಲಿ ರಚಿತವಾಗಿವೆ.

ಚೆನ್ನಕವಿಗಳ ಕೃತಿಗಳೆಲ್ಲ ರಸವತ್ತಾಗಿಯೂ ಜನಪ್ರಿಯವಾಗಿಯೂ ಇವೆ. ವೀರಶೈವರು ಮಠಗಳಲ್ಲಿ ಇವರು ಬರೆದ ಪುರಾಣಗಳನ್ನು ಆಸ್ಥೆಯಿಂದ ಶ್ರವಣ ಮಾಡುತ್ತಾರೆ. ಇವರ ಕಾವ್ಯ ಶಕ್ತಿಯನ್ನೂ, ಸಾಹಿತ್ಯ-ಸೇವೆಯನ್ನೂ ಅರಿತುಕೊಂಡು ಧಾರವಾಡದ ಶ್ರೀ ಮ. ನಿ. ಪ್ರ. ಮೃತ್ಯುಂಜಯ ಮಹಾ ಸ್ವಾಮಿಗಳವರು ಇವರಿಗೆ 'ಕವಿರತ್ನ' ಎಂಬ ಪ್ರಶಸ್ತಿಯನ್ನು ಕ್ರಿ. ಶ. ೧೯೪೦ ರಲ್ಲಿ ದಯಪಾಲಿಸಿದರು. ಈ ವಿಧದ ಗೌರವಾನ್ವಿತ ಜೀವನವನ್ನು ಸಾಗಿಸಿ ದಿ. ೫-೩-೧೯೪೭ ನೆಯ ದಿನ ಶಿವಯೋಗಮಂದಿರದಲ್ಲಿ ಹೃದಯ ವಿಕಾರದಿಂದ ಶಿವೈಕ್ಯರಾದರು.

---

† ೧ ಹೇಮರಡ್ಡಿ ಮಲ್ಲಮ್ಮನ ಪುರಾಣ
೨ ಹಾಲಕೆರೆ ಅನ್ನದಾನಿ ಮಹಾಸ್ವಾಮಿಗಳ ಪುರಾಣ
೩ ನಾಲ್ವತ್ತುವಾಡದ ವೀರೇಶ್ವರ ಪುರಾಣ
೪ ಶ್ರೀ ಹುಚ್ಚೇಶ್ವರ ಪುರಾಣ
೫ ಕಂಬಳಿಹಾಳ ದೊಡ್ಡ ಬಸವೇಶ್ವರ ಪುರಾಣ
೬ ಇಲಕಲ್ಲ ಮಹಾಂತ ಸ್ವಾಮಿಗಳ ಪುರಾಣ
೭ ಮುಳಗುಂದ ಬಾಲಲೀಲಾ ಮಹಾಂತಸ್ವಾಮಿಗಳ ಪುರಾಣ
೮ ಹಾನಗಲ್ಲ ಕುಮಾರ ಸ್ವಾಮಿಗಳ ಪುರಾಣ
೯ ಶಿರಹಟ್ಟಿ ಫಕೀರ ಸ್ವಾಮಿಗಳ ಚರಿತ್ರೆ

‡ ೧ ಕಾಲಕಾಲೇಶ್ವರ ಶತಕ; ೨ ಕಲ್ಲಿನಾಥ ಶತಕ; ೩ ಕೊಟ್ಟೂರೇಶ್ವರ ಶತಕ; ೪ ಬಸವತ್ರಿವಿಧಿ; ೫ ಅನ್ನದಾನೇಶ್ವರ ಜೋಗಳಪದ; ೬ ಬೀಗಿತಿಯರ ಹಾಡು; ೭ ಶ್ರೀ ಗವಿಸಿದ್ಧೇಶ್ವರ ಮಂಗಲ ಪದಗಳು; ೮ ಮಂತ್ರ ರಹಸ್ಯ; ೯ ನಲ್ನುಡಿ; ೧೦ ಮನೋಬೋಧೆ; ೧೧ ಶ್ರೀ ಕುಮಾರೇಶ್ವರ ಶತಕ; ೧೨ ಸದಾಶಿವಲೀಲೆ ( ಶಿವೈಕ್ಯರಾಗುವ ೧೫ ದಿನಗಳ ಪೂರ್ವದಲ್ಲಿ ಬರೆದ ಗ್ರಂಥ )

ಈ ಕೃತಿಯ ಕಥಾನಾಯಕರಾದ ಪೂಜ್ಯ ಹಾನಗಲ್ಲ ಕುಮಾರಸ್ವಾಮಿಗಳವರ ಜೀವನ ಚರಿತೆಯು ಸರಳವೂ ನೈಜವೂ ಆಗಿದೆ. ಧಾರವಾಡ ಜಿಲ್ಲೆಯ ರಾಣೆಬೆನ್ನೂರ ತಾಲೂಕಿನ ಜೋಯಿಸರ ಹರಳಹಳ್ಳಿಯಲ್ಲಿ ಕ್ರಿ. ಶ. ೧೮೬೭ ರಲ್ಲಿ ಮಹಾಸ್ವಾಮಿಗಳವರು ಜನ್ಮವೆತ್ತಿದರು. ಅವರ ತಂದೆ ತಾಯಿಗಳಾದ ಬಸವಯ್ಯ ಹಾಗೂ ನೀಲಮ್ಮನವರು ಒಳ್ಳೆಯ ಸಚ್ಛೀಲರಾದ ದಂಪತಿಗಳಾಗಿದ್ದರು. ಬಡತನದ ಮೂಲಕ ಮಹಾಸ್ವಾಮಿಗಳ ವಿದ್ಯಾಭ್ಯಾಸವು ಚಿಕ್ಕಂದಿನಲ್ಲಿ ಸರಿಯಾಗಿ ಸಾಗಲಿಲ್ಲ. ಅವರು ಪ್ರಬುದ್ಧರಾದ ಮೇಲೆ ಸ್ವಪ್ರಯತ್ನದಿಂದ ವಿದ್ಯಾರ್ಜನೆ ಮಾಡಿಕೊಂಡು, ಕ್ಲಿಷ್ಟವಾದ ಕನ್ನಡ ಗ್ರಂಥಗಳನ್ನು ತಿಳಿದುಕೊಳ್ಳುವಷ್ಟು ಸಾಮರ್ಥ್ಯ ಪಡೆದರು. ಬಾಲ್ಯದಿಂದಲೂ ವೇದಾಂತದ ಕಡೆಗೆ ಇವರ ಒಲವು ಹೆಚ್ಚಾಗಿದ್ದಿತು. ವೇದಾಂತ ಶಾಸ್ತ್ರವನ್ನು ಕನ್ನಡದಲ್ಲಿ ವಿವರಿಸುವ ಮಹತ್ತ್ವದ ಗ್ರಂಥಗಳಾದ ನಿಜಗುಣರ ಷಟ್ ಶಾಸ್ತ್ರಗಳನ್ನು ಇವರು ಆಳವಾಗಿ ಅಭ್ಯಾಸ ಮಾಡಿದರು. ಮಹಾಯೋಗಿಗಳೂ ತಪಸ್ವಿಗಳೂ ಆದ ಶ್ರೀ ಎಳಂದೂರ ಬಸವಲಿಂಗ ಸ್ವಾಮಿಗಳವರ ಸಾನ್ನಿಧ್ಯದಲ್ಲಿದ್ದು ಸೇವೆ ಮಾಡಿ, ಅವರಿಂದ ಶಿವಯೋಗ ಹಾಗೂ ಶಿವಾನುಭವಗಳನ್ನು ಕಲಿತುಕೊಂಡರು. ಮಹಾ ಶಿವಾನುಭವಿಗಳು ತತ್ವವೇತ್ತರು ಆದರು.

ಮುಂದೆ ನಿಜಗುಣರ ತಪೋಭೂಮಿಯಾದ ಶಂಭುಲಿಂಗನ ಬೆಟ್ಟದಲ್ಲಿ ಉಗ್ರ ತಪಸ್ಸನ್ನಾಚರಿಸಿ ಆತ್ಮೋನ್ನತಿಯನ್ನು ಮಾಡಿಕೊಂಡರು. ವೀರಶೈವ ಧರ್ಮವನ್ನು ಆಳವಾಗಿ ಅರಿತು ಬೋಧಿಸಿದ ಸೊರಬ ತಾಲೂಕಿನ ಕ್ಯಾಸನೂರ ಷಟ್ಕಾಸ್ಥದ ಗುರುಬಸವ ಸ್ವಾಮಿಗಳ ಗದ್ದುಗೆಯ ದರ್ಶನ ಪಡೆದು ಅಲ್ಲಿಯೂ ಕೆಲವು ದಿನ ಅನುಷ್ಠಾನವನ್ನು ಮಾಡಿದರು. ಇವರ ತಪಸ್ಸಿನ ಮತ್ತು ವಿದ್ವತ್ತಿಯ ಪ್ರಭಾವವನ್ನು ಕಂಡು ಹಾನಗಲ್ಲಿನ ಭಕ್ತರು ಇವರಿಗೆ ಹಾನಗಲ್ ವಿರಕ್ತಮಠದ ಆಧಿಪತ್ಯವನ್ನು ವಹಿಸಿಕೊಟ್ಟರು. ಮಹಾಸ್ವಾಮಿಗಳವರು ಮಠದಲ್ಲಿ ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿ ಅನ್ನದಾನವನ್ನೂ ವಿದ್ಯಾದಾನವನ್ನೂ ಮಾಡಹತ್ತಿದರು. ಆಗ ವೀರಶೈವ ಸಮಾಜದ ಸ್ಥಿತಿಯು ಶೋಚನೀಯವಾಗಿದ್ದಿತು. ವೀರಶೈವರ ಶುದ್ಧವಾದ ಆಚಾರವು ಮುಸಣಿಸಿದ್ದಿತು; ಜನರಲ್ಲಿ ಅಂಧ ಶ್ರದ್ಧೆ ನೆಲೆಸಿದ್ದಿತು. ವಾಗದ್ವೈತಿಗಳ ಪ್ರಭಾವ ಬೆಳೆಯ ತೊಡಗಿತು. ಜನರು ಈ ವೇದಾಂತಿಗಳ ಉಪದೇಶಕ್ಕೆ ಮರುಳಾಗಿ ಷಟ್‌ಸ್ಥಲ ಸಿದ್ಧಾಂತವನ್ನು ಮರೆಯ ಹತ್ತಿದರು. ಆದುದರಿಂದ ಸಮಾಜವನ್ನು ಜಾಗ್ರತಗೊಳಿಸಿ ಜನತೆಯಲ್ಲಿ ಸದಾಚಾರವು ಒಡಮೂಡುವಂತೆ ಮಾಡುವದು ಅಗತ್ಯವಾಗಿತ್ತು. ಈ ಬಗ್ಗೆ ಶ್ರೀಗಳವರು ಬಾಗಿಲುಕೋಟೆಯ ವೈರಾಗ್ಯದ ಮಲ್ಲಣಾರ್ಯರೊಡನೆ ಚರ್ಚಿಸಿ ಸಮಾಜ ಸುಧಾರಣೆಗಾಗಿ ಸಂಸ್ಥೆಗಳನ್ನು ಕಟ್ಟಬೇಕೆಂದು ನಿರ್ಧರಿಸಿದರು.

ಸಮಾಜದಲ್ಲಿಯ ಪ್ರತಿಯೊಬ್ಬ ವ್ಯಕ್ತಿ ಸುಧಾರಿಸಬೇಕು, ಸಮಾಜದ ಸಾಂಪತ್ತಿಕ ಸ್ಥಿತಿ ಹೆಚ್ಚಬೇಕು, ನೈತಿಕ ಮಟ್ಟ ಬೆಳೆಯಬೇಕು ಎಂಬ ಯೋಜನೆಗಳು ಶ್ರೀಗಳವರಿಗೆ ಮೇಲಿಂದ ಮೇಲೆ ಬರಹತ್ತಿದವು. ಅದಕ್ಕಾಗಿ ಅವರು ಅಲ್ಲಲ್ಲಿ ಸಂಚರಿಸಿ ಪ್ರಮುಖರೊಡನೆ ಪರ್ಯಾಲೋಚಿಸ ತೊಡಗಿದರು. ಇವರ ಪರಿಣಾಮವಾಗಿ ಕ್ರಿ. ಶ. ೧೯೦೪ ರಲ್ಲಿ ಶ್ರೀ ಮದ್ವೀರಶೈವ ಮಹಾಸಭೆಯು ಸ್ಥಾಪನೆಯಾಯಿತು. ವೀರಶೈವ ಸಂಸ್ಕೃತಿಯ ವಿಷಯದಲ್ಲಿ ಶ್ರೀಗಳವರಿಗೆ ವಿಶೇಷವಾದ ಗೌರವವಿತ್ತು. ಅವರು ಪ್ರಾಚೀನ ವೀರಶೈವ ಧರ್ಮ, ತತ್ತ್ವಜ್ಞಾನ, ಸಂಸ್ಕೃತಿ, ಕಲೆ ಇವುಗಳ ಪುನರುಜ್ಜೀವನಕ್ಕಾಗಿ ನಾನಾ ಮುಖವಾಗಿ ಪ್ರಯತ್ನಿಸಿದರು; ಹಲವು ಅಪೂರ್ವ ತಾಡವೋಲೆ ಮತ್ತು ಕೈಬರಹದ ಗ್ರಂಥಗಳನ್ನು ಸಂಗ್ರಹಿಸುವ ಏರ್ಪಾಡು ಮಾಡಿದ್ದರು. ವೀರಶೈವ ಸಮಾಜವು ಸರ್ವಾಂಗ ಸುಂದರವಾಗಬೇಕಾದರೆ, ಮಠಾಧಿಕಾರಿಗಳಾದ ಗುರು ವಿರಕ್ತರಿಗೆ ಸರಿಯಾದ ಧಾರ್ಮಿಕ ಶಿಕ್ಷಣ ದೊರೆಯಬೇಕೆಂಬುದನ್ನು ಮನಗಂಡು ಕ್ರಿ. ಶ. ೧೯೦೯ ರಲ್ಲಿ ಶಿವಯೋಗಮಂದಿರವನ್ನು ಸ್ಥಾಪಿಸಿದರು. ಶ್ರೀಗಳವರ ಉದ್ದೇಶಗಳನ್ನು ಮುಂದಿಟ್ಟುಕೊಂಡು ಸಂಸ್ಥೆಯು ಇಂದಿಗೂ ಕಾರ್ಯಮಾಡುತ್ತಲಿದೆ. ಶ್ರೀಗಳವರ ಜೀವಮಾನವೆಲ್ಲ ಸಮಾಜದ ಸರ್ವತೋಮುಖ ಏಳ್ಗೆಗಾಗಿ ಮೀಸಲಾಗಿದ್ದಿತು. ಕ್ರಿ ಶ. ೧೯೩೦ ರಲ್ಲಿ ಶಿವಯೋಗಮಂದಿರದಲ್ಲಿಯೇ ಮಹಾಸ್ವಾಮಿಗಳವರು ಲಿಂಗೈಕ್ಯರಾದರು.

ಚೆನ್ನಕವಿಗಳು ಮಹಾಸ್ವಾಮಿಗಳವರ ಜೀವನವನ್ನೂ ಅವರಿಂದಾದ ಮಹತ್ಕಾರ್ಯಗಳನ್ನೂ ವಾರ್ಧಿಕ ಷಟ್ಪದಿಯಲ್ಲಿ ವರ್ಣಿಸಿದ್ದಾರೆ. ಈ ಕಾವ್ಯದ ಪ್ರತಿಯೊಂದು ಸಂಧಿಯ ಆದಿಯಲ್ಲಿ ಬರುವ ಶಿವಸ್ತುತಿಪರವಾದ ಪದ್ಯಗಳು ಸುಂದರವಾಗಿವೆ. ಕಾವ್ಯ ಶೈಲಿ ಸರಳವೂ ಸ್ವಾಭಾವಿಕವೂ ಆಗಿದೆ. ಶ್ರೀಗಳವರ ಜೀವನವೆ ಒಂದು ಪವಾಡವಾಗಿದೆ. ಆದುದರಿಂದ ಉಳಿದ ಪುರಾಣಗಳಲ್ಲಿರುವಂತೆ ಈ ಪುರಾಣದಲ್ಲಿ ಕವಿಗಳು ಅದ್ಭುತ ಪವಾಡಗಳಿಗೆ ಆಸ್ಪದ ಕೊಟ್ಟಿಲ್ಲ. ಇಲ್ಲಿ ಶ್ರೀಗಳವರ ಜೀವನ ಸ್ಫುಟವಾಗಿ ಮೂಡಿದೆ. ಹದಿನೆಂಟು ವರ್ಣನೆಗಳಿಗೆ ಇಲ್ಲಿ ಸ್ಥಳವಿಲ್ಲ. ಕಥಾನಾಯಕನು ವೈರಾಗ್ಯಶೀಲನೂ, ಯೋಗಿಯೂ, ಮಹಾತಪಸ್ವಿಯೂ ಆಗಿರುವದರಿಂದ ಲೋಕಹಿತದ ಕಡೆಗೆ ಕವಿಯು ದೃಷ್ಟಿಯನ್ನು ಹೆಚ್ಚಾಗಿ ಹಾಕಿದ್ದಾನೆ. ಸಾಮಾನ್ಯವಾಗಿ ಪುರಾಣಗಳಲ್ಲಿ ಭಕ್ತಿಯ ಪ್ರಭಾವವನ್ನು ಹೇಳಿ ಜನತೆಯನ್ನು ಭಕ್ತಿಮಾರ್ಗದ ಕಡೆಗೆ ಒಯ್ಯುವ ಸಂಪ್ರದಾಯವಿದೆ. ಆದರೆ ಈ ಪುರಾಣದಲ್ಲಿ ನಾಯಕನ ಕರ್ತೃತ್ವ ಶಕ್ತಿಯಿಂದ ಸಮಾಜಹಿತದ ಘನವಾದ ಕಾರ್ಯಗಳು ಜರುಗಿರುವದರಿಂದ ಶ್ರೋತೃಗಳ ದೃಷ್ಟಿಯು ವಿಶಾಲವಾಗಿ ಲೋಕಹಿತದ ಕಡೆಗೆ ಒಲೆಯುವಂತಿದೆ. ಇದು ಕವಿಯ ಕೊನೆಯ ಕೃತಿಯಾದುದರಿಂದ ಇದಕ್ಕೂ ಇವರ ಮೊದಲಿನ ಕೃತಿಗಳಿಗೂ

ಮಹದಂತರವಿದೆ. ಈ ಕಾವ್ಯದಲ್ಲಿ ಕವಿಯು ಪ್ರಾಸ, ಯಮಕ ಮುಂತಾದ ಶಬ್ದಾಲಂಕಾರಗಳಿಗೆ ಬಲೆಬೀಳದೆ ಉಪಮೆ, ಉತ್ಪ್ರೇಕ್ಷೆ, ರೂಪಕ ಮೊದಲಾದ ಅರ್ಥಾಲಂಕಾರಗಳನ್ನು ಮಿತವಾಗಿ ಹಿತವಾಗಿ ಉಪಯೋಗಿಸಿದ್ದಾನೆ. ಇದು ಈ ಕಾವ್ಯದ ವೈಶಿಷ್ಟ್ಯ.

ಈ ಕಾವ್ಯದ ಆರಂಭದಲ್ಲಿ

ಇದು ರಸಿಕಮಾವ ಕಾದಂಬರಿಯ ಕತೆಯಲ್ಲ-
ವಿದು ಕಲಿಗಳಿತಿಹಾಸಮಲ್ಲ ಕಲ್ಪಿತವಲ್ಲ-
ವಿದರೊಳಪ್ರಾಸಂಗಿಕಾಸಂಭವಾಸತ್ಯದೋಷ ವಿಷಯಂಗಳಿಲ್ಲ
ಪುದಿದ ಮಾಯಾ ಮೋಹ ಮೋಸದಿಂ ಕಂಗೆಟ್ಟು
ಕುದಿವ ಮಾನವರನೆಚ್ಚರಿಸಿ ಪಾಲಿಸಲುಳ್ಳ
ಸವಮಲ ಜ್ಞಾನ ವೈರಾಗ್ಯ ಭಕ್ತಿಗಳ ಸೊಂಪಿನ ಸುಗ್ಗಿ ಬಗೆಗೊಳಿಪುದು ॥ ೧ ॥

ಎಂದು ಹೇಳಿರುವನು. ಈ ಮಾತನ್ನು ಕವಿಯು ಅಕ್ಷರಶಃ ಪಾಲಿಸಿರುವನು.

ಕನ್ನಡ ಸಾಹಿತ್ಯದಲ್ಲಿ ಪ್ರಾಚೀನ ಕಾವ್ಯಗಳು ವಿಪುಲವಾಗಿವೆ. ಹಿಂದಿನ ಪರಂಪರೆಯನ್ನು ಬಿಡದೆ ೨೦ ನೆಯ ಶತಮಾನದಲ್ಲಿ ಕಾವ್ಯಗಳನ್ನು ಬರೆದವರು ವಿರಳ. ಶ್ರೀ ಚೆನ್ನಕವಿಗಳು ೯ ಪುರಾಣಗಳನ್ನು ಬರೆದು ಈ ಕೊರತೆಯನ್ನು ಬಹುಮಟ್ಟಿಗೆ ಪೂರೈಸಿರುವರು. ಈ ಕಾವ್ಯ ಕನ್ನಡಿಗರ ಮುಂದಿದೆ. ಅದನ್ನು ಆದರಿಸಿ ಅಭಿಮಾನದಿಂದ ಬರಮಾಡಿಕೊಳ್ಳುವರೆಂದು ನಮ್ಮ ನಂಬುಗೆ.

ಬಸವೇಶ್ವರ ಕಾಲೇಜ, ಬಾಗಲಕೋಟೆ — ಶಿ. ಚೆ. ನಂದೀಮಠ
ತಾ. ೧-೭-೧೯೫೪



# ಪ್ರಸ್ತಾವನೆ



ಚೆನ್ನಕವಿಗಳು ಕರ್ನಾಟಕದಲ್ಲಿರುವ ಸರ್ವಜನರಿಗೆ ಚಿರಪರಿಚಿತರಾಗಿರುವರು. ಕವಿಗಳ ಪರಿಚಯ ಮಾಡಿಕೊಡುವದೆಂದರೆ ಸೂರ್ಯನ ಪರಿಚಯ ಮಾಡಿಕೊಟ್ಟಂತೆ ಸರಿ. ಬಲುವಿಚಕ್ಷಣ ಬುದ್ಧಿಯುಳ್ಳ ಈ ಕವಿಗಳಿಗೆ ಪದ್ಯಗಳನ್ನು ಕಟ್ಟುವದೆಂದರೆ ಸಹಜ ಸ್ವಭಾವವಾಗಿತ್ತು. ಅದರಂತೆ ಕಾವ್ಯಗಳನ್ನು ಬರೆಯಬೇಕೆಂದರೆ ಯಾವಾಗಲು ಅವರಿಗೆ ಹುರುಪು ಹುಮ್ಮಸಗಳುಂಟಾಗುತ್ತಿದ್ದವು. ಹೆಚ್ಚಾಗಿ ಕಲಿಯದೆ ಕವಿಗಳಾದ ಈ ಮಹಕವಿಗಳಿಗೆ ಕವಿತ್ವ ಶಕ್ತಿಯುಂಟಾಗಿದ್ದು ಪೂರ್ವದ ಸುಕೃತವೆಂದು ಹೇಳ ಬೇಕು. ಸಣ್ಣಹಳ್ಳಿಯಲ್ಲಿ ಹುಟ್ಟಿದ ಇವರ ಕವಿತ್ವದ ಪ್ರಭೆಯು ಕರ್ನಾಟಕದ ತುಂಬಾ ಬೆಳಗಿತು. ಇವರು ಮಾಡಿದ ಸಾಹಿತ್ಯ ಸೇವೆಯು ಅಪಾರವಾಗಿದೆ. ಇಂತಹ ಅಪೂರ್ವ ವ್ಯಕ್ತಿಯ ಸ್ಮಾರಕವನ್ನು ಮಾಡುವದು ಕನ್ನಡಿಗರ ಕರ್ತವ್ಯವಾಗಿದೆ.

ಕವಿಯು ಅಂತಿಮ ಕೃತಿಯಾದ ಈ ಪುರಾಣವನ್ನು ತನ್ನ ಜನ್ಮಪಾವನವಾದಿವ ಭಕ್ತಿಯ ಮೂರುತಿಯಾದ ಕುಮಾರೇಶನಿಗೆ ಅನನ್ಯ ಸೇವೆಯಿಂದ ಅರ್ಪಿಸಿರುವನು. ಈ ವಿಷಯವು ಈ ಪುರಾಣವನ್ನು ಓದುವವರಿಗೆ ವ್ಯಕ್ತವಾಗುವದು. ಪಾವನ ಚರಿತರಾದ ಪೂಜ್ಯರ ಈ ಜೀವನ ಚರಿತ್ರೆಯಲ್ಲಿ ತನ್ನ ಬುದ್ಧಿಸಾಮರ್ಥ್ಯದಿಂದ ಭಕ್ತಿ ಜ್ಞಾನ ವೈರಾಗ್ಯರಸಗಳನ್ನಿಳಿಸಿ ಸಾರವಾದ ಈ ಫಲವನ್ನು ಭಕ್ತರ ಕೈಯಲ್ಲಿ ಕೊಟ್ಟಿರುವನು. ಇದರ ಸಾರವನ್ನು ಸವಿದರೆ ಮಾನವನಿಗೆ ನಿಜವಾಗಿಯೂ ಸ್ವಾರ್ಥತ್ಯಾಗದ ಅರಿವು ಉಂಟಾಗುವದು. ಇಂತಹ ಅಪೂರ್ವವಾದ ಕೃತಿಯನ್ನು ರಚಿಸಿ ಕೊಟ್ಟಿದ್ದಕ್ಕಾಗಿ ಸಂಸ್ಥೆಯು ಕವಿಗಳಿಗೆ ಚಿರಋಣಿಯಾಗಿರುವದು.

ಕವಿಗಳು ಅಪೂರ್ತಿ ಮಾಡಿದ ೨೦ ನೆ ಸಂಧಿಯ ವಿಷಯವನ್ನು ಪಂ. ಹುಕ್ಕೇರಿ ಸದಾಶಿವ ಶಾಸ್ತ್ರಿಗಳು ಮತ್ತು ಪಂ. ಪುಟ್ಟಯ್ಯ ಗವಾಯಿಗಳು ಸುಂದರವಾಗಿ ಪೂರ್ತಿ ಮಾಡಿಕೊಟ್ಟಿದ್ದಾರೆ. ಅದಕ್ಕಾಗಿ ಅವರೀರ್ವ ಕವಿವರ್ಯರಿಗೂ ಗುರುಕುಮಾರನು ಸಕಲ ಸನ್ಮಂಗಲವನ್ನೀಯಲೆಂದು ಹಾರೈಸದಿರೆವು.

ಬಾಗಲುಕೋಟೆಯ ಬಸವೇಶ್ವರಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ ತಿ. ಚೆ. **ನಂದಿಮಠ** ಎಂ. ಎ. ಪಿಎಚ್. ಡಿ. ಅವರು ತಮ್ಮ ಕಾರ್ಯಬಾಹುಳ್ಯದಲ್ಲಿಯೂ ಪುರಾಣದ ತಿಳಿಯಾದ ಸಾರವನ್ನು ತೆಗೆದಿಳಿಸಿ, ಮನೋಹರವಾದ ಮುನ್ನುಡಿ ಯನ್ನು ಬರೆದುಕೊಟ್ಟು ಕವಿಗಳ ಶ್ರಮವನ್ನು ಸಾರ್ಥಕ ಮಾಡಿರುವರು. ಇವರ

ಉಪಕೃತಿಯನ್ನು ಸಂಸ್ಥೆಯು ಸ್ಮರಿಸುವದು. ನವಿಲುಗುಂದ ಗವಿಮಠದ ಶ್ರೀಮ.ನಿ.ಪ್ರ. ಬಸವಲಿಂಗ ಸ್ವಾಮಿಗಳವರು ಈ ಪುರಾಣವನ್ನು ಬರೆಯಲು ಕವಿಗಳಿಗೆ ಪ್ರೇರಣೆಯನ್ನು ಕೊಟ್ಟು ಅದಕ್ಕೆ ಯೋಗ್ಯ ಸಲಹೆಗಳನ್ನಿತ್ತಿರುವರು. ಅದರ ಅಚ್ಚಿಗಾಗಿಯೂ ಹಣವು ಕೂಡುವಂತೆ ಏರ್ಪಡಿಸಿದರು. ಇಲ್ಲಿ ಶ್ರೀ ಗಳವರನ್ನು ಸ್ಮರಿಸದಿರಲಾರೆವು. ಈ ಪುರಾಣದ ಪ್ರಕಟನೆಗಾಗಿ ಕೆಲವು ಮಹಾಸ್ವಾಮಿಗಳೂ ಮತ್ತು ಮಹನೀಯರೂ ಮುಕ್ತಹಸ್ತದಿಂದ ಸಹಾಯ ನೀಡಿದ್ದಾರೆ. ಅವರೆಲ್ಲರ ಹೆಸರುಗಳನ್ನು ಗ್ರಂಥದ ಕೊನೆಯಲ್ಲಿ ಪ್ರಕಟಿಸಲಾಗಿದೆ.

ಶ್ರೀ ಶಿವಯೋಗಮಂದಿರ
ಜಯನಾಮ ಸಂವತ್ಸರ
ಶ್ರಾವಣ ಶು. ೫ ಶಕ ೧೮೭೬



ಶ್ರೀ ಸದಾಶಿವಸ್ವಾಮಿಗಳು
ಹಾನಗಲ್

## ನಿವೇದನೆ

ಪೂಜ್ಯರ ಈ ಪುರಾಣವು ವರುಷಗಳಿಂದಲೂ ಅಚ್ಚುಕೂಟದಲ್ಲಿದ್ದು ಇದೀಗ ‘ಸುಕುಮಾರ’ ಗ್ರಂಥಮಾಲೆಯ ದ್ವಿತೀಯ ಪುಷ್ಪವಾಗಿ ಅರಳುತ್ತಿದೆ. ಅಚ್ಚುಕೂಟದ ಹಲವಾರು ಅನಾನುಕೂಲತೆಗಳ ಮೂಲಕ ಪ್ರಾರಂಭವಾದ ಕಾರ್ಯ ಸರಾಗವಾಗಿ ಸಾಗಲಿಲ್ಲ. ಅನಿರೀಕ್ಷಿತವಾದ ಅನೇಕ ಅಡೆತಡೆಗಳೂ ಬಂದವು. ಈ ಪುರಾಣವನ್ನು ಬರೆಯುವಾಗ ಕವಿಗಳಿಗೂ ಬಹಳ ವಿಘ್ನಗಳು ಬಂದವಂತೆ. ಆತ್ಮಸ್ತುತಿನಿರಪೇಕ್ಷನಾದ ಶ್ರೀ ಕುಮಾರೇಶನ ಪ್ರೇರಣೆಯೇ ಆ ತೆರನಾಗಿರಬಹುದೆ?

ಸಂಸ್ಥೆಯ ಸಂಚಾಲಕರ ಮತ್ತು ಶ್ರೀ. ಮ. ನಿ. ಸದಾಶಿವಮಹಾಸ್ವಾಮಿಗಳು ಹಾನಗಲ್ಲ ಅವರ ಪ್ರೇರಣೆಯಿಂದ ಕಾರ್ಯ ಮುಂದುವರಿದು ಮುಗಿದಿದೆ. ಇದರ ಅಚ್ಚಿನ ಕಾರ್ಯದಲ್ಲಿ ಶ್ರೀ ಸೋಮಶೇಖರದೇವರು ( ಈಗ ರಾಯಚೂರಿನ ಸೋಮವಾರ ಪೇಟೆಮಠದ ಪಟ್ಟಾಧ್ಯಕ್ಷರಾದ ಶ್ರೀ ಮ. ಚ. ರಾಜೋಟಿ ಶಿವಾಚಾರ್ಯ ಸ್ವಾಮಿಗಳು ) ಬಹಳ ನೆರವಾಗಿದ್ದಾರೆ. ಆಶ್ರಮದ ಸಾಧಕರೂ ವಟುಗಳೂ ನೇಹದ ನೆರವಿತ್ತಿದ್ದಾರೆ. ಶ್ರೀ ಸಂ. ವೀ. ಹಂಡಿ ಮಾಸ್ತರರು ಐಹೊಳೆ ಅವರು ಒಪ್ಪೋಲೆಯನ್ನು ಸಿದ್ಧಪಡಿಸುವಲ್ಲಿ ಸಹಕರಿಸಿದ್ದಾರೆ.

ಈ ಪ್ರತಿಯ ಲೋಪ-ದೋಷಗಳನ್ನು ಮುಂದಿನ ಸಂಸ್ಕರಣದಲ್ಲಿ ಸರಿಪಡಿಸಿಕೊಳ್ಳಲಾಗುವದು. ಪೂಜ್ಯರ ಈ ಪುನೀತ ಚರಿತೆಯು ‘ಸುಕುಮಾರ’ ಗ್ರಂಥಮಾಲೆಯ ಮುಂದಿನ ಪ್ರಕಟನೆಗಳಿಗೆ ನಾಂದಿಯಾಗಲೆಂದು ಬಯಸಿ ವಿರಮಿಸುವೆ.

೧೦-೮-೧೯೫೪

ಜಿ. ಎಂ. ಉಮಾಪತಿ ಶಾಸ್ತ್ರಿ ಬಿ. ಎ.

# ವಿಷಯಾನುಕ್ರಮಣಿಕೆ



ಶ್ರೀ ಮನ್ನಿರಂಜನ ಪ್ರಣವಸ್ವರೂಪಿ

**ಲಿಂ. ಶ್ರೀ ಹಾನಗಲ್ಲ ಕುಮಾರ ಮಹಾಸ್ವಾಮಿಗಳವರು**

ಜನನ–ಶಕ ೧೭೮೯ ] ★ [ ಲಿಂಗೈಕ್ಯ–ಶಕ ೧೮೫೨

॥ ಶ್ರೀ ಮದಲ್ಲಮ ಪ್ರಭವೇನಮಃ ॥

# ಹಾನಗಲ್ಲ ಶ್ರೀ ಕುಮಾರೇಶ್ವರ

# ಪುರಾಣ



## ಪೀಠಿಕಾ ಸಂಧಿ



( ವಾರ್ಧಿಕ ಷಟ್ಪದಿ )

ಶ್ರೀ ಗುರು ಪರಂಜ್ಯೋತಿರಾಕಾರ ಪರಮ ಶಿವ-
ಯೋಗಮಂದಿರ ಸಚ್ಚಿದಾನಂದಮಯ ವಿಜಿತ-
ರಾಗ ಲಿಂಗಾಂಗಸಮರಸ ಮಹಾವಿದ್ಯಾವಿಶಾರದ ವಿಶಾಲಭಾವ
ಭೋಗ ಮೋಕ್ಷಪ್ರದಾಯಕ ನಿರಾಭಾರಿ ನಿಗ-
ಮಾಗಮಾ ಭೇದ್ಯ ಹೃದ್ಯಚರಿತ್ರ ಕಾರುಣ್ಯ-
ಸಾಗರ ನಿರಂಜನ ಪ್ರಭುಲಿಂಗ ನಿನ್ನಪದ ಪದ್ಮಕಾನತನಪ್ಪೆನು ॥ ೧ ॥

ಪರಶಿವನೆ ನಿನ್ನ ಚಿತ್ಕಲೆ ರೂಪುಗೊಂಡ ಚರ-
ವರಸಮಯದೊಳು ಪುಟ್ಟಿ ಧರ್ಮದುನ್ನತಿಗಾಗಿ
ಮರೆಯದೆ ನಿಜಾಂಗವಾಜ್ಮಾನಸಗಳಂ ತೆತ್ತ ಶ್ರೀಕುಮಾರಯತೀಂದ್ರನ
ಚರಿತೆಯಂ ಬರೆಯತೊಡಗಿರುವೆನೆಡರಡಸದಿದು
ಪರಿಸಮಾಪ್ತಿಯನೈದಿ ಭಕ್ತರಿಗೆ ಬೇಕೆನಿಸಿ
ನಿರುತಮವರ ಮನಕ್ಕೆ ಶಾಂತಿಗುಡಲೆಂದು ನಿನ್ನಂ ನಂಬಿ ನುತಿಗೈವೆನು ॥ ೧ ॥

ರನ್ನದೊಳು ಬೆಳಗಿರುವ ತೆರದೊಳಭವನೊಳುಳ್ಳ
ನಿನ್ನಸಮ ಚೇಷ್ಟೆಯಿಂದೀಶ್ವರಂ ಜಗಮಾಗಿ
ಭಿನ್ನಭಿನ್ನಾಭಿಧಾನಾಕೃತಿಗಳಂ ತಳೆದು ಶೋಭಿಪಂತೀ ಚರಿತೆಯು
ಸನ್ನುತವಿಶೇಷ ಶಿವಧರ್ಮವಿಷಯಂಗಳಿಂ
ಚೆನ್ನಾಗಿ ಮೆರೆಯಲೆಸಗುವ ಮತಿಯನೆನಗಿತ್ತು
ಮನ್ನಿಸೌ ಕರುಣದಿಂ ಚಿತ್ಕ್ರಿಯಾಶಕ್ತಿ ನಿನಗಾನಾಶ್ರಿತಂ ನೆನೆವೆನು ॥ ೨ ॥

ಪರಮವೇಧಾಮನುಕ್ರಿಯೆಗಳಿಂ ವೀರಶೈ-
ವರ ಪಶುತ್ವವ ಕೆಡಿಸಿ ಸುಖಮಯ ಶಿವತ್ವಮಂ
ಕರುಣಿಸಿದ ರೇಣುಕಾಚಾರ್ಯಾದಿ ಪಂಚಪೀಠಾಧಿಕಾರಿಗಳೆನ್ನಯ
ಗುರುವಿರಕ್ತರ ಚರಣಕೃಪೆಗಾಗಿ ಹೋರಾಡು-
ತಿರುವಖಿಲ ಸುಕೃತಿಗಳ ವಿಕ್ಷೇಪ ದೋಷವದು
ಸರಿವಂತೆ ಮಾಳ್ಕೀ ಪುರಾಣದಿಂದೆಂದನಂತ ಪ್ರಣಾಮಂ ಗೈವೆನು ॥ ೪ ॥

ಆವ ಮಹಿಮನ ಚರಿತೆಯಂ ಬರೆಯತೊಡಗಿರುವೆ-
ನಾ ವಿರಾಟ್ಪುರ ಸದಾಶಿವಮಹಾದಿವ್ಯ ಚರ-
ದೇವನಿಂ ಕೆಲ ಶಾಸ್ತ್ರವಿಷಯಮಂ ತಿಳಿದಿರ್ಪೆನಾತನಾಚರಣೆಗಳನು
ಪಾವನ ವಿಚಾರಘನಸಾಮರ್ಥ್ಯಮಂ ಸ್ವಮತ-
ಸೇವಾಧುರೀಣತ್ವಮಂ ವಿರತಿಯಂ ಶುದ್ಧ-
ಭಾವಾತ್ಮಸಂಯಮನ ಧೈರ್ಯಪ್ರಯತ್ನಾದಿ ಸುಗುಣಮಂ ಬಲ್ಲೆನಿನ್ನು ॥ ೫ ॥

ಆತನೊಡನಾಡಿಗಳ ಮುಖದಿಂದ ಕೇಳಿಮೇ-
ಣಾತನಲ್ಲಲ್ಲಿ ಬರಿಸಿದ ವಿಷಯಮಂ ನೋಡಿ
ಪ್ರೀತಿಯಿಂದಾ ಮಹಾತ್ಮಂ ಮಾಡಿ ಮಾಡಿಸಿದ ಸಕಲ ಕಾರ್ಯಕಲಾಪದ
ರೀತಿಯಂ ತಿಳಿದಾತನುದ್ಯನ್ನಿಜ ಸ್ಥಿತಿಗೆ
ಸೋತು ಮಾರಿರುವೆನೆನ್ನೀ ಲೇಖನಿಯನಃ ಧಾ-
ತ್ರೀತಳದೊಳಿದಕೆ ಗುರುದಾರುಕಾಲ್ಲಮ ಬಸವಮುಖ್ಯಪ್ರಮಥರೆ ಸಾಕ್ಷಿ ॥ ೬ ॥

ಇತಿಹಾಸಗಳನಾರ್ಷಮಾಗಿ ಬರೆದಿಡುವ ಪ-
ದ್ಧತಿಯಲ್ಲಿ ಮುಂದುವರಿದೆಲ್ಲ ದಿಶೆಗಳೊಳು ಸ-
ನ್ನುತ ಕೀರ್ತಿವೆತ್ತ ಭಾರತದೊಳುದಿಸಿರ್ಪನಗೆ ಪೊರತಲ್ಲವೀ ಕಾರ್ಯವು
ಯತಿರಾಜನೆನಿಸಿ ತನ್ನಯ ಜೀವನವನೆಮ್ಮ
ಮತಸೇವೆಗೊಲಿದಿತ್ತು ಧರ್ಮವ ಸುಧಾರಿಸಿದ
ಪತಿತಪಾವನ ಕುಮಾರನ ಚರಿತ್ರವ ಬರೆವುದೆನ್ನ ಕರ್ತವ್ಯವಲ್ತೇ ॥ ೭ ॥

ಖಲಜನರು ಪಳಿವನಿತು ನಾನು ಪಾಮರನಲ್ಲ
ಗೆಳೆಯರಿಂಪೆನೆ ಪೊಗಳುವನಿತು ಪಂಡಿತನಲ್ಲ
ಪಳಿನ.ತಿಗಳಿಗೆ ಕುಗ್ಗದುಬ್ಬದರಿತವರೆಲ್ಲ ಸುಶ್ಲಾಘ್ಯವೆಂದು ಕಂಡು
ತಿಳಿಸಿ ಪೇಳಿದ ವಿಷಯಗಳನೊಪ್ಪಿ ಸಂಗ್ರಹಿಸಿ
ಕಳೆದುಂಬುವಂತೆ ಲೋಕಹಿತಾರ್ಥವಾಗಿ ನಾ-
ನೊಲಿದು ಬರೆವೆನು ಕೀರ್ತಿಮನ್ನಿಸೆಗಳಂ ಬಯಸದೀ ತಿರುಳುಗನ್ನಡದೊಳು ॥ ೮ ॥

ತುಡುಗರೆಸಗಿದ ದೋಷಮದು ಮೂರು ತಲೆಯುನಕ
ಬಿಡದು ಕವಿಕಾವ್ಯದೊಳು ನೆಗಳ್ದ ದೋಷಂ ಮುಂದೆ
ಕೆಡದಿಹುದು ನೂರುತಲೆಯನ್ನವೆಂಮೊರೆವ ನಾಣ್ನುಡಿಗಂಜದುತ್ಸಾಹವೆ
ನ್ನೊಡಗಣೇಂಪ್ರರ ಗಡಣವೆನ್ನ ರಸನೆಯೊಳಿರ್ದು
ನುಡಿಸಬೇಕೆಂದವರ ಚರಣ ಕಮಲಗಳಿಗವಿ-
ದಿಡುವೆ ಸತಿಧೈರ್ಯವಿಶ್ವಾಸಭಕ್ತಿಗಳಿಂದ ಮತ್ಪರಮದೈವಮೆಂದು ॥ ೯ ॥

ಹಲವು ಜೀವರ ಬಸುರೊಳುದಿಸುತಳಿವುತ ಕಷ್ಟ-
ಜಲಧಿಯೊಳು ಜಗದಾಡಿಯೀಪೆನ್ನೆಬಳಪುಟುತ
ಮುಳುಗಾಡಲಾರವಾಸತ್ತಾವ ಜನ್ಮಗಳ ಪುಣ್ಯವೋ ಶಿವಶರಣರ
ಬಳಗದುತ್ತಮ ಸೇವೆಯೆನಗೆ ದೊರೆದಿಹುದಿದರ
ಫಲಮೆನ್ನ ಕಾವ್ಯಕ್ಕೆ ಮೂಗುಮುರಿವವರ ಮನ-
ದೊಳು ಪ್ರೇಮಮುದಿಪಂತೊಡರ್ಚುಗೀಶ್ವರನವರಿಗಾಭಾರಿಯುಪ್ಪೆ ನಾನು ॥ ೧೦ ॥

ಇದು ರಸಿಕನೂದ ಕಾದಂಬರಿಯ ಕತೆಯಲ್ಲ-
ವಿದು ಕಲಿಗಳಿತಿಹಾಸಮಲ್ಲ ಕಲ್ಪಿತವಲ್ಲ-
ವಿದರೊಳಪ್ರಾಸಂಗಿಕಾಸಂಭವಾಸತ್ಯದೋಷ ವಿಷಯಂಗಳಿಲ್ಲ
ಪುದಿದ ಮಾಯಾ ಮೋಹ ಮೋಸದಿಂ ಕಂಗೆಟ್ಟು
ಕುದಿವ ಮಾನವರನೆಚ್ಚರಿಸಿ ಪಾಲಿಸಲುಳ್ಳ
ಸದಮಲ ಜ್ಞಾನ ವೈರಾಗ್ಯ ಭಕ್ತಿಗಳ ಸೊಂಪಿನ ಸುಗ್ಗಿ ಬಗೆಗೊಳಿಪುದು ॥ ೧೧ ॥

ಶೃಂಗಾರ ಕೊಪ್ಪದವನೀ ಪುರಾಣದೊಳಾ ಚಿ-
ದಂಗನಾಶೃಂಗಾರಮಲ್ಲದತನು ವಿಲಾಸ
ಶೃಂಗಾರಮಿಲ್ಲಮಶ್ಲೀಲ ವಿರಸ ಪದಾರ್ಥತಾತ್ವಿಕ ವಿಭಂಗಮಿಲ್ಲ
ಕಂಗೆಡಿಪ ಕರ್ಮಗಳ ಕಾಲಾಟಮಿಲ್ಲ ಭೋ-
ಗಂಗಳಿಗೆ ಬಾಯನೀರ್ಗರಿಪ ಬೋಧಮಡಿಲ್ಲ
ಜಂಗಮೇತರ ದೈವಮೆಂಬುದೊಂದಿನಿಸಿಲ್ಲ ಕ್ಲಿಷ್ಟಶಬ್ದಂಗಳಿಲ್ಲ ॥ ೧೨ ॥

ಮನವೊಲಿಯೆ ಶಬ್ದಪ್ರಧಾನದಿಂ ರಾಜಶಾ-
ಸನದಂತೆ ವಿಧಿನಿಷೇಧಂಗಳಂ ಸೂಚಿಪುದು
ವಿಸುತ ವಿಹಿತಾರ್ಥಪ್ರಧಾನದಿಂದಂ ಕಥಾಪೂರ್ವಕಂ ಮಿತ್ರನಂತೆ
ಘನತರದ ನೀತಿಯನು ಬೋಧಿಪುದು ಕಾಂತೆಯಂ-
ತನುಪಮ ರಸಪ್ರಧಾನದಿನಖಿಲಜನಮನಗ-
ಳನು ಧರ್ಮದಲ್ಲಿ ನಲಿದಾಡಿಪುದು ಶಿವಶರಣ ಕರುಣದಿಂದೀ ಕಾವ್ಯವು ॥ ೧೩ ॥

ಕನ್ನಡಮ್ಮನ ಮಕ್ಕಳಾದೆಮಗೆ ಹೆಮ್ಮೆಯಿಂ
ಕನ್ನಡದ ಭಾಷೆಯಂ ಬೆಳಸುವದೆ ಭೂಷಣಂ
ಕನ್ನಡಕೆ ಮನ್ನಣೆಯನೆಸಗದವನಧಮನೆಂಬುದರಿಂದ ರಚಿಸಿದೆನ್ನ
ಕನ್ನಡದ ಕಬ್ಬದೊಳಗೊಪ್ಪಿರಲಿ ತಪ್ಪಿರಲಿ
ಕನ್ನಡದ ಸೇವೆಯಂ ಮಾಡಿದುತ್ಸಾಹ ದಿಂ-
ದೆನ್ನ ಮಾನಸಕಾಗದೇ ಕ್ಷಮಿಸಿ ನಲಿಯರೇ ಕರುನಾಡ ಜಾಣರೆಲ್ಲ ॥ ೧೪ ॥

ಬಸವಣ್ಣ-ನೀಲಮಾಂಬೆಯರಂತೆ ಚೆಂದಮೆನೆ
ಬಸವಾರ್ಯ-ನೀಲಮ್ಮಾಂಬೆಯರೆಂಬ ಪೆಸರುಳ್ಳ
ಮಿಸುಪ ದಂಪತಿಗಳೊಳು ಪುಟ್ಟ ಶಿವಯೋಗಿಯಾದೀ ಕುಮಾರನ ಚರಿತೆಯ
ಒಸೆದು ಬರೆವೆನು ಬಸವನೀಲಮಾಂಬೆಯರೊಳುದ-
ಯಿಸಿದ ಚೆನ್ನಕವೀಂದ್ರನೆಂಬ ಮಾಹೇಶ್ವರಂ
ರಸಿಕಾನುರಾಗಿ ಗುರುವಂಶಚರಸೇವಕಂ ದ್ಯಾಂಪುರ ನಿವಾಸಿ ನಾನು ॥ ೫ ॥

ವಿಲಸದಷ್ಟಾವರಣಸಂಪನ್ನರೀ ಗ್ರಂಥ-
ಕೆಳೆಯೊಳಧಿಕಾರಿಗಳು ಲಿಂಗಾಂಗಸಮರಸವೆ
ತಿಳಿಯೆ ವಿಷಯಂ ಗ್ರಂಥವಿಷಯಗಳೊಳುಳ್ಳಸಮ್ಮೇಲನವೆ ಸಂಬಂಧವು
ಸುಲಲಿತಾನಂದಮಯ ಮೋಕ್ಷವೆ ಪ್ರಯೋಜನಂ
ಬೆಳಗುದಿಂತನುಬಂಧಗಳನಾಂತು ಮೆರೆವ ನಿ-
ಸ್ತುಲ ಮಹಾಗ್ರಂಥಕ್ಕೆ ಶ್ರೀ ವಿರಾಟ್ಪುರ ಕುಮಾರ ಚರೇಂದ್ರನಧಿದೈವನು ॥ ೧೬ ॥

ಬಸವೇಶ್ವರನ ಭಕ್ತಿ ಚೆನ್ನಬಸವಣ್ಣನರಿ-
ವಸಮಾಲ್ಲಮಪ್ರಭುವಿನುತ್ತಮವಿರಾಗತ್ವ-
ವೆಸೆವ ಮಡಿವಾಳತಂದೆಗಳ ಸುವಿಚಾರವೆಮ್ಮೀ ಚರಿತ್ರಾಧಿಪನೊಳು
ನಿಸದಮೆಡೆಗೊಂಡಿರ್ದವಿವನಿರ್ದ ತಾಣವೇ
ಪಸುಪಾನುಭವಮಂಟಪಂ ತಿಳಿಯಲನುಭಾವ-
ಕುಶಲನಿವನೀ ಚರಿತ್ರಂ ನಿಖಿಲಸಂಘಶರಣಾನುಭವಭಾಂಡಾರವು ॥ ೧೭ ॥

ಅಂತು ಪೀಠಿಕಾಸಂಧಿ ಸಮಾಪ್ತ ಶಿವಂ

॥ ಶ್ರೀ ಮತೇ ಶಿವಾಯ ನಮಃ ॥



# ಎರಡನೆಯ ಸಂಧಿ ಪ್ರಾರಂಭ





ಸೂಚನೆ:–

ಪರತರವಿರಾಟ್ಪುರ ಕುಮಾರೇಶಚರಿತಂ
ಮೆರೆವುತಿಹ ಜೋಯಿಸರ ಹರಳಹಳ್ಳಿಯೆನಿಪ್ಪ
ಕಿರಿಯ ಪಳ್ಳಿಯ ಮಠದೊಳುದಯವಾದಂ ಶುದ್ಧಮಾಹೇಶ್ವರಾನ್ವಯದೊಳು ॥

ಸದಮಲಾಚಾರಂಗಳಿಂದ ತನುಕರಣಗಳು
ಹದಕೆ ಬರುತಿಹವಾ ಶಿವಾನುಭವ ಶಾಂತಿಯೀ-
ಹದವಾದ ಕಾಯಕರಣಗಳೊಳುದಿಪುದು ಮನಕೆ ಬಂದಂತೆ ನಡೆವೆನೆನಗೆ
ಮೊದಲು ದಯಪಾಲಿಸೊಲವಿಂ ಸದಾಚಾರಮಂ
ಮದನಹರ ನೀನಲ್ಲದಾರಾರುಗತಿಯಿಲ್ಲ
ಹೃದಯಪೂರ್ವಕವಾಗಿ ಸೆರೆಗೊಡ್ಡಿ ಬೇಡುವೆನು ಕಾತ್ಯಾಯನೀವಲ್ಲಭ ॥ ೧ ॥

ಆವೆಮ್ಮ ತಾಯನಾಡನು ಗಂಗ ಚಾಲುಕ್ಯ-
ರಾ ವಿಜಯನಗರದರಸರ್ಕದಂಬರು ವೀರ-
ಶೈವ ವಿಕ್ರಮರಾದ ಕೆಳದಿಯೆರೆಯರು ಹೊಯ್ಸಳರು ರಾಷ್ಟ್ರಕೂಟರಿನ್ನು
ಶ್ರೀ ವಿಭೂತ್ತಮರೆನಿಪ ಮೈಸೂರುಕೊಡಗುಗಳ
ಭೂವರರು ಪದೆದಾಳ್ದರಿದೆ ಕನ್ನಡದ ಸೀಮೆ-
ಯಾವಗಂ ನೆಗಳ್ತೆವಡೆದೆಸೆವುದೀ ಭಾರತದೊಳತುಲ ಪ್ರಭಾವದಿಂದ ॥ ೨ ॥

ಬಸವಾಲ್ಲಮಪ್ರಭುಗಳಂ ಕೇತಿದೇವನಂ
ಮಿಸುಪ ರೇವಣಸಿದ್ಧನಂ ಭೀಮನಂ ಚೆನ್ನ-
ಬಸವನಂ ಘನ ಸಿದ್ಧರಾಮೇಶನಂ ಕಿನ್ನರಯ್ಯನಂ ಮಾದೇವಿಯ
ಹೊಸಬರೆನಿಸಿದ ಷಡಕ್ಷರ ವಿರೂಪಾಕ್ಷರಂ
ಕುಶಲರಂ ಪೆರ್ಚಿಸಿದ ಕರಡೀಶನಂ ಪೆತ್ತು
ಪೆಸರಾದ ನಮ್ಮ ಪರಿಶುದ್ಧ ಕರ್ನಾಟಕಾಂಬೆಯೆ ಪುಣ್ಯವತಿಯೆನಿಪಳು ॥ ೩ ॥

ಘನಮತಾರ್ಯರಂ ಬಾಲಲೀಲಾಮಹಾಂತ ಚಿ-
ದ್ಘನಚರೇಂದ್ರಂ ಸರ್ಪಭೂಷಣಸ್ವಾಮಿ ಮು-
ಪ್ಪಿನ ಷಡಕ್ಷರ ಮಹಾಶಿವಯೋಗಿ ಸರ್ವಜ್ಞ ಕವಿಸುರಂಗಾಭಿಧಾನಿ
ವಿನುತ ನಿಜಗುಣ ಹರಿಹರಾದ್ಯಖಿಲ ಪುಣ್ಯ ಪಾ-
ವನ ಮೂರ್ತಿಗಳು ಪುಟ್ಟೆ ಪೆತ್ತ ತಾಯ್ಗಳ ಗರ್ಭ-
ವನು ತಣ್ಪುಗೈದು ಧರ್ಮವ ಸುಧಾರಿಸಿದರೆಮ್ಮೀನಾಡೊಳಧಿಕರೆನಿಸಿ ॥ ೪ ॥

ಹೊಳೆಕಾಲುವೆಗಳಿಂದ ತಾವರೆಗೊಳಂಗಳಿಂ
ಫಲಕುಸುಮ ತರುಲತಾಗುಲ್ಮಂಗಳಿಂ ಬೆಳೆವ
ಪೊಲಗಳಿಂ ಗಿರಿ-ಗುಹಾ ಸುಕ್ಷೇತ್ರ-ತೀರ್ಥಂಗಳಿಂ ಶಿಲ್ಪಕಲೆಗಳೆಸೆವ
ಪಲವು ಗುಡಿ ಗೋಪುರಗಳಿಂ ಪುರಗಳಿಂ ಬಿಜ್ಜೆ-
ಗಳ ಪೆರ್ಮೆಯಿಂದ ಕೃಷಿ ವಾಣಿಜ್ಯ ವಿಭವದಿಂ-
ದಲಘುದರ್ಶನ ಮತಗಳಿಂ ದಾನಧರ್ಮದಿಂ ಮೆರೆವ ಕರ್ನಾಟಕದೊಳು ॥ ೫ ॥

ಧಾರವಾಡದ ಪ್ರಾಂತಕೊಳಗಾದ ರಾಣೆಬೆ-
ನ್ನೂರ ಭಾಗದೆ ಜೋಯಿಸರ ಹರಳಹಳ್ಳಿಯೆಂ-
ಬೂರಿರ್ಪುದಲ್ಲಿ ಸಾಲಿಯ ಮಠವೆನಿಪ್ಪೊಂದು ವೃಷ್ಟಿಸೂತ್ರಕೆ ಸೇರಿದ
ವೀರಮಾಹೇಶ್ವರ ಗುರುಸ್ಥಾನಮುಂಟವಕೆ
ನೂರಾರು ವರ್ಷಗಳ ಹಿಂದೊಡೆಯನಾಗಿ ಕೋ-
ಟ್ಟೂರ ಬಸವಾಭಿಧಾನದ ಗೃಹಸ್ಥ ಗಣೇಂದ್ರನಿರ್ದನತಿ ಸಭ್ಯನೆನಿಸಿ ॥ ೬ ॥

ಆತಂಗೆ ಬಸವಾರ್ಯನೆಂಬೋರ್ವ ವಿಮಲ ತನು-
ಜಾತನಿರ್ದನವಂಗದೇ ಭಾಗದೊಳಗುಳ್ಳ
ಖ್ಯಾತಿವಡೆದೆಸೆವ ಲಿಂಗದಹಳ್ಳಿಯೆಂಬೂರ ಹಿರಿಯಮಠದೊಳು ಜನಿಸಿದ
ನೀತಿಯುತೆಯಾದ ನೀಲಮ್ಮನೆಂಬೋರ್ವ ಪರಿ-
ಪೂತ ಕನ್ಯೆಯ ತಂದು ಮದುವೆಯಂ ಮಾಡಿದಂ
ತಾತನೀ ದಂಪತಿಗಳನ್ಯೋನ್ಯಪರವಶಾನುರಾಗದಿಂದಿರುತಿರ್ದರು ॥ ೭ ॥

ಲಿಂಗಪೂಜಾತತ್ಪರರ್ಸದಾಚಾರಿಗಳು
ಜಂಗಮಾರಾಧಕರ್ಗುರುಚರಣಸೇವಕರು
ಭಂಗಿತಾಂಗೋದ್ಭವ ಧ್ಯಾನಮಗ್ನರ್ಸತ್ಯವಾದಿಗಳು ನೀತಿವಿದರು
ಮಂಗಲಾತ್ಮರ್ಸಮಾಧಾನಿಗಳು ಶಿವಶರಣ-
ಸಂಗಿಗಳು ಭಸ್ಮ ರುದ್ರಾಕ್ಷಮಾಲಾ ಭೂಷಿ-
ತಾಂಗಿಗಳು ಪ್ರಮಥ ಲೀಲಾಶ್ರವಣಮೋಹಿಗಳು ಸತತಮೀ ದಂಪತಿಗಳು ॥ ೮ ॥

ಮಾವನಂ ದೇವರಂದದೆ ತಿಳಿದು ನೀಲಮ್ಮ-
ನಾವಗಂ ಸತ್ಕರಿಸಿದಳು ಭಕ್ತಿಯಿಂದ ಪಿತೃ-
ಸೇವೆಯೇ ಜೀವನದ ಮೇಲ್ಮೆಯೆಂದಾಚರಿಸುತಿರ್ದನಾ ಬಸವಾರ್ಯನು
ಏನೇಳ್ವುದೀ ಸಾಧುಸಂಸಾರಿಗಳಿಗೊಂದ-
ತೀವದಾರಿದ್ರ್ಯಮಡಸಿರ್ದುದದಕವರು ನಿಜ-
ಭಾವದೊಳು ಬೆದರಲಿಲ್ಲಿಮು ಲಿಂಗದಿಚ್ಛೆಯೆಂತತಿ ಧೈರ್ಯದಿಂದಿರ್ದರು ॥ ೯ ॥

ಗುಣಿಗಳಂ ಜಾಣರಂ ಬಲ್ಲುದೇ ಬಡತನಂ
ಗುಣವಿಲ್ಲದವರಿಗುದ್ಯೋಗಿಗಳಿಗಗವುದಿದು
ಗುಣಿ ಬುಧರ ಮೇಲೇರಿ ಬಂದು ನಾಣ್ಬೆದರಿಕೆಗಳಿಲ್ಲದಳಲಿಸುತಿರುವಡು
ಗುಣಹೀನರಂ ಬಿಟ್ಟು ಗುಣಿಗಳಿಗೆ ಜೋಡಾಗಿ
ದಣಿಸುವೀ-ಬಡತನವನೊಳಕೊಂಡ ವಿಶ್ವದೊಳ
ಗಣಿಯರವಿದರ ಸಂಗವಿರದೊಡೆ ಜಗಜ್ಜನಕಗಪಕೀರ್ತಿಯಲ್ತೆ ತಿಳಿಯೆ ‖ ೧೦ ‖

ಬಡತನಕೆ ಸೊಪ್ಪು ಹಾಕದೆ ದುಡಿವ ಮಾನವನೆ
ಪೊಡವಿಯೊಳು ವಿಕ್ರಮಂ ಪರಮಸುಖಿ ಸುವಿಚಾರಿ
ಕಡುಸರಳ ಸಮಭಾವಿ ಯೀತನೆ ಜಗತ್ಪಾಲಕನ ಕೃಪೆಗೆ ಪಾತ್ರನಹನು
ಅಡಸಿದಾಪತ್ತಿಗೆದೆಗೆಡದೆ ದಂಪತಿಗಳತಿ-
ಸಡಗರದ ಶಾಂತಮನಸರಾಗಿ ಬಾಳುತ್ತಮಿರೆ
ಪಡೆದಳೀ-ನೀಲಾಂಬೆ ಶಿವಬಸವನೆಂಬೋರ್ವ ಸುಕುಮಾರನಂ ಮುದದೊಳು ‖ ೧೧ ‖

ಎಳೆಯನಂ ಪಾಲಿಸುತ ಲಾಲಿಸುತ ಸುಖದೊಳಿರೆ
ಕೆಲದಿನಂ ಪೋಗೆ ಮುಂದೊಂದು ದಿನಮಿಳಿಯಿರುಳಿ-
ನೊಳಗೋರ್ವ ಜಂಗಮಂ ನೀಲಾಂಬಿಕೆಯ ಕನಸಿನೊಳು ಬಂದು ಪರಿಮಳಿಸುವ
ಚೆಲುವಲರನೊಂದನೊಲವಿಂದವಳ ಕರದೊಳಿ-
ಟ್ಟಿಲೆ ಮಗಳೆ ನೀನಿದಂ ಕೊಂಡು ನನಗೋರ್ವ ವಟು-
ತಿಲಕನಂ ಕೊಡು ಭಕ್ತಿಯಿಂದೆನಲವಂ ಕೇಳ್ದು ತನ್ಮಹಾಸಾಧ್ವಿ ಮಣಿದು ‖ ೧೨ ‖

ಕೊಡುವೆನೈ ಮಹಸೀಯ ಮತ್ತೋರ್ವ ಪುತ್ರನಂ
ಪಡೆದಡವನಂ ತಪ್ಪೆನಾನೆಂದು ಪೇಳ್ವನಿತ-
ಕೊಡನವಳ್ಗೆಚ್ಚರಾದುದು ಮುಂದೆ ಗರ್ಭಮಂ ತಳೆದಳಲ್ಪಾವಧಿಯೊಳು
ಬಿಡದೆಂಟನೆಯ ತಿಂಗಳೊಳು ತವರ್ಮನೆಯವರು
ಕಡು ಮಮತೆಯಿಂದ ಜನನೋತ್ಸವಕೆ ಕರೆದೊಯ್ದು-
ರುಡುಪಧರನಂ ಜಾನಿಸುತ್ತಿರ್ದಳಲ್ಲಿ ಲಿಂಗದ ಹಳ್ಳಿಯೊಳು ಸುಖದೊಳು ‖ ೧೩ ‖

2

ಒಂಪುದಿನಮಾಪೂರ ಬಳಿಯಸಂದೀಹಳ್ಳಿ-
ಗಂದಮೆಸೆ ನಂದಿಕೇಶ್ವರನ ಯಾತ್ರೋತ್ಸವ-
ಕ್ಕೆಂದು ಪೋಪಳು ಬಳಗದೊಡನಲ್ಲಿ ತೇರೆಳೆಯಲಾರಂಭವಾಗ ಲಾಗ
ಪುಂದಿಯಲ್ಲರು ಜಯನಮಃಪಾರ್ವತೀಪತೇ
ಎಂದು ಚಪ್ಪಾಳೆಗಳನಿಟ್ಟಪರು ಕಲಶಕ್ಕೆ
ಮುಂದುವರಿದೊಗೆಯಲಾದರು ಪಣ್ಣು ಕರ್ಜೂರಜೆಂಡುಬತ್ತಾಸುಗಳನು ॥ ೧೪ ॥

ಕೆಲದೊಳೀಕ್ಷಿಸುತ ನಿಂದಿರ್ದ ನೀಲಮ್ಮನುಡಿ-
ಯೊಳಗೊಂದು ಕರ್ಜೂರವದರ ಶಿಖರಕೆ ಬಡಿದು
ಬಲುಹಿನಿಂದಂಪಾರ್ದು ಬೀಳಲೊಡನವಳು ಪುಳುಕಿತಳಾಗುತೊತ್ತಿ ಪಿಡಿದು
ನಲುವಿಂದಮಂ ಮನೆಗೆ ತಂದುಮಿಂದಿಷ್ಟಮಂ
ಸಲಿಸಮರ್ಪಿಸಿ ಧ್ಯಾನಪೂರ್ವಕಂ ಸೇವಿಸಿದ-
ಳಲಘುಸುಪ್ರಮಥಪ್ರಸಾದಭಾವದೆ ನಂಬಿಮುಂದೆರಳ್ತಿಂಗಳಲ್ಲಿ ॥ ೧೫ ॥

ಶಾಲವಾಹನ ಶಕದ ಪದಿನೇಳುನೂರರಾ-
ಮೇಲಿನೆಂಬತ್ತರೊಂಬತ್ತನೆಯ ಗಣನೆಗುರಿ
ಮೇಳಮಾದಾ ಪ್ರಭವನಾಮ ಸಂವತ್ಸರದ ಭಾದ್ರಪದ ಸಿತಪಕ್ಷದ
ಶ್ರೀಲತ್ರಯೋದಶೀಬ್ರಾಹ್ಮೀಮುಹೂರ್ತದೊಳು
ಭಾಳಾಕ್ಷನೊಲವಿನೀ-ಸುಕುಮಾರಕಂ ಶರಣ
ಜಾಲಮುತ್ಸವಿಸೆ ಲಿಂಗದ ಹಳ್ಳಿಯೆಂಬೂರೊಳುದಯಮಾದಂ ಮಠದೊಳು ॥ ೧೬ ॥

ದಿವಸೇಶ್ವರೋದಯಕೆ ಬುಧವಾರಮಿರ್ದತ್ತು
ಶ್ರವಣಾತೃತೀಯ ಚರಣದೆ ಕರ್ಕಲಗ್ನದೊಳ
ಗವತರಿಸಿದುದರಿಂದಮೆರಡನೆಯ ಸೂರ್ಯಬುಧ ಶುಕ್ರರಾಹುಗಳು ಮತ್ತೆ
ತವೆ ಮೂರನೆಯ ಕುಜಂ ನಾಲ್ಕನೆಯ ಮಂದನು-
ತ್ಸವದೇಳನೆಯ ಚಂದ್ರನೆಂಟನೆಯ ಗುರುಕೇತು
ಕವಿದಿರ್ಕುಮಿಂತು ಗ್ರಹಗಳ್ಜನ್ಮಕುಂಡಲಿಯೊಳಾಗ ಗುರುವಕ್ರನಿಹನು ॥ ೧೭ ॥

ಮನೆಯ ಸಾರಣೆಕಾರಣಿಗಳಿಂದಲಂಕರಿಸಿ
ಜನಿಸಿದರ್ಭಕನಿಗನುಪಮ ಲಿಂಗಸಂಸ್ಕಾರ-
ವನು ಮಾಡಿಸುವುದೆಂದು ಮಾಹೇಶನಂ ಕರೆಯಕಳಿಸಲನಿತರೊಳು ಮುದಿ
ನಿನುತ ವೃದ್ಧಗಣೇಂದ್ರನೋರ್ವನೈತಂದನೀ-
ಮನೆಗೆ ಧಾನ್ಯದಭಿಕ್ಷೆಗಾತನಂ ಕೂರ್ತೋರ್ವ
ವನಿತೆಯೋ ಸ್ವಾಮಿ ಪೆತ್ತಿಹರೆಂದು ನಿಮಗೆ ನೀಡುವದಿಲ್ಲವಾನೆಂದಳು ॥ ೧೮ ॥

ಮಾತೆ ಪೇಳೇನುಹಡದಿಹರೆಂದು ಗಣನಾಥ-
ನೋತು ಬೆಸಗೊಳಲವಳು ಗಂಡುಗೂಸೆಂಮುಸುರ-
ಲಾತನಚ್ಚರಿಗೊಂಡಿದೇನಮ್ಮ ಗಂಡುಜನಿಸಿದೊಡೆ ಸಂತೋಷದಿಂದ
ಖ್ಯಾತಿಮಿಗೆ ಸಕ್ಕರೆಯ ಹಂಚುವರು ಬಡವರಿಗೆ
ಸಾತಿಶಯಮೆನೆ ದಾನಮಂ ಮಾಳ್ಪರಿಂತಿರ್ದು-
ಮೇತಕೆನಗೊಂದು ಹಿಡಿಜೋಳಮಂ ಕೇಳ್ದೊಡಿಲ್ಲೆಂಬೆ ಧರ್ಮವಿದಾವುದು ॥ ೧೯ ॥

ನೀವಾರು ನಾವಾರು ನೀಂಮಾಹೇಶರೊಳ-
ಗೀ ವಿಚಾರಂ ತಕ್ಕುದಲ್ಲೆಂದವಂ ನುಡಿಯು-
ಲಾವನಿತೆಯಪ್ಪ ಕೇಳ್ ಶ್ರೀಮಂತ ಸರದಾರರಿಗೆ ಮಕ್ಕಳೇ ಕಡಿಮೆಯು
ಈವರುರೆದಾನಮಂ ಮಕ್ಕಳಾದೊಡಮವರು
ನಾವೊಲ್ಲೆನೆಂದಡುಂ ಮಕ್ಕಳುದಿಸುತ್ತಿಹರು
ನೀವೇನುಬಲ್ಲಿರೈ ಬಡವರಿಗೆ ಗೋಳಾಟವಲ್ಲವೇ ? ಮಕ್ಕಳಿಂದ ॥ ೨೦ ॥

ದಾನದಿಂ ಮನೆತುಂಬ ಮಕ್ಕಳಾಗುವರೆಂದು
ನಾನಂಜಿ ನಿಮಗೆ ನೀಡುವದಿಲ್ಲವೆಂದೆನೆಂ-
ದಾನಾರಿ ನಗುತಾಡಲಪ್ಪ ಮಕ್ಕಳುನಿಮಗೆ ಪೆರ್ಚಿರ್ದೊಡಿಂದುದಿಸಿದ
ಸೂನುವಿನನಾದಡುಂ ಕೊಟ್ಟುಬಿಡಿಮೆಂದವಂ
ಸಾನುರಾಗದೊಳುಸುರಲಾರೊಲ್ಲೆನೆಂಬರೈ
ನೀನೆಕೊಂಡೊಯ್ದೀವ ನನ್ನೊಡೆಯ ಕೊಡುವೆನೆಂದವಳು ಹಾಸ್ಯಂ ಗೈದಳು ॥ ೨೧ ॥

ತನುಜೋದಯಂ ಕೆಲಂಬರ್ಗೆ ಸುಖವಾಗಿ ಕೆಲ-
ಜನಗಳಿಗುದಾಸೀನವಾಗಿ ಕೆಲಕೆಲಜನರ-
ಮನಕೊಲ್ಲದಾಗಿ ಕಾಣ್ಬುದರಿಂದ ಪುತ್ರಾದಿಗಳೊಳು ಸುಖವಿಲ್ಲ ಸುಖವು
ಮನವನವಲಂಬಿಸಿರ್ಪುದು ನಯಾಯಿಕರಮತ-
ವನುಕೂಲವೇದನೀಯಂ ಸುಖಮೆನುತ್ತಿಹುದು
ಮನಸಿನರುವಿನೊಳು ಸುಖದುಃಖಂಗಳಿಹವೆಂದು ಬಗೆದವಂ ನಸುನಗುತ್ತ ॥ ೨೨ ॥

ಹಾಗೆಯಾಗಲಿ ಎಂದುಪೇಳ್ದು ನಿಲ್ಲದೆ ಮಗುಳ್ದ-
ನಾ ಗಣೇಶ್ವರನಿಂತು ಭವಿತವ್ಯ ಸೂಚನೆಯ-
ವಾಗಿರ್ಪುದೆಂದದಂತಿರಲಿದು ಕುಮಾರಕನಿಗಮಲ ಮಾಹೇಶನಿಂದ
ಭೋಗಮೋಕ್ಷಪ್ರದಾಯಕ ಲಿಂಗಧಾರಣವು-
ದಾಗಮದ ವಿಧಿವಿಡಿದು ಜರುಗಿದುದು ಕೂಸುವುಂ-
ವೇಗೈವುದಳುತ ಮೊಲೆಯುಣಲಿಲ್ಲವಿರುಳು ಪಗಲ್ಮೈದಾರು ದಿನಗಳನಕ ॥ ೨೩ ॥

ಬರಿಸಬೇಕಿದಕೆ ಮಂತ್ರವನೆಂದು ಕೆಲಬರುಂ
ವರಮಾಂತ್ರಿಕರಿಗೆ ತೋರಿಸಲೆಂದು ಕೆಲಬರುಂ
ಬರಿಸಬೇಕೀ ಗ್ರಾಮದೇವಿಯಂಗಾರಮನೆನುತ್ತಿಂತು ಹಲಕೆಲಬರು
ಒರೆಯಲಾಚಾರಪರಳಾದ ನೀಲಮ್ಮನೀ-
ಪರಿಜಡೋಪಾಯಗಳಿಗೊಪ್ಪದವಳೆರಡುಬಾ-
ವೆರೆಸೊಡನೆ ಕೂಸಿಗೆ ವಿಭೂತಿಯಂ ಧರಿಸತೊಡಗಿದಳು ಕಡುಭಕ್ತಿಯಿಂದ ॥ ೨೪ ॥

ಮೊಲೆಯನುಣಲಾವನರ್ಭಕನೀಯುಪಾಯದಿಂ-
ದೆಳೆಯನ ವಿಭೂತಿಧಾರಣದ ಸಂಸ್ಕೃತಿಯನುಂ
ಚೆಲುವನೀಲಮ್ಮನಷ್ಟಾವರಣ ವಿಶ್ವಾಸವನುಮೆಲ್ಲಬಳಗದವರು-
ತಿಳಿದು ವಿಸ್ಮಿತರಾಗಿಪೊಗಳ್ದರೀ ಕೂಸಿಗಿಂ-
ತಳವಟ್ಟಭಸ್ಮಪ್ರಿಯತ್ವಮೀನೀಲಮ್ಮ-
ನೊಲಿದುಬಸುರಿನೊಳು ಭಸಿತವನೇವಿಸಿದುದರಿಂದೊದಗಿದುದು ಪರಿಕಿಸಿದೊಡೆ ॥ ೨೫ ॥

ವಿಸುತಮಾಹೇಶ್ವರರು ಕೂಡಿ ಪನ್ನೆರಡನೆಯ
ದಿನದೊಳೀ ಕುವರಂಗೆ ಹಾಲಯ್ಯನೆಂಬ ಪೆಸ-
ರನೆ ಕರೆದು ಭಸಿತರುದ್ರಾಕ್ಷಮಾಲಾಶೋಭಿತೆಯ.ರಾದ ಪೆಣ್ಮಕ್ಕಳು
ಘನಸಂಭ್ರಮದೊಳು ತೊಟ್ಟಿಲನಿಟ್ಟು ತೂಗಿದರು
ವನಿಗೂಡಿ ಹಾಲಯ್ಯಜೋ ಧರ್ಮಪಾಲಜೋ
ವಿನಯಾದಿ ಸುಗುಣಸಂಪನ್ನಜೋ ಲಿಂಗಾಂಗಸಮರಸಜ್ಞಾನಿಜೋ ಜೋ ॥ ೨೬ ॥

ಕಾಮಾರಿ ರಿಪುವರ್ಗದೂರಜೋ ವೀರಜೋ
ಸೋಮಧರಶರಣಾನುಕೂಲಜೋ ಶೀಲಜೋ
ಶ್ರೀಮದಮೃತಾನಂದಭೋಗಿಜೋ ಯೋಗಿಜೋ ನಿರುಪಮವಿರಾಗಿಜೋ ಜೋ
ತಾಮಸವಿಭಂಗಜೋ ಸಾಧುಜನಸಂಗಜೋ
ಭೂಮೀಶಮಾನ್ಯಜೋ ಶಿವಸಮಯಧನ್ಯಜೋ
ಪ್ರೇಮಕರಭಾಷಜೋ ಕ್ಷೇಮಪ್ರಭೂಷಜೋ ಸುಕೃತಕುಲಕೋಶಜೋ ಜೋ ॥ ೨೭ ॥

ಇಂತಿಂಪುಮಿಗೆ ಪಾಡಿ ಸತ್ಕಾರಮಂ ಪೊಂದಿ
ಸಂತಸಂದಳೆದರೆಲ್ಲರು ತಾಯಿತನ್ನನುಗ-
ನಂತೆ ಚೆಲ್ವಕುಮಾರರಾರಿರ್ದೇರನ್ನಮೆಂದಾ ಮಹಾವೈರಾಗ್ಯದ
ಕಾಂತಿಯಂ ಕಣ್ತುಂಬನೋಡಿ ಮುದ್ದಾಡಿ ಚಿತ-
ಕಂತುವಿನ ಕೃಪೆಯಿಂದಿವಂ ಬಳೆದು ಮುಂದೆಮ್ಮ-
ಸಂತತಿಯನುದ್ಧರಿಸದಿರನೆಂದಳಾತ್ಮಭವಸಂಪದುತ್ಸಾಹಮೆನಿತೋ ॥ ೨೮ ॥

**ಅಂತು ಸಂಧಿ ಎರಡು ಪದಗಳು ೨೮**

ಶುಭಂ



॥ ಶ್ರೀ ಷಟ್ಸ್ಥಲ ಪರಬ್ರಹ್ಮಣೇ ನಮಃ ॥



# ಮೂರನೆಯ ಸಂಧಿ ಪ್ರಾರಂಭ



ಸೂಚನೆ:–

ಶೈಶವಂದಳೆದು ಬಳಿದೋದುವೆಡೆಯೊಳು ಮಾಕ್ಸ
ಕ್ಲೋಶಕರಭಿಕ್ಷೆಯಂ ಬಿಟ್ಟು ಕರ್ನಾಟಕಾ-
ಭ್ಯಾಸಮಂ ಮಾಡಿ ತೇರ್ಗಡೆವಡೆಯದುಳಿದಸದನನಿತಕೀ ಹಾಲಯ್ಯನು ॥

ಶಿವಮಯಂ ಸರ್ವಜಗಮೆಂದು ಸರ್ವತ್ರಾಣಿ
ಶಿವನೆಂದು ಪಂಚತತ್ವಸ್ವರೂಪಂ ಸದಾ-
ಶಿವನೆಂದು ಸಚ್ಚಿದಾನಂದಾದಿಲಕ್ಷಣಂ ಶಿವನೆಂದು ಸರ್ವೇಶನು
ಶಿವನೆಂದು ಶಿವನಲ್ಲದಾವನುಂ ಪ್ರಭುವಿಲ್ಲ
ಶಿವನೆಮಗೆ ತಾಯ್ತಂದೆಯೆಂದು ಶೃತಿಶಾಸ್ತ್ರಂಗ-
ಳವಿರತಂ ಪೊಗಳುತಿರೆ ನಿನಗಾರ್ಸಮಾನರೆನ್ನಂ ಪೊರೆ ಕೃಪಾಸಾಗರಾ ॥ ೧ ॥

ಸಂತ ಬಾರಭ್ರಾಂತಬಾ ತಂದೆಬಾ ಮುಕ್ತಿ-
ಕಾಂತಾನುಕೂಲಬಾ ಭಾಗ್ಯನಿಧಿಬಾರೆನ್ನ
ಸಂತಾನಬಾರೊ ಬಾಯೆಂದು ಲಾಲಿಸುತ ನೀಲಾಂಜಿ ಪಾಲಿಸೆ ಕುವರನು
ಸಂತಸದೊಳಂದಮನೆ ಶುಕ್ಲಪಕ್ಷದ ಚಂದ್ರ-
ನಂತೆ ಬಳೆವುತ್ತಮಿರಲಾರನೆಯವರ್ಷದೊಳ-
ಗಂತರಿದೀ ಜೋಯಿಸರಹರಳ ಹಳ್ಳಿಯೊಳು ತನ್ನಸಾಲೆಯೊಳು ಕೊಂಡು ॥ ೨ ॥

ಸುಮುಹೂರ್ತದಲ್ಲಿ ಕೊಟ್ಟೂರಬಸವಾರ್ಯನೀ-
ವಿಮಲಪೌತ್ರಸಿಗಕ್ಷರಾರಂಭವೆಸಗಿಸಲು
ಕ್ರಮವಿಡಿದು ಕಲಿಯಲಾದಂ ಪಿತಾಮಹಾನಾಜ್ಞೆಗನುಸರಿಸಿ ವಿನಯದಿಂದ
ಸುಮನಸದೆಳೆಯರೊಳಿವನ ನೇಹನಲ್ಲದೆ ಗುಣಾ-
ಧಮರೊಡನೆ ಬೆರೆದಾಡಲಿಲ್ಲ ಪುಸಿಯದೆ ಮಹೋ-
ತ್ತಮವೃತ್ತಿಯಿಂದೆಲ್ಲರೊಲುಮೆಗೀಡಾದನೀ ಬಾಲಕಂ ಬಾಲ್ಯದಲ್ಲಿ ॥ ೩ ॥

ಹತ್ತೆಂಟುವರ್ಷದವರಾಗಲೀ ಕುವರರಿಗೆ
ಮುತ್ತಯ್ಯನೊಂದುಚಿತಕಾಲದೊಳು ನಿಜಗೋತ್ರ-
ದುತ್ತಮಾಚಾರ್ಯ ಪಟ್ಟಾಧೀಶನಿಂ ಮಾಡಿಸಿದನು ಶಿವಸಂಸ್ಕಾರವ
ಮತ್ತಮಾಚಾರಮಂ ಲಿಂಗಪೂಜಾಕ್ರಮವ-
ನುತ್ತುಂಗಸಕಲೋಪಚಾರ ಮಂತ್ರಂಗಳಂ
ಬಿತ್ತರಂ ಮಿಗೆ ತಾನೆ ಕಲಿಸಿದಂ ತಂತ್ರವಿಧಿವಿಡಿದು ಪರಿಶುದ್ಧವಾಗಿ ॥ ೪ ॥

ಮನೆಯೊಳಿರ್ದರು ಹತ್ತು-ಹನ್ನೆರಡುಮಂದಿ ಬಡ-
ತನವಲ್ಲಿ ಸುಖದಿಂದ ನಿದ್ರಿಸುತ್ತಿರ್ದತ್ತು
ದಿನದಿನದೊಳಿಬ್ಬರುಂ ಮೂವರುಂ ಭಿಕ್ಷೆಗೈದಲ್ಲದನ್ಯೋಪಾಯವು
ಮನೆಯಚರಿತಾರ್ಥಕಿರಲಿಲ್ಲವೀ ಕಷ್ಟದೊಳ-
ಗೆಸಿತು ಪೇಳಲಿ ಶಿವಶಿವಾ ಬೇರೆ ಕಾಯಕವ-
ನನುಸರಿಸಲಿಲ್ಲ ಜೋಳಿಗೆವಂಡಮಿರ್ದಡದೆ ಸಾಕೆಮ್ಮ ಗಣವರರಿಗೆ ॥ ೫ ॥

ಜೋಳಿಗೆಯೆ ಬಡತನದಮುಂದಾಳು ಲಘುತನದ-
ಮೂಲವೀ ಜೋಳಿಗೆಯನಂ ಮಾಹೇಶ್ವರರು
ಗೀಳಾದರುದ್ಯೋಗಮಂ ಬಿಟ್ಟು ದಾರಿದ್ರ್ಯಕಿದು ತವರ್ಮನೆಯಾದುದು
ಜೋಳಿಗೆಯ ಬಲವೆ ವಿದ್ಯಾಬುದ್ಧಿಗಳನುಳಿಸಿ
ಹಾಳುಮಾಡಿದುದು ಪೌರುಷವನೊಚ್ಚೇರ್ಸ್ವಿಚ್ಚೆ-
ಜೋಳರಾಗಿಗಳ ಬಂಟರನಾಗಿಸದೆ ಮಾಣ್ಬುದೇ ಧರಿತ್ರೀತಲದೊಳು ॥ ೬ ॥

ಜೋಳಿಗೆಯೆ ಸಿರಿಯ:ರಿಸಗಿದ ಕುಲದ ಸೊತ್ತೆಂದು
ಪೇಳಿದ ಮಹಾರಾಯನಾವನೋ ಗಣವರನಿ-
ಗಾಲಸ್ಯಮಂ ಕಲಿಸಿ ತುತ್ತುಕೂಳಿಗೆ ಲಜ್ಜೆದೊರೆದನ್ಯರಂಗಳದೊಳು
ಜೋಲುಹಾಕಿದ ಮೋರೆಯಿಂ ನಿಲ್ಲಿಪುದಿದಾವ
ಶೀಲವೋ ಶಿವಶಿವಾ ಕಡೆತನಕ ತಿರಿದುಂಡು
ಬಾಳುವದಿದಾವ ಗೌರವಸುಖಂ ತಿಳಿಯಲಾಗದೆ ಜಾಣರಾದವರಿಗೆ ॥ ೭ ॥

ಪರದಾಕ್ಷಿಣ್ಯದಿಂ ಜೀವನವಸಾಗಿಸುವ
ನರನೆ ಸುಯ್ವುದೆಣಂ ಸ್ವತಂತ್ರತೆಯನಾಂತು ನಿಜ-
ಕರಚರಣಮತಿಮನಶ್ಶಕ್ತಿಯಿಂದೆದುರಿಸಿ ಪ್ರಪಂಚಕಷ್ಟವನು ಗೆಲಿದು
ನೆರೆ ಗೌರವಂ ಚೆತ್ತು ದುಡಿದುಂಬಗಣವರನೆ
ಪುರುಷಂ ಪರಾವಲಂಬಿಯೆ ಹೇಡಿ-ಗತಿಗೇಡಿ
ಕರಗಳೊಳು ಬಳೆಗಳಂ ತೊಡದಿದೊಂದು ವಿಲಕ್ಷಣಾಬಲೆಯೆ ದಿಟಮಿಳೆಯೊಳ್ ॥ ೮ ॥

ಮನದ ದುರ್ಬಲತೆಯುಂ ತೋರುವನ್ಯಾಯವಲಂ
ಬನಪರಧರಾಭಾರಕನ ದೈನ್ಯವೃತ್ತಿಗೊಲಿ-
ವನೆ ಜಗಚ್ಚಾಲಕಂ ಗುಣಿಗಳಹುದೆಂಬರೇ ದೈನ್ಯವದರಿಂ ಪೋಪುದೇ
ಅನವರತಮಖಿಲರಂ ಪಾಲಿಸುವ ದೇವರಿರೆ
ಮನುಜರಿಗೆ ಸೆರಗೊಡ್ಡುವರೆ ತಮ್ಮ ಕರ್ತವ್ಯ-
ವನು ಮರೆದನಾಯಾಸವೊದಗುವಸುಖಕ್ಕೆ ಮರುಳಾಗುವಳಿಮನವದೊಳಿತೆ ॥ ೯ ॥

ಕೂಲಿಯಂ ಮಾಡಿ ಬದುಕುವದೊಳ್ಳಿತು ಮೊರೆಯಪೊಡೆ
ತಾಳದಳಿವುದು ಲೇಸು ನಿಲದೆ ಜೋಳಿಗೆಯೆಂದು
ಹಾಳಾಗಿ ಪೋಪುದೋ ನಮ್ಮ ಕಣ್ಣೆದುರಿಗಿದು ಮುಂದುಪರಿವಗಣಂಗಳ
ಏಳಿಗೆಗೆ ವಿಘ್ನವಿದು ಸತ್ಕಲಾಸಾಧನಕೆ
ದಾಳಿಯಿದು ಮಂದಿಯ ಮನಂಗೆಡಿಪ ಬೇಡಿಕೆಯ
ಹೋಳಿಯಿದು ಮನ್ನಣೆಯೆನಿಪ್ಪಸೋಡಕ್ಕೆ ಬಿರುಗಾಳಿಯಿದುಜೇಡ ಗುರುವೆ ॥ ೧೦ ॥

ಯೋಗಿಗಳಿಗಿದು ಲೇಸು ಗುರುಲಿಂಗಸೇವಾನು-
ರಾಗಿಗಳಿಗೊಳ್ಳಿತಿದು ಸಂಸಾರಜಡಪಥ-
ತ್ಯಾಗಿಗಳಿಗಿದು ತಕ್ಕುದಮಲಚರದಾಸೋಹಗಳಿಗುಚಿತವಿದು ಶರಣರ-
ಪೂಗಕಿದು ಭೂಷಣಂ ಮತರಾಷ್ಟ್ರಹಿತಕಾರ್ಯ-
ಭಾಗಿಗಳಿಗಿದು ಸಲ್ಲುತಿಪುದು ದಿಕ್ಕಿಲ್ಲದವ-
ರಾಗಿಡುವ ಕುರುಡರೇ ಮೊದಲಾದ ವಿಕಲಾಂಗಿಗಳಿಗೊಪ್ಪುವದು ತಿರುಪೆಯು ॥ ೧೧ ॥

ಯತಿಗಳಿಗೆ ವಟುಗಳಿಗೆ ಗುರುಚರವರೇಣ್ಯಸಂ-
ತತಿಗೆ ಬಡವಿದ್ಯಾರ್ಥಿಗಳಿಗೆ ಪರತರತಪೋ-
ವ್ರತನಿಷ್ಠರಿಗೆ ನಿರಾಶ್ರಿತಬಾಲಕಾದಿಪ್ರತಿಗ್ರಹಣಯೋಗ್ಯಜನಕೆ
ಕ್ಷಿತಿಯೊಳೀ ತಿರುಪೆ ಸರಿಯಪ್ಪುದೀ ಜನರಿಗತಿ-
ಹಿತಭಾವದಿಂದನ್ನವಿಕ್ಕಿದೊಡೆ ಬಹುಪುಣ್ಯ-
ಗತಿಯಾಗುತಿಹುದೆಂದು ಪೇಳುವರು ಶಾಸ್ತ್ರವಿದುಗಳ್ನೀಡುವದೆ ಬೇಡುವದೆಕಷ್ಟವು ॥೧೨

ಭೋಗಿಗಳಿಗಿದು ಹೊಲ್ಲ ಸಂಸಾರಪೋಷಣ-
ಕ್ಕಾಗಿ ಮಾಡುವದಲ್ಲವಿದು ಜೇರಲೌಕಿಕೋ-
ದ್ಯೋಗವುಂ ಮಾಳ್ಪ ಬಲವುಳ್ಳವರಿಗಿದು ಸರ್ವಥಾಲಸ್ಯಗುಣವೆನಿಸಿಪ್ಪುದು
ಆಗಳ್ಬಿಜೋಪರಪರಾಯಣತೆಯಿಂ ಪಾತ-
ಲಾಗದಾನೆಯನೇರ್ದಡುಂ ಗಣಂಗಳು ಬಿಡದೆ
ರಾಗದಿಂ ದಾನಕ್ಕೆ ಕೈಯೊಡ್ಡಬೇಕೆಂಬ ಗಾದೆಯುಪಚಾರೋಕ್ತಿಯು ॥ ೧೩ ॥

ತಿಳಿಯಲೀ ಭಿಕ್ಷೆ ಬೇಳಲ್ಲ ಪೆರ್ಚಿನದು ಕೇ-
ವಲ ಲೌಕಿಕಾಚರಣೆಯಲ್ಲ ಶಾಸ್ತ್ರೀಯಪ್ರ-
ಬಲಮಾಗಮಾರ್ಷಮಿದು ಧರ್ಮಾನುಕೂಲಮಿದು ನಿಷ್ಕುಟಿಲಕಾಯಕಮಿದು
ಮಲಹರನ ಲೀಲೆಗಳೊಳೊಂದು ಸಲ್ಲೀಲೆಯಿದು
ಸುಲಭಮೆನೆ ಜನಗಳಿಗೆ ಪುಣ್ಯಮಂ ಕೊಡುವ ನಿ-
ರ್ಮಲಸಾಧನಮಿದು ಪರಿಪೂತರನನಾಥರಂ ಸತ್ಕರಿಸ ಸತ್ಕ್ರಿಯೆಯಿದು ॥ ೧೪ ॥

ವೀರಮಾಹೇಶ್ವರ ಕುಮಾರಂಗೆ ವಿಧಿವಿಡಿದು
ಚಾರುಗುರುಪುಂಗವಂ ಪಿಡಿ ಮಗನೆ ಪ್ರತಿದಿನಂ
ಕೋರುಧಾನ್ಯದ ಭಿಕ್ಷೆಗೈದು ಗುರುಚರವರರನೊಡಗೊಂಡು ತೃಪ್ತಿವಡೆದು
ವೀರಶಿವಧರ್ಮಮಂ ಪೋಷಿಸೆಂದೊರೆದು ಘನ-
ಕಾರುಣ್ಯದಿಂ ಬೆತ್ತಜೋಳಿಗೆಯನಿತ್ತು ಸಂ-
ಸ್ಕಾರಮಂ ಮಾಳ್ಪ ಶಾಸ್ತ್ರಾಜ್ಞೆಯುಂಟಿದೆ ಪರಂಪರೆಯಿಂದ ಬಂದಿರ್ಪುದು ॥ ೧೫ ॥

ಭೂತಿರುದ್ರಾಕ್ಷಕಾಷಾಯ ವಸನಂಗಳಿಂ
ಜೋತಿಸೆವುತಿರ್ಪ ಜೋಳಿಗೆಯಿಂದ ಬೆತ್ತದಿಂ
ಭೂತೇಶಬಸವ ನಾಮೋಚ್ಚರಣದಿಂದೊಪ್ಪಿ ಶಿವಭಕ್ತನಿಲಯಗಳನು
ಪ್ರೀತಿಯಿಂ ಪೊಕ್ಕವರ ನಡತೆಯಂ ನೋಡಿ ಧ-
ರ್ಮಾತಿಶಯಮಂ ಪೇಳ್ದು ಭಿಕ್ಷೆಯಂ ತಂದು ಪರಿ-
ಪೂತಗುರುಚರರನುಪಚರಿಪುದೇ ಮಾಹೇಶಕಾಯಕವಿದಾದಿಯಿಂದ ॥ ೧೬ ॥

ಪರಮಶಿವಧರ್ಮ ಪೋಷಣೆಯೆ ಜೀವನದ ಹೆ-
ಗ್ಗುರಿಯೆಂದು ತಿಳಿದು ಗಣವರರು ಭಿಕ್ಷಾನ್ನದಿಂ
ಪರಿಣಮಿಸುತಿರ್ದರೆನ್ಮುಂತವರು ಸಿರಿಗೆ ಬಾಯಾರುತಿರಲಿಲ್ಲ ಬಂದು
ಸಿರಿಗಾಗಿ ಭೋಗಾಭಿಲಾಷಿಗಳ್ಮನಿ-
ಷ್ಕರನರ್ಚಿಸದರು ಧರ್ಮಪ್ರಾಪ್ತಿಗಾಗಿ ಸ-
ತ್ಕರಿಸಲಿಲ್ಲೈಶ್ವರ್ಯಮಂತರಂ ಮಾಹೇಶರವರಿಂದ ಪೂರ್ವದಲ್ಲಿ ॥ ೧೭ ॥

ಭಿಕ್ಷೆಯೊಂದೌನ್ನತ್ಯವೊಡೆದು ಕಂಡುದು ಶಿವಂ
ಭಿಕ್ಷೆಯನಿದೇ ಹೇತುವಿಂ ಮಾಡಿ ಕೆಲಬರಂ
ರಕ್ಷಿಸಿದನೀಗಳಿದು ಸಾಮಾನ್ಯವಾಗಿ ಕಾಣ್ಬುದು ಧರ್ಮರತಿಯಿಲ್ಲದೆ
ಕುಕ್ಷಿಯನು ಹೊರೆಕೊಳ್ಳಲೆಸಗುತಿಹ ಭಿಕ್ಷೆಯಿದು-
ಪೇಕ್ಷೆಯಂ ಪುಟ್ಟಿಪುದು ದಾತೃಗಳ ಮನಸಿನೊಳು
ಮೋಕ್ಷಸಾಧನವಾದುದೀ ಭಿಕ್ಷೆ ಭಿಕ್ಷುಕರು ತಿಳಿದಿಲ್ಲವಿದನು ಕೆಲರು ॥ ೧೮ ॥

ನಾನು ಮಾಹೇಶ್ವರಂ ನಾನು ಶಿವಯೋಗೀಶ
ನಾನು ಪೂಜ್ಯನೆನಿಪ್ಪಹಂಕಾರಗುಣವಳಿದು
ನಾನಾಸಮಸ್ತವಸ್ತುಪ್ರತತಿಯುಂ ಶಿವಂ ಜೀಳ್ವಂ ಶಿವನು ಮತ್ತೆ
ಸಾನುರಾಗದೊಳೀವ ದಾನಿಯುಂ ಶಿವನೆಂಬ
ಜ್ಞಾನವನು ನೆಲೆಗೊಳ್ಪಸುಪ್ರಯೋಜನಕಾಗಿ
ಭೂನುತ ಗುರೂತ್ತಮಂ ದೀಕ್ಷೆಯೊಳು ಭಿಕ್ಷಾಧಿಕಾರಮಂ ದಯೆಗೈವನು ॥ ೧೯ ॥

ಉದರಪೋಷಣಕಾಗಿ ತಿರಿದುಂಬುದಿದು ಪೊಲ್ಲ
ವುದರಪೋಷಣಕಾಗಿ ತಿರಿದುಣದೆ ಪಾಪವ-
ಲ್ಲದ ಸಾಧಿಸಿದ ಹೀನಕಾರ್ಯಗಳನಾದೊಡಂ ಮಾಡಿ ಜೀವಿಸುವದೊಳಿತು
ಉದರದ ನಿಮಿತ್ತವೆಸಗುವ ಹೀನಕಾರ್ಯದಿಂ-
ದೆದೆಯುಬ್ಬಿ ತಿರಿದುಂಬುದೇ ಮಹಾಲಘುತನಂ
ಬೆದರದಾತ್ಮಾರ್ಥಮುತ್ತಮಕಾರ್ಯಕೆಂದೊರೆದು ಯಾಚಿಸನೆ ಕಲಿಪುರುಷನು ॥ ೨೦ ॥

ಹರನರಾಜ್ಯದೊಳು ನರರುಪಜೀವನಕ್ಕೆ ಸಾ-
ವಿರಸಾಧನಗಳಿರ್ದುಮವುಗಳೊಳು ಭಿಕ್ಷೆಯೇ
ದೊರೆದುದೀ ಮನೆತನಕ್ಕದರಿಂದ ತುಳಿದು ಹತ್ತಿಕ್ಕಿದುದು ಬಡತನವದು
ಅರಿವೆಯುಚಂಡಿಯಿಲ್ಲ ಕಾಳಿಲ್ಲ ದುಡ್ಡಿಲ್ಲ
ಕರಮುಂಬಮುಂದಿ ಕಡಿಮೆಯುದಿಲ್ಲವಿಂತು ಬಲು-
ಕೊರತೆಯಿರಲಕಟಕಟ ಬಸವಾರ್ಯನಭವನೊಳ್ಪೆರೆದನಿನ್ನೇಗೈವುದು ॥ ೨೧ ॥

ಜನಕನಗಲುವಿಕೆಯಿಂ ಘನದುಃಖಮಾದುದೀ-
ತನಯರಿಗೆ ಮೇಣ್ಪತಿವಿಯೋಗದುಃಖಮಿದೊಂದು
ತನುಜರಲ್ಪವಯಸ್ಕರಿರುವ ಕಷ್ಟಮಿದೊಂದು ನೆರಪಿಲ್ಲದಳಲಿದೊಂದು
ಮನೆಯೊಳೇನೊಂದು ಜೀವಿತವಸ್ತುಸಂಗ್ರಹಮು-
ದಿಸಿಸಿಲ್ಲದಿಹಚಿಂತೆಯೊಂದಿವೆಲ್ಲಂ ಕೂಡಿ
ಮನವನೇ ಬಲಿಗೊಂಡು ದಿಙ್ಮೂಢಳಂ ನೆಗಳ್ದವಂದು ನೀಲಾಂಬಿಕೆಯನು ॥ ೨೨ ॥

ಮಾತೆಯನುತಾಪಮಂ ತಿಳಿದಗ್ರಜಾನುಜರು
ತಾತನಳಿದಳಲುರಿಗೆ ಮೈಗೊಡದೆ ಚಿಂತಿಸದೆ
ಭೀತಿನಾಚಿಕೆಗಳಂ ತೊರೆದು ಪದ್ಧತಿಯಂತೆ ಜೋಳಿಗೆಯಕೈಕೊಂಡರು
ಮಾತಾಡಿಕೊಂಡವರು ಬೇರೆಬೇರೂರಿಗಳ-
ಗಾತುರದೊಳೈದಿ ಭಿಕ್ಷೆಯು ಮಾಡಿಕೊಂಡು ಬಂ-
ದಾ-ತಾಯಿಗೊಪ್ಪಿಸಿ ಪೊದಳ್ದುಂಡು ಮಧ್ಯಾಹ್ನಕೋವಲ್ಲೈತರುತಿರ್ದರು ॥ ೨೩ ॥

ಬಡತನಂ ಬಾಲಕಾವಸ್ಥೆ ತನಗಿರ್ದಮಂ
ಬಡವರಂ ಕಂಡು ಮನದೊಳು ಮರುಗುತಿರ್ದನೀ-
ಕಡುದಯಾಮಯನಾದ ಹಾಲಯ್ಯನೊಂದುದಿನಮೆಲ್ಲಿಗೋಹೋಗಿ ಮನೆಗೆ
ತಡೆದು ಬಂದಂ ಮನೆಯೊಳೆಲ್ಲರುಂಡಿರ್ದರವ-
ನೊಡನೆ ತಾನೂಟಕ್ಕೆ ಕುಳ್ಳಿರುವ ಸಮಯದೊಳು
ನಡೆತಂದನೂಟಮಂ ಮಾಡಿಸಿರಿ ನೀವೆಂದು ಹಸಿದೋರ್ವಗಣವರ್ಯನು ॥ ೨೪ ॥

ಮನೆಯೊಳಗೆ ಹೆಚ್ಚಿಗೋದನಮಿಲ್ಲ ತನ್ನಪಾ-
ಲಿನದನಿತನೇ ತಾಯಿಮಡುಗಿರ್ದಳದನೆ ಬಲು-
ಕನಿಕರದೊಳವಗುಣಿಸಿದಂ ಮಾತೆ ಕಂಡೆಲವೊ ನೀನೆನಿತು ತಿಳಿಗೇಡಿಯೋ
ನಿನಗುಳಿಸಿದನ್ನವನವಂಗುಣಿಸಿದೈ ಮುಂದೆ
ನಿನಗೇನುಗತಿಯೂರೊಳಿರಲಿಲ್ಲವೇ ಬೇರೆ
ಮನೆಗಳೆನಲೆಮ್ಮ ಮನೆಯೀಯೂರೊಳಗಿನದಲ್ಲವೆ ಮುಳಿಸಿದೇಕೆ ತಾಯೆ ॥ ೨೫ ॥

ಇತ್ತು ನೀಡಿದೆನಿಲ್ಲದೊಡೆ ನೀಡುವದದೆಂತು
ಹೊತ್ತಾಗಿ ಹಸಿದು ಬಂದಿರುವರ್ಗಣಂಗಳೌ
ಮತ್ತಾರಮನೆಗೆ ಹೋಗುವದೆಲ್ಲಿಯುಂ ದೊರೆಯದಿರ್ದಡುಪವಾಸವಿವರು
ತತ್ತಳಿಪುದಕೆ ಬದಲು ನಾನಿರುವೆನುಪವಾಸ
ಉತ್ತಮರಮಾತಲ್ಲ ಮಾತೆಯುಣಬಂದವರ-
ನತ್ತ ಹೋಗೆಂಬರೇ ? ನಾವು ಪೇಳುವದಿಲ್ಲವೇ ಹೋಗಿ ಮುಂದಿಯಲ್ಲಿ || ೨೬ ||

ತಾವುಣ್ಣಹೊತ್ತಿನೊಳು ಬಂದಗಣಸರ್ವರಂ
ದೇವರೆಂದರಿಯಲಜ್ಞಂ ಪೇಳ್ವುದಿಲ್ಲವೇ
ನಾವಿದಂ ನಡಿಸದೊಡೆ ಮತದ್ವೈಗಳೆಂತಪ್ಪನಪ್ಪ ಪುಣ್ಯವೆ ಜೀವರ
ಜೀವನೋಪಾಯವೀ-ಬಡತನಕೆ ಬೆದರುವರೆ
ಪಾವನಾತ್ಮಕರ ನಡೆತೆಯನು ನೋಡಿಲ್ಲವೇ
ಕಾವನೀಸರನೆಂದು ಪೇಳ್ದು ಸಂತೈಸಿದಂ ನಿಜಮಾತೆಯುಂ ದಯಾಳು || ೨೭ ||

ಪಿತನಿಲ್ಲವಳವಳಿದ ಮುಪ್ಪಿನ ಪಿತಾಮಹಂ
ಹಿತಬಂಧುಬಳಗದವರಾರುಮಿಲ್ಲಂ ನೋಡೆ
ಪತಿವಿಯೋಗವಿಶೇಷದುಃಖಪೀಡಿತೆ ಮಾತೆ ಬಾಲಕರು ತಾವೀರ್ವರು
ಗತಿಯಿಲ್ಲ ಬೇರಾವುದೊಂದು ತಮಗೀ ಪರಿ-
ಸ್ಥಿತಿಯೊಳೀ ಭಿಕ್ಷೆಯನೆ ಕೈಕೊಂಡುದದು ಧರ್ಮ-
ರತಿಯುಳ್ಳವರ್ಗುಚಿತಮೆನಿಸಿದುದು ಕಾಲಾನುಗುಣವಾಗಿ ಮಾಳ್ಪುದೇನು || ೨೮ ||

ಚೆಲುವೆಳೆಯ ಬಾಲಕರು ಜೋಳಿಗೆಯನಾಂತು ಬಾ-
ಗಿಲಗೆ ನಿಂದಮ್ಮ ಭಿಕ್ಷೆಯ ನೀಡಿಮೆಂದು ಕಿರಿ-
ಯುಲಿಯಿಂದ ಬೇಳ್ಪುದನುಮವರ ಹರಿದರುವೆಯನು ನೋಡಿ ಮರುಗದವರೊಳರೇ
ಲಲನೆಯರು ಕೈತುಂಬ ಧಾನ್ಯಮಂ ತಮ್ಮ ಮ-
ಕ್ಕಳ ಬಟ್ಟೆಯಂ ಮತ್ತೆ ನಲ್ಲುಣಿಸುಗಳನಿತ್ತು
ಕಳಿಪುತಿರ್ದರು ಮನದೆ ಮಲಮಲನೆ ಮರುಗುತಂ ಮೃದುಮನಕ್ಕಾವುದುಪಮೆ || ೨೯ ||

ಪರಿಪರಿಯೊಳಾ ಪುರಾಕೃತಕರ್ಮವಿಂತು ದು-
ಸ್ತರವಾಗಿ ಜೀವರಂ ಕಾಡಲಿರ್ದಡುಮುಮೇ-
ಶ್ವರನದನು ಸೈರಿಸದೆ ತನ್ನ ಕಾರುಣ್ಯಮಂ ದಾತೃಗಳೊಳಿರಿಸಿ ಬಿಡದೆ
ಧರೆಯೊಳವರಿಂ ಜೀವರಂ ಪೊರೆಯಲೆಸಗಿ ತಾಂ
ಕರುಣಿಯೆಂಬಾ ಬಿರುದನುಳುಹುಕೊಳ್ಳುವನೆಂಬ
ವರವಿಚಾರಂ ಮನಕೆ ಸರಿದೋರ್ದುದೀ ದೀನಬಾಲರಿತಿಹಾಸದಿಂದ ॥ ೨೦ ॥

ಅರಿಯೆ ಕೊಟ್ಟೂರಾರ್ಯಗೊಂದುನೂರಾಐದು
ಬರಿಸಂಗಳಾಗಿರ್ದವಾಪಡುಂ ಕರಣಗಳು
ಸರಿಯಿರ್ದವಾವುಗಳಿಗವನೆ ಪುಲ್ಲಂ ಕೆತ್ತಿ ತಂದು ಮಾಯಿಸುತ್ತಿರ್ದನು
ಮರೆಯದಾ ಮಾವನಂ ಸೇವಿಸುತ ಮೇಣಳಿವ
ಹಿರಿಯರಂ ಕಿರಿಯರಂ ತನ್ನೆರಡು ಮಕ್ಕಳಂ
ಸರಿಯಾಗಿ ಕಂಡಳಾ ನೀಲಾಂಬೆ ಲೌಕಿಕಸುಧಾರಣಾಗುಣಕಮಂಬೆ ॥ ೨೧ ॥

ತಿರುಪೆಯಿಂದಂತುಮಿಂತುಂ ಕಾಲಮಂ ಕಳೆವು
ತಿರಲೆಮ್ಮ ಹಾಲಯ್ಯನಿಗೆ ಸಮನಿಸಿದವು ಪ-
ನ್ನೆರಡು ಬರಿಸಂಗಳವನೊಂದುದಿನಮೆಂದಿನಂತೊಂದು ಪಳ್ಳಿಯೊಳು ಹೋಗಿ
ತಿರಿವುತಿರಲೀತನಂ ಕಂಡೋರ್ವಲಿಂಗವಂ
ತರಮುದುಕನಯ್ಯಪ್ಪ ಸಾಕುಬಿಡಬಾರದೇ
ಧರಣಿಯೊಳು ನೀನಿನ್ನುಮೇಸುದಿವಸಂಬರಂ ಭಿಕ್ಷೆಯಂ ಬೇಡಿಕೊಳುವೆ ॥ ೨೨ ॥

ನೀನುದಿಸದಿರ್ದಡೀ ಜಗವಾಗುತಿರಲಿಲ್ಲ-
ವೇನಿನ್ನು ಚಿಕ್ಕವಯಮಿದೆ ವಿದ್ಯೆಯಂ ಕಲಿತು
ಮಾನಮಂ ಸೌಖ್ಯಮಂ ಪಡೆ ಭಿಕ್ಷೆಯಿಂದ ನಿನಗಪ್ಪಾವ ಲಾಭವಹುದು
ದೀನತನದಿಂ ಬದುಕಲೆಂಬೊಂದ ಬಯಕೆಯೋ
ಜ್ಞಾನದಿಂ ಮಾನದಿಂ ಸುಖದಿಂದ ಬಾಳ್ವುದೇ
ಮಾನವನ ಲಕ್ಷಣಮಿದೆಂದು ಕಳಕಳಿಯಿಂ ತಿರಸ್ಕರಿಸಿ ನುಡಿದನವನು ॥ ೨೩ ॥

ಕೇಳಿದಂ ತದ್ವೃದ್ಧಿ ವಾದಮಂ ಮನಸಿನೊಳು
ಹಾಳುಯಾಚನೆಗೆ ಧಿಕ್ಕಾರವೆಂದನಿತಕೀ-
ಹಾಲಯ್ಯನವನುಳಿದಳುತ್ತರದಾರಿಯಂ ಪಿಡಿದು ಗೇಣುದರಕಾಗಿ
ಆ ಲಜ್ಜೆಗೆಟ್ಟು ತಿರಿದುಂಬುದಿದು ಹೊಲ್ಲಮೆಂ-
ದಾಲೋಚಿಸುತ ಮನೆಗೆ ಬಂದಸಂದಿನ ತಿರುಪೆ
ಗಾಳರ್ಘವಿಹುದರಿಂ ನೋಡಿ ಮನೆಯವರೆಲ್ಲ ಬೈದರದರೊಳು ತಾಯಿಗೆ ॥ ೩೪ ॥

ತಿರಿವರ್ಧಕಾಳಿನೊಳಗರೆಗಾಳಸಂಗಡಿಗೆ
ಸುರುವಿ ತಿಂದಿರಲಹುದು ಕಡಲೆಜೆಲ್ಲವನೆಂದು
ಚಿರುವಾತಿನಿಂದ ಶಿವಬಸವಾರ್ಯನೊರೆಯಲವರೆಲ್ಲ ಬಲುಸಿಟ್ಟಾದರು
ಎರಡುವ್ಯಥೆಯುಂ ತಾಳದಂದು ಭೋಜನವನೇ-
ತೊರೆದೊಂದು ಮೂಲೆಯಂ ಪಿಡಿದು ಮಲಗಿದನಂದು
ಮರುದಿನಂ ಮುಂಜಾವಿನೊಳು ಮುಂದೆಮಾಳ್ಪುದಂ ತನ್ನೊಳಾಲೋಚಿಸಿದನು ॥ ೩೫ ॥

ಇಲ್ಲಿ ಮೂರನೆಯವರ್ಗದಮೇಲೆ ಸಾಲೆಯುಂ
ದಿಲ್ಲ ನೆರವಾಗುವ ಮಹಾಶಯರ ಪರಿಚಯಮಿ-
ದಿಲ್ಲ ಬೇರೊಂದೂರ್ಗೆ ಪೋಗಿ ಕಲಿವೊಡೆ ನನ್ನ ಕೈಯಲ್ಲಿ ರೊಕ್ಕವಿಲ್ಲ
ಸುಳ್ಳೆ ಕಾಲವಕಳೆದೊಡೊಂದಿನಿಸು ಮರ್ಯಾದೆ-
ಯಿಲ್ಲವೆಂತಾದೊಡುಂ ಬಿಜ್ಜೆಯಂ ಕಲಿಯಬೇ-
ಕೆಲ್ಲಿ ಪೋಗಲಿಯೆಂದು ಚಿಂತಿಸುತ್ತಿರಲಸಿತರಲ್ಲಿ ಶಿವಬಸವಾರ್ಯನು ॥ ೩೬ ॥

ಏಳಯ್ಯ ಸುಮ್ಮನೇ ಮಲಗಿದೊಡಿದೇನು ? ಸಾ-
ಕೇಳು ಗೋಷ್ಠವನುಡುಗಿ ಕಸವಚೆಲ್ಲುವೆಯೊ ನೀ-
ನಾಲಸ್ಯವೇಕೆ ಬಾವಿಗೆಹೋಗಿ ಬಟ್ಟೆಯಂ ತೊಳೆದು ತರುವೆಯೊ ಪೇಳೆನೆ
ಮೈಲಿಗೆಯ ಕೊಂಡೊಯ್ದು ತೊಳೆದು ಮಡಿಯಂ ಮಾಡಿ
ವೇಳೆಯಾಗುವದು ಹಳ್ಳಿಗೆ ಹೋಗಿ ಬರುವೆನೆ
ವಸ್ತ್ರಾಲಯಕಿದಂ ಮುಟ್ಟಿಸೆಂದೋರ್ವಗೊರೆದಿತ್ತು ಕಜ್ಜರಿಗೆ ಪೋದನವನು ॥ ೩೭ ॥

ಸರಿಯಾಗಿ ಕಲಿಸುತಿಹರೀಯೂರೊಳಿಲ್ಲಿಂದ
ನೆರೆಪರೀಕ್ಷೆಗೆ ಹೋಗಿ ಬಹಳವಿದ್ಯಾರ್ಥಿಗಳು
ಬರುವರುತ್ತೀರ್ಣತೆಯ ಹೊಂದಿ ಪ್ರತಿವರ್ಷಮೊಂದರಿದಿಲ್ಲಿಗೈತಂಪೆನು
ಗುರುತಿಲ್ಲನಿಲ್ಲಿ ಭೋಜನವೆಲ್ಲಿಯೆನಗೋದ-
ಲಿರುವ ತಳವೆಲ್ಲಿ ಕಾಣುವದಾರನೆಂದುಸರಿ-
ಪರಿಯೋಳಾಲೋಚಿಸುತ್ತೊಂದು ಜೇವಿಸಕಟ್ಟೆಗುಪವಾಸವೇ ಕುಳಿತನು ॥ ೩೮ ॥

ಹಳೆಯ ಪಂಚೆಯನುಟ್ಟು ವೈಗಂಗಿಯಿಲ್ಲದೇ
ತಲೆಗೆ ಕಾವಿಯರುಮಾಲವ ಸುತ್ತಿಕೊಂಡೊಂದು
ಹೊಲಿವ ಧೋತರವ ಹೊಪ್ಪೊಡಲುರಿಗೆ ಬೆಂದು ಬಾಯಾರಿ ಮುಂಗಾಣದಲ್ಲಿ
ಕಳವಳದೊಳಾಗಾಗ ಕಣ್ಣೀರನುದುರಿಸುತ
ಕುಳಿತುಕೊಂಡಿರುವೀ–ಮಹಾದೀನಬಾಲಕನ
ಬಳಿಗೆ ಬಂದಂ ಪಿರಿಯಮತದ ರಾಚಯ್ಯನೆಂಬೆಂಬೋರ್ವ ಯಜಮಾನನು ॥ ೩೯ ॥

ಇವನ ಬಾಡಿದಮೊಗವ ನೋಡಿ ನೀನಾರೆಂದು
ತವಕದಿಂದೀತನ ಮನೋರಥವತಿಳಿದು ನಿಜ-
ಭವನಕ್ಕೆ ಕರೆದುತಂದುಪಚರಿಸಿ ಮರುದಿನದೊಳಧ್ಯಾಪಕರಿಗೆ ತಿಳಿಸಿ
ತವೆ ಸಾಲೆಯಲ್ಲಿ ಸೇರಿಸಿ ವರ್ಗಣಿಯ ಮಾಡಿ
ವಿವಿಧಪುಸ್ತಕಪಾಟವಸನಂಗಳಂ ಕೊಡಿಸಿ
ಸವಿಮಾತಿನನುಕೂಲಮಂ ಪೇಳ್ದು ನೆರವಾದನಾ ದಯಾಮಯ ಸುಕೃತಿಯು ॥ ೪೦ ॥

ಸುಗುಣವರ್ತನಗಳಿಂದೆಲ್ಲರಿಗೆ ಬೇಕಾಗಿ
ಬಗೆಗೊಟ್ಟು ಕಲಿತಲ್ಪಕಾಲದೊಳುಸಾಲಿಯೊಳು
ಮಿಗಿಲೆನಿಸಿ ಧಾರವಾಡಕೆ ಪರೀಕ್ಷಾರ್ಥಮೀತಂ ಕಾಲುನಡಿಗೆಯಿಂದ
ಮಿಗೆ ಸಹಾಧ್ಯಾಯಿಯನೊಡಂಗೊಂಡು ಪೋಗಲೀ-
ತಗೆ ದೊರೆಯಲಿಲ್ಲ ಜಯವಲ್ಲಿ ಮಾಡುವದೇನು
ಜಗದೊಳುತ್ತಮರಿಗುತ್ಕರ್ಷವಾಗುವನುಂಟೆದೇತಕಿಂತಾಮದರೇ? ॥ ೪೧ ॥

ಶೈಲಸುತೆಯುಪನೀತನಜಚ್ಛರಿಪಂಪದಿಂ
ಕೇಳುತಿರ್ದಂ ಪೆರರಿಗನ್ನಪಾನಂನುಳಿದು
ಕಾಲಿಯೊಳು ನಿಯಮಿಸಿದ ಪಾತಮಂ ಮಾಡಿಯೇಳುತ್ತಿರ್ದನೀ ಜಾಣನು
ಮೇಲಾದಶಿವಯೋಗಿಯೆನಿಸಿ ತದ್ಧರ್ಮಮಂ
ಪಾಲಿಸುವ ಸಂಕಲ್ಪನಿಹುದರಿಂದೀತಂಗೆ
ಸೋಲಾದುದೇ ಯೋಗ್ಯಮೆಂದಾಡದಿರುವರಾರೆಮ್ಮ ಸಮಾಜದಲ್ಲಿ ॥ ೪೨ ॥

ಅಂತು ಸಂಧಿ ಮೂರು ಪದಗಳು ೪೨

~ ಭದ್ರಂ



॥ ಶ್ರೀಮತೇ ವಿಶ್ವನಾಥಾಯ ನಮಃ ॥



# ನಾಲ್ಕನೆಯ ಸಂಧಿ ಪ್ರಾರಂಭ





**ಸೂಚನೆ :—**

ಜಡೆಯಸಿದ್ಧರ ಸೂಚನೆಯನು ಭಾವದೊಳರಿದು
ಜಡಸಂಶಯವನುಳಿದು ಶಿವಯೋಗಿವರನ ಪದ-
ಜಡಜಮಂ ನಂಬಿ ಪಿಡಿದೀಮುಮುಕ್ಷೋತ್ತಮಂ ಬಿಟ್ಟನಾಲೋಭಮತವ ॥

ಶಿವನು ಭಕ್ತಪ್ರೇಮಿಯೆಂದು ಭಕ್ತರ ದಯಾ-
ರ್ಣವ-ಶಿವಪ್ರೇಮಿಯೆಂದಾಮ್ನಾಯತಂತ್ರಂಗ-
ಳವಿರತಂ ಪೊಗಳುತಿಹವೆಲೆ ಶಿವನೆ ನಿಮ್ಮಗಳೊಳುಳ್ಳ ಪ್ರೇಮದ ಸೊಗಸನು
ವಿವರಿಸಲು ಬಲ್ಲನೇ ಜಗದೊಳಾನೊಮ್ಮೆಯುಂ
ಶಿವನಾಗಿ ತಿಳಿದಿಲ್ಲ ಭಕ್ತನಾಗಿಲ್ಲ ನಿ-
ರವಿವೇಕಿಯಾದೆನಗೆ ತತ್ಪ್ರೇಮಸುಖವ ದಯಪಾಲಿಸೈ ಕರುಣಾಕರ ॥ ೧ ॥

ಇಂದೀ ಪರೀಕ್ಷೆಯೊಳಗುತ್ತೀರ್ಣನಾಗಮದ-
ರಿಂಪ ಕಜ್ಜರಿಯಲ್ಲಿ ಪದಿನೈದು ದಿನದೊಳಗೆ
ಮುಂದಿಗಾಸನವ ತೋರವಲಿರ್ದನಧ್ಯಾಪಕಂ ಕಂಡು ತಿಳಿದೀತಗೆ
ಮುಂದೆ ಮತ್ತಭ್ಯಾಸಮಂ ಮಾಡು ಬಿಡಬೇಡ-
ವೆಂದು ಬಗೆಬಗೆಯಿಂದ ಪೇಳಲಿದಕೊಪ್ಪದ-
ಲ್ಲಿಂದ ಲಿಂಗದ ಹಳ್ಳಿಗೈತಂದನಾವುದೋ ಕಾಯಕವ ನೆಸಗಲೆಂದು ॥ ೨ ॥

ತನಯನೈತರಲಿಲ್ಲವೆಂದೀತನಿರ್ದೆಡೆಗೆ
ಜನನಿ ಬಂದೈಮಗನೆ ಬಾವೂರ್ಗೆ ಪೋಗುವಣ
ನಿನಗೊಂದು ಕನ್ನೆಯಂ ಗೊತ್ತುಮಾಡಿಹೆನಿದೇ ತಿಂಗಳೊಳು ಮದುವೆಯಾಗಿ
ಕೊನೆಗಾಣಿಸೆನ್ನ ಪೋಷಿಸ ನಿನ್ನ ಕರ್ತವ್ಯ-
ವೆನೆನುತ್ತ ಪೇಳಲಾ ಮಾತೆಯಿನ್ನೊಂದಬ್ದ-
ವನು ಕಳೆದು ಬಂದೊಡೆನ್ನಯ ಬಗೆಯ ನೋಪೆವೆನೆಂದುಸುರಿ ತಾಯಿಯನು ಕಳಿಸಿ ॥ ೩ ॥

ಮನದೊಲವಿನಿಂ ಸ್ವತಂತ್ರಪ್ರಾಥಮಿಕ ಶಾಲೆ-
ಯನು ತೆಗೆದನಂದು ಲಿಂಗದಹಳ್ಳಿಯೊಳಗಿವಂ
ಜನಕೊಪ್ಪುವಂತೆ ಬಾಲಕರನೋದಿಸುತುಳಿದ ವೇಳೆಯೊಳು ಸಭ್ಯರೊಡನೆ
ವಿನುತನಿಜಗುಣಯೋಗಿವರರ ಶಾಸ್ತ್ರಾರ್ಥಚಿಂ-
ತನವನೆಸಗುವದೊಳಿತಿದೆಂದು ಸಂಸ್ಕಾರದಿಂ
ದಿನದಿನಂ ಬಿಡದೆಳಸುತಾವೂರೊಳಿರ್ದೋರ್ವ ಚನ್ನಬಸವೇಶನೆಂಬ ॥ ೪ ॥

ವೀರಮಾಹೇಶ್ವರಂ ವೃದ್ಧಂ ಗುಣಾಢ್ಯನಾ-
ಚಾರನಿಷ್ಠಂ ಜನಪ್ರಿಯನೊಳ್ಪಿದಂ ನಿಜಗು-
ಣಾರಾಧ್ಯಶಾಸ್ತ್ರಮಂ ಬಲ್ಲಾತನಿರ್ದನಾತನ ಸಮಾಗಮನದಿಂತು
ಗೌರವಾನ್ವಿತನಾಗಿ ಸತ್ಕ್ರಿಯಾಚರಣೆಯಿಂ
ಸಾರತರಮಾದ ಕೈವಲ್ಯಪದ್ಧತಿಯನುಂ
ಪಾರಮಾರ್ಥಸುಗೀತೆಯುಂ ಕಲಿತು ಸರ್ವರಿಗೆ ಬೇಕಾಗಿ ಮೆರೆದಿರ್ದನು ॥ ೫ ॥

ಮುಂಪೆ ಮೂಬರಿಸಂಗಳಾದ ಬಳಿಕಂ ಮತ್ತೆ-
ಬಂದು ಮಗನೇ ಮದುವೆಗೇನೆಂಬೆ ಬಾಪೂರಿ-
ಗೆಂದು ಬಿಡದೊತ್ತಾಯಮಂ ಮಾಡಲಾ ಮಾತೆಯಂ ಜೇರಿ ಕರೆದು ತಾಯೆ
ಮುಂದಿಯಂತೆನಗೆ ಸಂಸೃತಿಯಾಶೆಯಿಲ್ಲವದ-
ರಿಂದ ಮದುವೆಯೆಬೇಡ ನಿನಗದರ ಚಿಂತೆಯೇ
ಕೆಂದಿಗುಂ ಮದುವೆಯಿಂದೇನೊಂದು ಸುಖವಿಲ್ಲ ಕಷ್ಟಮಿಹುದೆಂದುಸುರದನಿತು ॥ ೬ ॥

ಮದುವೆಯಾದೊಡೆ ಪತ್ನಿ-ಸುತರ ಮೋಹದೆ ಬೀಳ್ದು
ಹೃದಯದಿಂ ನಿನ್ನಂ ತಿರಸ್ಕರಿಸದಿರೆನು ಸೊಸೆ-
ಕದನಮಂ ತೆಗೆಯದಿರ್ದಪಳೆ ನಿನ್ನೊಡನತ್ತೆಯರನು ಪ್ರೇಮದೆ ಸೇವಿಪ
ಸುದತಿಯರು ವಿರಳವಿದು ನಿನಗೆ ಗುರುತಿಲ್ಲವೇ
ಮದುವೆಯಂ ಮಾಡಿದೊಡೆ ಮಕ್ಕಳೆನ್ನಂ ಪೋಷಿ-
ಸದೆ ಮಾಣರೆಂಬುದಿದು ನಿನ್ನ ತಿಳಿಗೇಡಿತನವಿದಕೇಕೆ ಹಂಬಲಿಸುವೆ ? ॥ ೭ ॥

ಎಂತು ನಿನ್ನಂ ಪೊರೆವುದೆನ್ನ ಕರ್ತವ್ಯವಿಹು-
ದಂತು ಮಾಯಾಪಾಶದಿಂದ ಕಡುಬಿಗಿವಡೆದ-
ನಂತ ಕಷ್ಟದೊಳಳಲುವೆನ್ನನೇ ಕಾಯ್ದುಕೊಳ್ಳುವದೆನ್ನ ಕರ್ತವ್ಯವು
ಇಂತಿಹುದರಿಂದ ಸಂಸಾರನಾನಾವಿಷಯ
ಸಂತತಿಯೊಳುಳ್ಳ ದೋಷವನರಿದಿಳಾಭೋಗ-
ಕಂ ತಿಲಾಂಜಲಿಯನಿತ್ತಾನಂದಮಯಮುಕ್ತಿಯಂ ಪಡೆಯಲಾತುರಿಪೆನು ॥ ೮ ॥

ಆದರಿನೆನ್ನಾಶೆಯಂ ಮಾಡದಿರು ಕೇಳು ನಿ-
ನ್ನುದರದೊಳು ಜನಿಸಿದಿನ್ನೋರ್ವ ಮಗನುಂಟವಂ
ಮುದದೆ ನಿನ್ನಂ ಪೊರೆಯದಿರಲಾರನೆನಗಿಂದ ಬಲುದುಡಿಸಬಲವಂತನು
ಪದೆದು ಮೊಲೆಯೂಡಿ ಪೋಷಿಸಿದ ಋಣಭಾರವಿಳಿ-
ವುದಕೆ ಮೂಬರಿಸಮುಂ ಸಾಲೆಯೊಳು ಸಂಪಾದಿ-
ಸಿದ ಮೂರುನೂರುರೌಪ್ಯಕಗಳಂ ಪಿಡಿ ಕೊಡುವೆನಾ ತಾಯೆ ಪೋಗೂರಿಗೆ ॥ ೯ ॥

ಇನಿತರಿಂದತಿಸಮಾಧಾನಮಂ ಪೊಂದು ನೀ-
ನೆನಗಾಗಿ ಚಿಂತೆಯಂ ಮಾಡದಿರು ಮಗನೆಂಬ
ಕಸಿಕರಂಡೊರೆ ಜನನಿಯೆಂಬ ನೇಹವನಿಂದು ಮನಸಿನಿಂ ಬಿಟ್ಟಿರುವೆನು
ನಿನಗೆನಗೆ ಸಂಬಂಧವಿಲ್ಲೆಂದು ನಂಬು ಮುಂ-
ದಿನ ಸುಖಕ್ಕಡ್ಡಾಗಬೇಡ ದಾರಿಯನು ಕೊಡು
ಘನತರಾವೋದದಿಂ ಪೊರಮಟ್ಟು ಪೋಪೆನಾನೆಂದನೀ ಸುವಿಚಾರಿಯು ॥ ೧೧ ॥

ತನಯನಾಡಿದ ವಿರಾಗೋಕ್ತಿಯಂ ಕೇಳ್ದಿದೇಂ
ಕನಸೊ ಬೇರಾವುದೋ ಎಂದು ದಿಗ್ಭ್ರಾಂತಿಗೊಂ-
ಡನುತಾಪದಿಂದ ಮೌನಂದಳೆದು ಕುಳ್ಳಿರ್ದ ನೀಲಮಾಂಬಿಕೆಯುಡಿಯೊಳು
ಧನಪದಂ ಚೆಲ್ಲಿಕೊಟ್ಟಾ ತಾಣದಿಂದ ಸು-
ಮ್ಮನೆ ಪೋದನಸಮನಿಜಗುಣರ ಶಾಸ್ತ್ರವನೋದ-
ಲೆನುತ ಹುಬ್ಬಳ್ಳಿಯೊಳಗಿರುವ ಸಿದ್ಧಾರೂಢರೆಡೆಗತಿಕುತೂಹಲದೊಳು ॥ ೧೨ ॥

ಆರೂಢರಲ್ಲಿ ಜರುಗಿದ ಜಾತಿಸಂಕರಾ-
ಚಾರಲಿಂಗತ್ಯಾಗಮುಖ್ಯದುಷ್ಪದ್ಧತಿಗೆ
ಸೈರಿಸದೆ ರುದ್ರಾಕ್ಷಮಠದಲ್ಲಿ ಸ್ನಾನಲಿಂಗಾರ್ಚನೆಯನೆಸಗಿ ಬಳಿಕ
ವೀರಶೈವರೊಳು ಭಿಕ್ಷಾನ್ನಮಂ ತಂದುಣುತ
ಸಾರಪಾಠಪ್ರವಚನಕ್ಕಾಗಿ ಪೋಗಿ ಸಿ-
ದ್ಧಾರೂಢರಿಂ ತಿಳಿದನೋದಿ ಪರಮಾನುಭವಬೋಧಾದಿ ಶಾಸ್ತ್ರಗಳನು ॥ ೧೩ ॥

ಒಂದುದಿನ ಭಿಕ್ಷಾನ್ನಕಾಗಿ ಸಂಚರಿಸುತಿರ-
ಲೊಂದು ಮನೆಯೊಳಗೋರ್ವಳಿರ್ದಳಿವನಿಗೆ ವಿರಹ-
ದಿಂದ ಮನಸೋತೊಳಗೆ ಬಾರೆಂದು ಕರೆದು ಬಲುಹಿಂ ಜೋಳಿಗೆಯನು ಪಿಡಿದು
ಮುಂದಕೆಳೆಯಲ್ಕಿ ಗುಪ್ತಾವಿರತಿಧೈರ್ಯಗಂಗ
ಳಿಂದ ಜೋಳಿಗೆಯನಾಕೆಯ ಹಸ್ತದೊಳು ಬಿಟ್ಟು
ಹಿಂದಕ್ಕೈತಂದನಾತುರದೊಳತಿಪಾಪಿ ನಿನ್ನಂ ನೋಡಬಾರದೆನುತ ॥ ೧೪ ॥

ಚೆಲುವೆ ತಾರುಣ್ಯವತಿಯೊಂದಿನಿಸು ಭಯವಿಲ್ಲ
ಪೆಸಸಿ ವಿರಹಾಗ್ನಿಯಿಂ ಬೆಂದು ಪಿಡಿದೊಳಗೆಳೆವ-
ಲಲನೆಗೊಪ್ಪದೆ ಮರುಳ್ದನಂದಿನಿಂ ಪೋಗಲಿಲ್ಲಾವೋಣಿಗೀ ಸುಕೃತಿಯು
ನೆಲಮೊಳೊಳ್ಗಟ್ಟಿಗೆಯ ಪೆಣ್ಗೊಂಬೆಯನುಸಹಿತ-
ನೊಲಿದು ಪುರುಷಂ ಮುಟ್ಟಲಾಗದೆಂದರಿದ ಜನ-
ರುಲಿವುತಿರೆ ತಾಂ ಮುಟ್ಟಿ ಕರೆದ ರಮಣಿಯನುಳಿದ ಹಾಲಯ್ಯಗೆಣೆಯಾವನೋ॥ ೧೪ ॥

ತಿನಲೆ ಕೊಲ್ಲದು ನಂಜು ಪೆಣ್ಣೆಂಬನಂಜು ತಾಂ
ನೆನಹುಮಾತ್ರದೆ ಕೊಲ್ವುದದರಿಂದ ಮೋಕ್ಷಾರ್ಥಿ-
ಜನರದಕ್ಕಂಜರೆಂದೊರೆದ ನಿಜಗುಣರಭಿಪ್ರಾಯಕನ್ವಯಿಸಿ ಮೆರೆದ
ಘನಶಮೆದಮೆಗಳುಳ್ಳ ಹಾಲಯ್ಯನಮೃತದಿಂ
ಪೆಸಸಿದಂ ಪೆಂಪುಸೊಂಪುಗಳಲಂ ಪಿಂದಿವನ-
ನನುಸರಿಸಿ ಬಾಳ್ವವೆಂದೊರೆದೊಡತಿಶಯಮಲ್ಲಮಿವನತುಲಧನ್ಯನಹನು ॥ ೧೫ ॥

ಉಳಿದೆಲ್ಲ ಸಾಧಕರಿಗಿಂದಲ್ಲಿ ಮೇಲಾದ-
ನೊಲಿದೀತನಿಂದ ಕೆಲಬರು ಶಾಸ್ತ್ರವಿಷಯಮಂ
ತಿಳಿದರಾರೂಢರೀತನ ಮತಿವಿಚಾರಗಳಿಗಹುದೆಂದು ಬಣ್ಣಿಸಿದರು
ಕೆಲದಿನದೊಳವರ ಸಂಸರ್ಗದಿಂದೀತನೊಳು
ಬೆಳೆದುದಾತ್ಮೇಷ್ಟಲಿಂಗತ್ಯಾಗಸತ್ಕ್ರಿಯಾ-
ಕುಲವಿಡಂಬನಗಳತಿಸಂಶಯಮದಾದಡುಂ ಬಿಡಲಿಲ್ಲವಾ ಲಿಂಗವ ॥ ೧೬ ॥

ಆವುದಾನೊಂದು ಕಾರ್ಯವನು ಸುವಿಚಾರಾನು
ಭಾವಮುಂ ಶಾಸ್ತ್ರಮುಂ ಪ್ರಾಕ್ತನರ ನಡತೆಯುಂ
ಕೋವಿದರ ಸಮ್ಮತಿಯುಮೊಂದಾವಡಲ್ಲನೇ ಮಾಡದಿರುವೀ ಜಾಣನು
ಈ ವೀರಶೈವತತ್ವದ ಮೇಲೆ ತನಗುಳ್ಳ-
ತೀವಸಂಶಯವನೇ ಕಂಡಕಂಡಶಿವಾನು-
ಭಾವಿಗಳ ಮುಂದಿಟ್ಟು ಚರ್ಚೆಯಂ ಮಾಡಲಾರಂಭಿಸಿದನರಿವುದೆಂದು ॥ ೧೭ ॥

ಇಂತು ಹುಬ್ಬಳ್ಳಿಯೆರಡಿಟ್ಟಿನ ಮಠಾರ್ಯನೊಡ-
ನುಂತಿಂಗಳನಕ ಚರ್ಚಿಸಿದನದರಿಂ ಮನಂ
ಶಾಂತಿಯಂ ಪೊಂದದಿಹುದಂ ಕಂಡು ತಚ್ಚರವರೇಣ್ಯನೆಲವೋ ನಿನ್ನಯ
ಸ್ವಾಂತಸಂಶಯಮಿಲ್ಲಿ ಪೋಗದೆಮ್ಮಿಗನೂರಿ-
ಗಂ ತಳರು ನೀನಲ್ಲಿ ಜಡೆಯಸಿದ್ಧರೆನಿಪ್ಪ-
ನಂತಮಹಿಮಾನಿಧಿಗಳಿರ್ಪರವರಿಂದೆಲ್ಲ ಸಂಶಯಂ ಕೆಡುವುವೆನಲು ॥ ೨೮ ॥

ಮೊದಲೆ ತನ್ಮಹಿಮನ ವಿಶೇಷಜನಪಾವನಾ-
ಸ್ಪದದಿವ್ಯಲೀಲೆಯಂ ಬಹುಜನರಿನುತ್ಸವಾ-
ಭ್ಯುದಯಮೆನೆ ಕೇಳ್ದಕಾರಣಂ ಪೊರಮಟ್ಟನೀತನೆಮ್ಮಿಗನೂರಿಗೆ
ನದಿ ಹಳ್ಳ ಕೆರೆ ಬಾವಿಗಳೊಳು ಮಿಂದರ್ಚಿಸುತೆ
ಸಮುದದಿಂ ಭವತಿಭಿಕ್ಷೆಯತಂದು ಸೇವಿಸುತೆ
ಮದನಹರನಂ ನೆನೆವುತಂ ಪ್ರತಿದಿನಂ ಮೂರುಹರದಾರಿಯಂ ನಡೆವುತ ॥ ೨೯ ॥

ಬಿಳಿಗಂಬಳಿಯ ಕೊಪ್ಪೆಯಿಂದ ಕೌಪೀನದಿಂ
ತಿಳಿಗಾವಿಯಂಗಿಯಿಂ ಕಾಟಪಾವುಡಗಳಿಂ
ಹೊಳೆವತಂಬಿಗೆಯಿಂದ ಭೂತಿರುದ್ರಾಕ್ಷಮಾಲೆಗಳಿಂದ ಬೆತ್ತದಿಂದ
ಬಲಿವತ್ರೋಳಾಧಾರದಿಂದ ರಾಜಿಸಿ ಪೋಪ
ಚೆಲುವಹರೆಯದ ಸತ್ಯಶೋಧಕನ ವೇಷಮಂ
ನೆಲದೊಳೀಕ್ಷಿಪರ ಕಂಗಳ್ತಣಿಯವೇ ಸತ್ವಭಾವನವರ್ಪೊಂದದೇ ? ॥ ೩೦ ॥

ಜಡೆಯಸಿದ್ಧರು ವಾಸಿಪ್ಪೂರಾವುದವರ ನಡೆ-
ನುಡಿಗಳೆಂತಿಹವೆಂದು ಪೋಗುತಿಹ ಮಾರ್ಗದೊಳು
ಕಡುತವಕದಿಂಪೋರ್ವ ಪಥಿಕನಂ ಕೇಳಲವನೈ ಮಹಾಪುಣ್ಯರೂಪ
ಬಿಡದೆ ಸಂಚರಿಸುತಿರ್ಪರ್ನಿಜೇಚ್ಛೆಯವರಿಗೊಂ-
ಡೆಡೆಯಿಲ್ಲವಿಲ್ಲಿಗರೆಹರದಾರಿಯೊಳಗಮೋ
ಗಿಡದ ಗುಂಪಿನೊಳು ಕಾಣ್ಬರೊಳಂಡಿಹರವರ ಬಗೆಯನಾನೇಂ ಪೇಳಲಿ ॥ ೩೧ ॥

ಸ್ವೈರದಿಂ ತಿರುಗುತಿಹರೂಟವಿಷಯಗಳಿಗಾ-
ರಾರನಾಶ್ರಯಿಸದಿಹರಾಗಳುಂ ಪುರ್ಹರಂ-
ತಾರೋರ್ಧ್ವವೃತ್ತಿಯೊಳು ಪರಮೇಷ್ಟಲಿಂಗವಗಲಿಪ ಕಾಯರಾಗಿ ಮತ್ತೆ
ಸಾರಸ್ಥಿತಪ್ರಜ್ಞರಾಗಿ ಬಾಹ್ಯವಮರೆದು
ಮೀರಿದಾನಂದಮಯರಾಗಿ ಚಿತ್ತಲಯವಾಗಿ
ಧಾರಣೆಯೊಳವಿರತಂ ವಿಧಿನಿಷೇಧಾತೀತರಾಗಿ ಪರಿಶುದ್ಧರಾಗಿ ॥ ೨೨ ॥

ಅಪರಾವಗಂ ನಿರಂಕುಶಿತವೃತ್ತಿಯೊಳಿರುವ-
ರವರು ಚಳಿಮಳೆ ಬಿಸಿಲು ಹಸಿವು-ತೃಷೆಗಳನೆಣಿಸ-
ರವರಂಗವಾಡುವದು ಪ್ರಾರಬ್ಧವಶದಿಂದ ಪೆರ್ಚಾಗಿ ತಾಂಬೂಲವ
ಸವಿವರ್ಸಿಜಾಂಘ್ರಿಯುಗದರ್ಶನಕೆ ಪೋದವರ
ಭವಿತವ್ಯಸೂಚನೆಯದಾಗುತಿರ್ಪುದು ತಪ್ಪ-
ದವರ ನುಡಿಯಿಂ ಕಾರ್ಯದಿಂ ಸಂಜ್ಞೆಯಿಂದೆಂದು ಬಿತ್ತರಿಸಲಪನು ಕೇಳ್ದು ॥ ೨೩ ॥

ಬಳಿಯೊಳಿಹ ಬೇರೊಂದು ಪಳ್ಳಿಗೈತಂದಲ್ಲಿ-
ಯೆಲೆಯಡಕೆ ತಂಬಾಕ ಸುಣ್ಣ ಗೋದಿಯಹಿಟ್ಟು-
ಗಳನೆಲ್ಲ ಬಿಲಿತುಕೊಂಡಾಮಹಿಮನೆಡೆಗೆ ಪೊರಮಡಲತ್ತಲಿದನು ತಿಳಿದು
ತಳುವದಾ ಜಡೆಯಸಿದ್ಧಂ ತನ್ನ ಬಳಿಯಲ್ಲಿ
ಕುಳಿತಿರ್ದ ಭಕ್ತರಂ ಕುರಿತು ಕಸದೆಗೆಯಿರೈ
ನೆಲವಸಾರಿಸಿರಿ ಸೀಪೋರ್ವ ಶಿವಯೋಗಿಗಳು ಬರುವರೀರೆಗೆ ನಿಲ್ಲಿರಿ ॥ ೨೪ ॥

ಇಂತೆಂದು ತಾನಿರುವ ಬೈಲಿನೊಳು ಗಡಬಡಿಯು-
ನಾಂತಿರಲ್ಬೆರಗಾಗಿ ನೆರೆದವರಿದೇನೆಂದು
ಸಂತಸದೊಳೀಕ್ಷಿಸುತ್ತಿರಲೂರಪೊರಗಣಿಂ ಬಂದನೀ ಮಹಿಮನಾಗ
ಮುಂತೆ ನೆರೆದವರೊಳೋರ್ವನ ಪಂಜೆಯಂ ಕೊಂಡು
ಶಾಂತಿಯಿಂ ಮುದುರಿ ಲಿಂಗವಮುಡುಗುತಿಹ ಸಜ್ಜೆ-
ಯಂತೆಸಗಿ ಕಂಠದೊಳು ಧರಿಸಿ ಬಳಿಯೊಳಗುಳ್ಳ ಜೋಲಿಯೊಳು ಕೋಲುಮುರಿದು ಬಿಸ

ಮನವೊಪ್ಪಿಕೈಯ್ಯೊಳವನಂತು ಶಿವಯೋಗಿಯಾ-
ದೆನು ತಕ್ಕುದೀ ಮಹಾಶಿವಯೋಗಿಯಾಗುವದು
ಎನಿತು ಚೆಲ್ವಾಗಿರುವದಿದು ಚೆಂದವಲ್ಲವೇ ಶಿವಯೋಗಿಯೆಂದು ಕಳಿತು
ಘನಭಕ್ತಿಯಿಂದಿಷ್ಟಲಿಂಗಮಂ ಪೂಜಿಸಂ
ತನುವಿನಿಂ ನಿಜಕರದೊಳೊದಗಿದೆಲೆಗಳಧರಿಸಿ
ವಿನಯದಿಂ ನಮಿಸಿ ಶಿವಶಿವಮಹಾದೇವ ಎಂದೆನಲಾದನಾ ಮಹಿಮನು || ೨೭ ||

ಆತನ ನಿರಂಕುಶಿತ ಸದ್ವೃತ್ತಿಯಂ ಮತ್ತ-
ಮಾತನ ವಿಶೇಷವೈರಾಗ್ಯಮಯ ಲಕ್ಷಣವ-
ನಾತನ ಶರೀರಬಾಹ್ಯಕ್ರಿಯಾಸಿವಹ ವಿಸ್ಮೃತಿಯನವಧೂತಪಥವ
ಆತನ ನಿಜಾನಂದಭಾವಮಂ ನಗ್ನತೆಯ-
ನಾತನ ವಿಚಿತ್ರಪಾವನ ದಿವ್ಯಲೀಲೆಗಳ
ನಾತನುತ್ತಮರೂಪಮಂ ನೋಡಿ ಭಯಭಕ್ತಿಗೂಡಿ ನೆರೆ ಪದೆದೀತನ || ೨೮ ||

ಪರತರಾನಂದ ಜಲನಿಧಿಯುಕ್ಕಿ ಪೊರಮೂಡಿ
ಪರಿದುದಂಗದೊಳತುಲಶಕ್ತಿಪಾತಂ ಪೊಣ್ಮಿ
ಮೆರೆದುದಸನೇಷ್ಟಲಿಂಗವ ತೊರೆಯಬೇಕೆಂಬ ಸಂಶಯಂ ನಿಲ್ಲದಂತೆ
ಮುರಿದೋಡಿದುದು ಶಿವಾದ್ವೈತ ನಿರಸನಬುದ್ಧಿ
ಸರಿದುದಪರ ಭವಯೋಗಿಯ ಚೆಂದವೆಂದೊರೆದುದು
ಪರಮೇಷ್ಟಲಿಂಗಧಾರಣ ಪೂಜೆಗಳ ಸಂಜ್ಞೆಗಳನು ತೋರಿದುದರಿಂದ || ೨೯ ||

ಮನದ ಸಂಶಯವನಾನೊರೆವುದಕ್ಕಿಂ ಮೊದಲೆ
ನನಗೆ ತಾವೇ ತಿಳಿದು ಪೇಳ್ದು ಪರಿಹರಿಸಿದರು
ಚಿನುಮಯಾತ್ಮಕರಾದ ನಿರುಪಮಾರೂಢರಿವರಹುದಹಾ ಪೂರ್ವದಲ್ಲಿ
ಎನಿತು ಪುಣ್ಯವನೆಸಗಿದೆನೊ ಜನ್ಮವಿದರೊಳೀ-
ಘನಮಹಿಮರೆನಿಸಿವರ ಚರಣನೀರೇಜ ದ-
ರ್ಶನವಾದುದಿಲ್ಲದೊಡನರ್ಥಮಂ ಪೊಂದದಿರ್ದೆನೆ ವಿಷಯವಾಸದಿಂದ || ೩೦ ||

ಈ ತೆರದೊಳುತ್ಸಾಹವೆರಸಿ ನೆನೆಯುತ್ತಮಿರ-
ಲಾ ತಪೋಧನರುಂಬಲೇನಾದರುಂಟೊ ಎನ-
ಲೀತನಾಲಿಸಿ ಮೊದಲೆ ತಂದಿರ್ದ ಹಸಿಯ ಕಣಕವನೀಯುಲದನು ಕೊಂಡು
ಪ್ರೀತಿಯಿಂದಮೃತಕೊರೆಗಂಡು ಸೇವಿಸಿ ಬಳಿಕ-
ಮಾತುರದೊಳಡಕೆಯನು ಬೇಡಿದೊಡಮಿವರ ಪರಿ-
ಪೂತಮೂಢಾರೂಢತೆಯನು ಬಾಹ್ಯದೊಳು ಪ್ರಕಟಿಸಲೆಂದು ಬಗೆದೀತನು ॥ ೩೦ ॥

ಪೂಗೀಫಲೈಕಪ್ರಮಾಣಚೂರ್ಣವನಿತ್ತ-
ನಾಗ ಬಾಯೊಳು ಮಡುಗಿಕೊಂಡನೆಲೆಯಂ ಬೇಡೆ
ರಾಗದಿಂ ತಂಬಾಕಮಂ ಕೊಟ್ಟನದನಗಿಡಡವರು ಸುಣ್ಣವ ಬೇಡಲು
ಬೇಗನಡಕೆಯನಿತ್ತನಿಂತು ಬದುಲಿಸಿ ಕೊಟ್ಟೊ-
ಡಾ ಗುಣಾತೀತರೇನೊಂದುವಂ ಲಕ್ಷಿಸದೆ
ಭೋಗಿಸಿದರವುಗಳಂ ಸಹನಮಿಹುದೀ ವೃತ್ತಿಯೆಂದಿವಂ ತಲೆದೂಗುತ ॥ ೩೧ ॥

ತಿಳಿಯಲಧ್ಯಾತ್ಮವಿದ್ಯಾವಿಮೂಢತೆಯೆಂಬ
ಬಲೆಯೊಳಗೆ ಸಿಲುಕಿ ಶಿವಯೋಗಮಾರ್ಗವನುಳಿದು
ಹೊಲಬನರಿಯದೆ ಶಿವಾದ್ವೈತಶಾಸ್ತ್ರವನುಪೇಕ್ಷಿಸಿ ಬರಿದೆ ದಿವಸಗಳನು
ಕಳೆದೆನಿನ್ನಾವ ಮಹಿಮನ ಪೊಂದಿ ಮಹಿತ-
ಷಟ್ಸ್ಥಲಮಹಾವಿದ್ಯೆಯಂ ಕಲಿವುದಾನೆಲ್ಲಿ ಪೋ-
ಗಲಿಯೆಂದು ಮನದೊಳಾಲೋಚಿಪನಿತಕ್ಕವರು ಬೇರೋರ್ವನಂ ನಿರುಕಿಸಿ ॥ ೩೨ ॥

ಎಲ್ಲಿದ್ದೆನಲ್ಲಿಗೇ ಹೋದಡಾಯ್ತಿಂತೆಂದು
ಸೊಲ್ಲಿದಮರ್ೂರುಬಾರದನೀ ಸುಖೇಚ್ಛು ಕೇ.
ಳ್ದಲ್ಲಿಗಿನ್ನೇಕೆ ಪೋಪುದು ? ಪ್ರಯೋಜನವೇನು ? ಸಾಕಾಗಿ ಬಂದಿರುವೆನು
ಇಲ್ಲಿಂದ ಬೇರೆಡೆಗೆ ಪೋಪುದೊಳಿತಾದಡುಂ
ಬಲ್ಲಿದತಪಸ್ವಿಗಳ ಮಾತಂ ನಿರಾಕರಿಪು-
ದಲ್ಲವೆಂದರಿದು ಹುಬ್ಬಳ್ಳಿಯಾರೂಢರೆಡೆಗೈತಂದನಂದು ಮಗುಳ್ದು ॥ ೩೩ ॥

ಕೆಲದಿನಗಳೊಳು ಮುಂದೆ ವೈರಾಗ್ಯಪೂರ್ಣರ-
ರ್ಗಳಲಿಂಗಪೂಜಾಪರಾಯಣರು ಶಾಸ್ತ್ರವಿದು-
ಗಳನುಭಾವಿಗಳಾದೆಳಂದೂರ ಬಸವಲಿಂಗಸ್ವಾಮಿಗಳು ಚರಿಸುತ
ತಿಳಿದು ಹುಬ್ಬಳ್ಳಿಗೈತಂದು ಚರ್ಚೆಯಮಾಡ-
ಲೆಳಸಿ ಸಿದ್ಧಾರೂಢರೆಡೆಯಸಾರ್ದರು ಮಹೋ-
ಜ್ವಲವಿಪುಲತತ್ವಾರ್ಥಸಂತುಷ್ಟಜೀವನರ್ವಿಜ್ಞಾತಶಾಸ್ತ್ರಕ್ರಮರ್ || ೩೪ ||

ಇವರು ಗದುಗಿನ ಜಗದ್ಗುರುತೋಂಟದಾರ್ಯಮಠ-
ದವಿಕಲವಟೂತ್ತಂಸರಿರ್ದರಾದಿಯೊಳೊಂದು-
ನೆವದಿಂಪ ವೈರಾಗ್ಯಮಂ ತೊಟ್ಟು ದೇಶಪರ್ಯಟನವೆಸಗುತ್ತ ಪೋಗಿ
ತವೆ ಯೆಳಂದೂರ ಮಠದಧಿಕಾರಮಂ ಪಡೆದು
ಭುವನದೊಳು ನಿರ್ವಾಣಪದಹೇತುವಾದಜ್ಞಾ-
ನವನು ಬೋಧಿಸಿ ಪೊರೆದರಖಿಲಶರಣಾಗತರ್ಕಳನು ಕಾರುಣ್ಯದಿಂದ || ೩೫ ||

ಆರೂಢರಾಗ ನಿಜಗುಣಯೋಗಿಗಳ ಶಾಸ್ತ್ರ-
ಸಾರಮಂ ಜನಕೆ ಬೋಧಿಸುತಿರ್ದರದರೊಳೀ
ಧೀರಚರವರ್ಯರಾಕ್ಷೇಪವಂ ಮಾಡಲವರದಕುರೆ ಸಮಾಧಾನವ
ಪೂರಯಿಸೆ ಪೇಳಲಾಗದೆ ತನ್ನ ಶಿಷ್ಯರಂ
ತೋರಿದರ್ಚರ್ಚೆಗೀಯತಿಗಳೊಡನಾ ಶಿಷ್ಯ
ವಾರದೊಳೆ ಮುಂದುವರಿದೆಸಗಿದಂ ಚರ್ಚೆಯಂ ನಮ್ಮೀ ಚರಿತ್ರೇಶನು || ೩೬ ||

ಯತಿವರನ ಶಾಸ್ತ್ರಾನುಭವಶಕ್ತಿಯಂ ತಿಳಿವ
ಮತಿಸಾಲದಾರೂಢರುಸಿಕರಾದರು ಶಿಷ್ಯ-
ವಿತತಿಚರ್ಚಿಸುವಪಕ್ವವಿಚಾರವಿದು ಶಿಷ್ಯಜನರ ತಪ್ಪಲ್ಲ ತಿಳಿಯೆ
ಸತತಮವರಂ ಬೋಧಿಪಾರೂಢರದೆ ತಪ್ಪು
ವಿತತವೇದಾಂತದ ನಿಜಾರ್ಥವಿಲ್ಲಮದಿಲ್ಲಿ
ಕೃತಕತನಮುಂಟೀ ವೃಥಾಕಂಠಶೋಷಣಮದೇಕೆಂದು ಸುಮ್ಮನಾಗಿ || ೩೭ ||

ಪೊರಗೆ ಬಂದೊಂದು ತಂಬಿಗೆಯೆಮಗೆ ಬೇಕೀಗ
ತರಿಯೆಂದು ಕೇಳಲೆಮ್ಮೀ ಚರಿತ್ರಾಧಿಪಂ
ಭರದಿಂದ ಕೊಂಡು ಪೊರಮಟ್ಟನಾ ಯತಿವರರ ಪಿಂದೆ ಶೌಚಾಚಾರಕೆ
ಚರವರ್ಯರೋ ತಮ್ಮ ನೀನಾರದೇಕಿಲ್ಲಿ
ಯಿರುವೆಯೆಂದಿಂತೆಲ್ಲಮಂ ವಿಚಾರಿಸೆ ಮಹಾ-
ತ್ಮರೆ ನಾನು ಜೋಯಿಸರಹರಳಹಳ್ಳಿಯ ಸಾಲೆಮಠದೋರ್ವ ಮಾಣೇಕನು ‖ ೩೮ ‖

ಶಾಲಯ್ಯನೆಂಬ ಹೆಸರುಂಟೆನಗೆ ಸಂಸಾರ-
ಜಾಲದೊಳು ಸಿಗಲಂಜಿ ಬಂದೆನೀಯಾರೂಢ-
ಶಾಲಯಕ್ಕಧ್ಯಾತ್ಮವಿದ್ಯಾರ್ಜನಾರ್ಥಮಭ್ಯಾಸಮಂ ಮಾಳ್ಪೆನೆನಲು
ಕೇಳಿ ಮನದೊಳು ವಿಷಾದಂಬಟ್ಟು ಶಿವಾಶಿವಾ
ಕೀಳುವಿಷಯಕೆ ಮನಂಗೊಟ್ಟು ಕುಲಗೆಟ್ಟವಂ
ಹಾಳಾಗಿಹೋಗದಿರನೆಂದೆಣಿಸಿ ಮರುಗಿದರ್ಕರಗಿದರ್ಮಾಳ್ಪುದೇನು ‖ ೩೯ ‖

ಬಳಿಕೆಲವೋ ಮುರಿದು ತಾ ದಂತಧಾವನಕೊಂದು
ಚೆಲುವ ಕಡ್ಡಿಯನೆಂದು ಪೇಳಲಾಕ್ಷಣದಲ್ಲಿ
ತಿಳಿಯದಲೆ ನಾಲ್ಕುಬೆರಳುದ್ದವಾದೊಂದು ಕಡ್ಡಿಯ ತಂದುಕೊಡಲು ಕರದೆ-
ತಳೆದು ನಸುನಗುತಿದಂ ತಂದೆಯೇತಕ್ಕೆ ನೀಂ-
ತಿಳಿದಿಲ್ಲವಾಚಾರನಿಯಮವನು ಮರುಳೆ ಗೇ-
ಣಳತೆಯಿಹ ಕಡ್ಡಿಯಿಂ ಪಲ್ಲುಗಳನುಜ್ಜಬೇಕರಿ ಶಾಸ್ತ್ರಪದ್ಧತಿಯಿದು ‖ ೪೦ ‖

ಏನೋದಿದೈ ನಿಜಗುಣಾರಾಧ್ಯಶಾಸ್ತ್ರದೊಳು
ನೀನಿದನೆ ತಿಳಿದುಕೊಂಡಿಯೊ ಜಾಣ ಕೇವಲ-
ಜ್ಞಾನದಿಂ ಮುಕ್ತಿಯಪ್ಪುದೆ ಕ್ರಿಯಾಚರಣೆಗಳು ನಿಷ್ಪ್ರಯೋಜನವೆ ಪೇಳು
ಮಾನನಿಧಿಯೆನಿಪ ವೇದಾಂತಶಾಸ್ತ್ರಾನುಸಂ-
ಧಾನವುಂ ಮಾಡಬಲ್ಲವರಲ್ಲಿ ತಕ್ಕುದ-
ಲ್ಲೈ ನಿನಗೆ ಶಾಣಮಿದು ಕೆಡುವೆ ತಿಳಿ ಮತಿಯೊಳ್ವಿಚಾರಿಸೆನಲದನು ಕೇಳಿ ‖ ೪೧ ‖

ಶಿವಯೋಗಿರುಪದೊಳಿತು ಬಿಟ್ಟೆಡೆಗೆ ಪೋ-
ಗುವದುಚಿತವೆಂದು ನಿಜಲೀಲೆಯಿಂ ಸೂಚಿಸಿದ
ಪ್ರವಿಮಲಶ್ರೀಜಡೆಯಸಿದ್ಧೇಶ್ವರರ ವಚನವೀಗಳನುಕೂಲಿಸಿದುದೋ
ಇವನೆ ಸದ್ಗುರುರಾಯನಿರಲಹುದು ಅಹಹ ಬಿಡ-
ದಪಿದಿಡಲು ಚೇಕೀತನಡಿಗೆಂದು ನಿಶ್ಚಯಿಸಿ
ತವಕವೆನೆ ಶಕ್ತಿಪಾತವದುಣ್ಮೆ ತಲೆವಾಗಿ ನಮಿಸಿ ಕೈಮುಗಿದು ದೇವಾ ॥ ೪೨ ॥

ನೀವಲ್ಲದಿನ್ನಾರು ಗತಿಯೆನಗೆ ನಿಮ್ಮ ಪರಿ-
ಪಾವನಪದಾಂಬುಜವನಾಶ್ರಯಿಪೆನಾವೊಡಿತ-
ರಾವುದಾನೊಂದು ಮತಶಾಸ್ತ್ರದಿಂ ಪೇಳದೀ ನಿಜಗುಣರ ಶಾಸ್ತ್ರದಿಂದ
ಭಾವವೊಪ್ಪುವ ತೆರದೆ ಪೇಳ್ದುದಾಚಾರಮಂ
ಗೈವೆನೆನಗೀ ಸ್ಥಲಂ ಬೇಡವಾಗಿಪುದಿಂದು-
ಸಾವನಿಗೆ ಸಂಜೀವನಂ ದೊರೆದವೊಲು ನೀವೆನ್ನ ಪೊರೆವುದೆನಲು ॥ ೪೩ ॥

ವರನಿಜಗುಣಾರಾಧ್ಯ ಶಾಸ್ತ್ರದಿಂದೊಪ್ಪಿಸುವ-
ದರಿದಲ್ಲವಾದೊಡೆಸ್ಸ್ಮೀ ಮಹಾಶರಣರಾ-
ಚರಣೆ ಬಹುಕಠಿನವಿಹುದೆನ್ನವರಪಾರೂಢರಾಶ್ರಮದೊಳಿದ್ದು ನೀನು
ಅರಿಯದಿಪೆ ಸತ್ಕ್ರಿಯೋನ್ನತಿಯನೀ ಕಟ್ಟನೊಂ-
ದಿರುಕಿನೊಳು ಸಿಕ್ಕೊಡತಿಕಷ್ಟವದು ನಿನಗಾಗ-
ದಿರದು ಮೊದಲೇ ವಿಚಾರಿಸಿ ನೋಡು ಮನದೊಳೆಂದೀಯತೀಶಂ ನುಡಿಯಲು ॥ ೪೪ ॥

ವಿನಯದಿಂ ಸಾಷ್ಟಾಂಗವೆರಗಿ ಮಹನೀಯ ನಿ-
ಮ್ಮನುಪಮಾಚಾರಂಗಳೆನಿತು ಬಿಗುವಿರ್ದೊಡಂ
ಸನುಮತದೊಳಾಚರಿಸುವೆನು ಕರುಣಿಸೆನಲಾಶ್ರಯಂಗೊಟ್ಟರಾಯತಿಗಳು
ಮನವೊಪ್ಪಿ ಸಂಶಯಾಂಬೋಧಿಯಂ ದಾಂಟಿದೆನು
ಘನಚಿತ್ಕ್ರಿಯಾಮಾರ್ಗವಂ ಪಿಡಿಯಲಾದೆನಾ-
ನೆನುತ ಬಸವೇಶ್ವರಾದಿಪ್ರಮುಖರಂ ನೆನೆದು ಬಿಟ್ಟನಾರೂಢಮತವ ॥ ೪೫ ॥

**ಅಂತು ಸಂಧಿ ನಾಲ್ಕಕ್ಕೆ ಪದಗಳು ೧೩೨ ಮಂಗಲಂ**

§॥ ಶ್ರೀಗುರು ಶಂಭುಲಿಂಗಾಯ ನಮಃ ॥§



# ಐದನೆಯ ಸಂಧಿ ಪ್ರಾರಂಭ





**ಸೂಚನೆ:-**

ಗುರುಬಸಲಿಂಗಶಿವಯೋಗಿಯಿಂ ನಿಜಗುಣಾ-
ರ್ಯರ ಶಾಸ್ತ್ರಮಂ ಚಿದುಪದೇಶಮಂ ಪಡೆದು ಬಂ-
ಧುರವಿರಾಟ್ಪುರ ಚರಾಧೀಶಪಟ್ಟವನಾಂತನೀ ಜಗನ್ಮಾನ್ಯನೊಪ್ಪಿ ॥

ಭವರೋಗಿಯಾದೆನಗೆ ಜ್ಞಾನವೆಂಬೊಂದೌಷ-
ಧವನಿತ್ತು ಗುರುವೆಂಬ ವೈದ್ಯನಾ ಕಾಮಾದಿ
ವಿವಿಧವಿಷಯಗಳೆಂಬ ಪಥ್ಯಮಂ ಮಾಡಬೇಡೆಂದೊರೆದು ಕರುಣದಿಂದ
ಶಿವಪೂಜೆಯೆಂಬ ಘನಪಥ್ಯಮಂ ಪಿಡಿಸಿದಂ
ಸುವಿರಕ್ತಿಯಿಂರದಾನಪಥ್ಯಸೇವನೆಯಿಂದ
ಭವರೋಗವಳಿಯದಳಲುವೆನೆನಗೆ ವೈರಾಗ್ಯಮಂ ಕೊಟ್ಟು ಸಲಹು ಶಿವನೆ ॥ ೧ ॥



ಪರಮತಪಸ್ವಿ

ಲಿಂ. ಶ್ರೀ. ಮ. ನಿ. ಪ್ರ. ಬಸವಲಿಂಗಸ್ವಾಮಿಗಳು,

ಎಳಂದೂರು.

ಪ್ರೊರಮುಟ್ಟರಿವನನೊಡಗೊಂಡು ವೈಸೂರತ್ತ
ಚರವರ್ಯರ್ರೀತನಾರೂಢನೊಡನಿರ್ದನೆಂ-
ದರಿದು ಶಂಕಿತರಾಗಿ ನಾಲ್ಕಾರುತಿಂಗಳೊಳೆಬಳಕೆಯೊಳು ಸೇವೆಗೊಳದೆ
ಪೊರಗೆ ವಸ್ತ್ರಂಗಳಂ ತೊಳೆವ ಕಟ್ಟೆಗೆದರುವ
ನೆರೆ ಪಾಕಪಾತ್ರಗಳನುಜ್ಜುವೀ ಮೊದಲಾದ
ಪೊರಗಣ ಸಮಸ್ತಸೇವೆಯನಿತ್ತು ಶಾಸ್ತ್ರಮಂ ಬೋಧಿಸುತ್ತಿರ್ದರೊಲಿದು ॥ ೨ ॥

ಗುರುವರರು ಪ್ರೊರಬಳಕೆಯೊಳಗಿರಿಸಿರುವರೆಂದು
ಕೊರಗಲಿಲ್ಲಿದೆ ತತ್ಪಪಾಪಸಾಧನಂ ದೋಷ-
ಪರಿಹಾರದೊಂದುಪಾಯವಿದೆಂದು ನಂಬಿ ಸೇವಿಪಶಿಷ್ಯನಾಚರಣೆಯ
ಪರಿಕಿಸಿ ಬಳಿಕ್ಕ ಪ್ರಾಯಶ್ಚಿತ್ತಪೂರ್ವಕಂ-
ಬೆರಸಿಕೊಂಡರ್ತವ್ಮ ಶೀಲಾಚರಣೆಯೊಳಾ-
ದರದಿಂದ ನಿಜಗುಣರಶಾಸ್ತ್ರಮಂ ಪೇಳತೊಡಗಿದರು ಸರಿಯಾಗಿ ಬಿಡದೆ ॥ ೩ ॥

ಗುರುಕರುಣೆಯಿಂದ ನಿಜಗುಣರಾರುಶಾಸ್ತ್ರಮಂ
ಸರಿಯಾಗಿ ಸಂದೇಹವುಳಿಯದಂದದೊಳೋದಿ
ಸರಳಯೋಗಾಸನಂಗಳನಾರು ಕರ್ಮಗಳ ಮರ್ಮಮಂ ತಿಳಿದು ಮಾಡಿ
ಪರಮಷಟ್‌ಸ್ಥಲಮಹಾವಿದ್ಯೆಯೊಳು ಪರಿಣಮಿಸು-
ತಿರಲಾದನಿವನ ಯತ್ನವಿಚಾರಸತ್ಕ್ರಿಯಾ-
ಚರಣೆಯಂ ನೋಡಿ ಗುರುವರ್ಯನಾನಂದದಿಂ ಧನ್ಯನಹುದೆನುತಿರ್ದನು ॥ ೪ ॥

ಹೊತ್ತಿಗೆಯನೋದಿ ಶಾಸ್ತ್ರವನರಿದೆನೆಂಬವಂ
ಹೊತ್ತಿಗೆಯ ಜಾಣನೆನ್ನಿಸಲಹುದು ಶಾಸ್ತ್ರಾರ್ಥ-
ವೆತ್ತಬಲ್ಲನವಂ ಗುರೂತ್ತಮನ ಬೋಧೆಯಿಂದರಿದು ಹೊತ್ತಿಗೆಯನೋದಿ
ಮತ್ತೆ ಸಾಧನಪೂರ್ವಕಂ ಮನನಮಂ ಮಾಡಿ
ಚಿತ್ತಶಾಂತಿಯ ಪಡೆಯಲಪ್ಪುದಾ ಗುರುವಿಲ್ಲ-
ದೊತ್ತುವನುತಾಪವದು ಕೆಡದೆಂದು ಗುರುವರನನಿವನು ಪೊಗಳುತ್ತಿರ್ದನು ॥ ೫ ॥

ಶಿವತತ್ವಶಾಸ್ತ್ರಮಂ ಬಲ್ಲಾತನಾಗಿ ಪರ-
ಶಿವನಾಗಿ ಲಿಂಗಪೂಜಾಸಕ್ತನಾಗಿ ವಿಷ-
ಯವಿರಾಗಿಯಾಗಿ ಶಿವಧರ್ಮಪಾಲಕನಾಗಿ ಮೆರೆವವನೆ ಗುರುರಾಯನು
ಅವಿದಿಟ್ಟವನ ಸಂಶಯವ ಶಾಸ್ತ್ರಶಕ್ತಿಯಿಂ
ತವಿಸಿ ತನಗಾದಸುಭವವ ಮಾಡಿ ರಕ್ಷಿಸುವ-
ನವನುಳಿದ ಗುರುವೇಷದವರಿಂದ ಫಲವಿಲ್ಲವೆಂದು ಮನಗಂಡನಿವನು || ೬ ||

ಇರೆಯಿರುತ ಶಂಭುಲಿಂಗನ ಬೆಟ್ಟಕೈತಂದು
ಗುರುಶಿಷ್ಯರೀರ್ವರೊಂದತಿಮನೋಹರ ಶಾಂತಿ-
ಕರ ಗಹ್ವರದೊಳನುಷ್ಠಾನಕ್ಕೆ ಕುಳಿತುಕೊಂಡರು ಕೆಲವು ಕಾಲಾವಧಿ
ಗುರುವರ್ಯರೆಮ್ಮೀ ಚರಿತ್ರನಾಯಕನ ಘನ-
ತರಶಿವಾಚಾರನಿಷ್ಠೆಯನು ಪರಿಪಕ್ವಸು-
ಸ್ಥಿರಮನೋವೃತ್ತಿಯಂ ಕಂಡು ಪರಮಾನಂದ ತುಂದಿಲಮನಸ್ಕರಾಗಿ || ೭ ||

ಪಸಿದ ಪಸುಳೆಯು ಮುಸುಳ್ದುಮುಸುಡನೀಕ್ಷಿಸಿ ಮಾತೆ-
ಯೊಸೆದು ಪಾಲ್ಸಕ್ಕರೆಯ ನಲ್ಲುಣಿಸನೂಡುವಂ-
ತೆಸೆವ ಶಿಷ್ಯೋತ್ತಮಂಗಾಗಮದ ವಿಧಿವಿಡಿದು ಸುಮುಹೂರ್ತಮಂ ಸಾಧಿಸಿ
ಮಿಸುಪಮುಲಚಿಮುಪದೇಶವನೆಸಗಿದರು ಬಳಿಕ -
ಪೊಸತೆನಿಸ ಕಸವರದ ನಿಧಿಯತಿದರಿದ್ರಂಗೆ-
ವಸುಧೆಯೊಳು ದೊರೆದಂತೆ ಪರಮಸುಖಪರವಶದೊಳಾಳ್ದು ರೋಮಂಗಳೇಳ್ದು || ೮ ||

ಗುರುವೆ ಭಕ್ತರಕಲ್ಪತರುವೆ ನಿರುಪಮಸುಖದ
ಕುರುವೆ ಸುಜ್ಞಾನಮಂದಿರವೆ ಕಾರುಣ್ಯಸಾ-
ಗರವೆ ವೈರಾಗ್ಯಾಗರವೆ ಪರತರತತ್ವದಿರವೆ ಶಿವಶಾಸ್ತ್ರದರಿವೇ
ಹರಿವಿರಿಂಚಿ ಮುನೀಶ್ವರರಿಗಗೋಚರವಾದ
ಪರಬೊಮ್ಮವನೆ ತೋರಿ ನಿನ್ನಿರವಿನೆಂಪೊರೆದು
ಪೊರೆದೆ ಜಗದಾದಿದೇಶಿಕ ಮಹಾಗುರು ನಿರಂಜನ ಘೋರಭವಭಂಜನ || ೯ ||

ಪಲವೆಡೆಗಳೊಳು ಪುಡುಕಿ ಬಾಡಿವೆನು ಬಹುದಿನಂ-
ತೊಳಲಿದೆನು ಕೊನೆಗೆ ನೀನೆ ಬಂದು ಕೈವಿಡಿದು
ಸಲಹಿದೈ ಸದ್ಗುರುವೆ ಮದ್ಗುರುವೆ ಚಿದ್ಗುರುವೆ ಶ್ರೀಮಜ್ಜಗದ್ಗುರುವರ
ವಿಲಸದ್ಭವತ್ಕೃಪಾಮೃತಧಾರೆಯೆನ್ನ ಮೇ-
ಲಿಳಿಯದೊಡಮಾ ಕಾಲಕರ್ಮಮಾಯೆಗಳ ದಂ-
ದಳದೊಳಗೆ ಸಿಲುಕಿ ಶಿವಯೋಗ ಸಾಮ್ರಾಜ್ಯ ಸುಖಕಂತರಿಸುತಿರ್ದೆನಲ್ತೇ ॥ ೧೦ ॥

ನೀನು ಮುಟ್ಟದ ಬಳಿಕ್ಕಾಮಾಯೆ ಮುಟ್ಟದಿ-
ನ್ನೇನೆನಗೆ ಭೀತಿಯನಿಮಿತ್ತಬಾಂಧವ ನಿನ್ನ-
ನೂನೋಪಕಾರಮಂ ಮರೆಯೆ ನಾನೆಂದೆಂದುಮುದ್ವೀತತಾಪತ್ರಯ
ನಾನಾವಿಧಾಖಿಲಪ್ರಾಣಿಕೋಟಿಗಳಲ್ಲಿ
ಏನುಮಂ ಫಲವ ಕಾಣದೆ ವೃಥಾತಿರುಗಿದೆನು
ಮಾನವಿಲ್ಲನಲೆ ಜಗದಾದಿಯಿಂದಿನ್ನೆವರಮಿಂದು ಕೃಪೆಗೈದೆ ತಂದೆ ॥ ೧೧ ॥

ಇಂತು ಪಲಪಂದದಿಂ ಕೊಂಡಾಡಿ ನಲಿದಾಡಿ
ಮುಂತೆ ಕೆಲದಿನವಲ್ಲಿ ಗುರುಸೇವೆಯೊಳಗಿರ್ದು
ಕಂತುಹರಧರ್ಮಮಂ ಬಿತ್ತರಿಪುದೆಂದು ಬಗೆದೀರ್ವರುಂ ಕೂಡಿಕೊಂಡು
ಸಂತಸದೊಳಖಿಳಸದ್ಭಕ್ತರಂ ಬೋಧಿಸುತ-
ನಂತನಗರ ಗ್ರಾಮಗಳನೈದೆ ಸಂಚರಿಸು-
ತಂ ತಪೋನಿಷ್ಠರಂ ಕಾಣುತಂ ದೇಶಾಟನಕ್ಕೆ ಪೊರಮಟ್ಟರಾಗ ॥ ೧೨ ॥

ಸುತನೆ ಕೇಳ್ಶಿವಯೋಗಿ ನಿತ್ಯನಿರ್ಮಲಕೃತಾ-
ರ್ಥತೆಯನಾಂತಿರ್ದಡುಂ ತಾನು ಶಿವಧರ್ಮಸಂ-
ಸ್ಥಿತಿಯನೆಸಗುವಡೆ ಕರ್ತವ್ಯವದರಿಂ ಮರ್ತ್ಯರನಡತೆಗಳನು ನೋಡಿ
ಮತಧರ್ಮಬೋಧಮಂ ಮಾಡುತಿರಬೇಕು ಸ-
ನ್ನುತವಿದ್ಯೆವಿಭವಾದಿ ಸಕಲ ಸಂಪದದೇಳ್ಗೆ-
ಗತಿಸಹಾಯಂ ಗೈಯಬೇಕು ಸ್ವಾರ್ಥತ್ಯಾಗಬುದ್ಧಿಯಿರಬೇಕು ಮೊದಲು ॥ ೧೩ ॥

ಗುರುವಿರಕ್ತರ ಸುಧಾರಣೆಯಿಂದ ಧರ್ಮವಿದು
ಮೆರೆವುದವರಿಂ ಗುರುವಿರಕ್ತರ ಸುಧಾರಣೆಗೆ
ಗುರುಕುಲವಿದೊಂದೆಮ್ಮೊಳಾಗಬೇಕಿಂತೆಂದು ಗುರುಬಸವಲಿಂಗಯತಿಯು
ಮುರುಕದಿಂದಾಗಾಗ ತನ್ನೀ ಮಠೋತ್ಕರ್ಷ-
ಪರ ಶಿಷ್ಯನೊಡನಾಡುತಿರ್ದನಿದೆ ಬೇರ್ವರಿದು
ಪರಿವರ್ಧಿಸಿಮುದೀತನಾತ್ಮದೊಳು ನಾಂಟಿ ಚಿಲ್ವಾಗಿ ಮಠಸುಕೃತದಿಂದ ॥ ೧೪ ॥

ಎಲ್ಲಿ ಪುಣ್ಯಾರಣ್ಯವೆಲ್ಲಿ ತಟನೀತೀರ-
ವೆಲ್ಲಿ ತೀರ್ಥಕ್ಷೇತ್ರಶುಭಮಠಾಶ್ರಮಗಳುಂ-
ಟಲ್ಲಲ್ಲಿ ಶಿವಸಮಾಧಿತೆ ಗೈವುತ ಭವಾನುಭವಸುಧಾರಸವನುಣುತ
ಸಲ್ಲೀಲೆಯಿಂದಣ್ಣಿಗೇರಿಯೆಂಬೂರ್ಗೆ ಬರ-
ಲಲ್ಲಿ ತನುಜಡವಡಸಿ ಗುರುಪುಂಗವಂ ಲಿಂಗ-
ದಲ್ಲಿ ಬೆರೆದಂ ಜ್ಯೋತಿಯೊಳುಜ್ಯೋತಿಯೇಕಮಾದಂತೆ ಬಹುಸಂಭ್ರಮದೊಳು ॥ ೧೫ ॥

ಎಮ್ಮಮಠದ ಚರಾಧಿಪಂ ತಿರುಗಿ ತಿರುಗಿ ಕೊನೆ-
ಗೆಮ್ಮ ಮಠದೊಳು ಸಹಜಮಾಗಿ ಲಿಂಗೈಕ್ಯನಾ-
ದಂ ಮಹಿಯೊಳೆಮ್ಮ ಪುಣ್ಯಮಿದೆಂದು ಶ್ರೀಜಗದ್ಗುರುತೋಂಟದಾರ್ಯರೊಲಿದು
ತಮ್ಮ ಮಠದೊಳು ಸಮಾಧಿಯ ನೆಸಗಿ ಕರ್ತವ್ಯ-
ಮಂ ಮುಗಿಸಿದರ್ಮಹೋತ್ಸಾಹದಿಂ ಸುಗುಣಿಗಳ
ಹೆಮ್ಮೆ ಸುಗುಣಿಗಳೊಳಿಹುವೇಸುದಿನಮಾದಡುಂ ಕೆಡದಂತರಂಗದಲ್ಲಿ ॥ ೧೬ ॥

ತಾಯನಗಲಿದ ಕರುವಿನಂತಾಗಿ ತನ್ನ ಗುರು-
ರಾಯನ ವಿಯೋಗದುಃಖವನು ಹತ್ತಿಕ್ಕಿಕೊಂ-
ಡಾಯಾಸದಿಂದೆಮ್ಮ ದೇಶಿಕಂ ಪೊರವಟ್ಟನೇಕಾಂಗಿಯಾಗಿ ಮುಂದೆ
ನೋಯಿಸುವದೀ ಚಿಂತೆಯಿದರಪರಿಹಾರಕ್ಕು-
ಪಾಯಮಾರಿಂದಪ್ಪುದೆಲ್ಲಿಗೈದುವದೆಂದು
ಬಾಯ ಬಿಡುತದರಿಂದ ಚಿತ್ತಚಾಂಚಲ್ಯಮಂ ಪೊಂದಿದಂ ಮಿತಿಯಿಲ್ಲದೆ ॥ ೧೭ ॥

ಮುಂತೆಸಸ ಕಜ್ಜಮಂತಿರ್ಕೀಗಳಡಸಿದ-
ತ್ಯಂತಚಂಚಲವೃತ್ತಿ ವಾರಿಯಾಗಿಹುವೆನ್ನ-
ಶಾಂತಿಗದರ ನಿವೃತ್ತಿಯಂ ಪಡೆಯಬೇಕೆಂದು ಬಗೆದು ಸಾಗರ ಸೊರಬದ
ಪ್ರಾಂತದೊಳು ಷಟ್ಸ್ಥಾವ್ಯದಾ ಗುರುಬಸವಯತಿಯ-
ನಂತಮಹಿಮೆಯನಾಂತ ಗದ್ದುಗೆಯ ಸನ್ನಿಧಿಯೊ-
ಳಂತರಿಸದಾನನುಷ್ಠಾನಮಂ ಮಾಡಬೇಕೆಂದಲ್ಲಿಗೈ ತಂದನು ॥ ೧೮ ॥

ಅಲ್ಲಿಯುಳುವೆಯ ಮಠದ ಗುರುಬಸವದೇವನೆಂ-
ಬೊಳ್ಳೆ ಮಾಹೇಶನುಂ ಮಳಗದ್ದಿಯೆಂಬೊಂದು
ಹಳ್ಳಿಯ ಪೆಸರ್ವಡೆದ ಕೆಂಡಪ್ಪಗೌಡನುಂ ಕೂಡಿಕೊಂಡೀ ಮಹಿಮನ
ಸಲ್ಲಲಿತಶೀಲಪೂಜಾನಿಷ್ಠೆಯಂ ನೋಡಿ
ಬಲ್ಲಿದನಿವಂ ಪಾರಮಾರ್ಥಶಾಸ್ತ್ರವನೆಲ್ಲ-
ಬಲ್ಲನೆಂದತಿಭಕ್ತಿಯಿಂದಾಶ್ರಯಂಗೊಟ್ಟನೆಮ್ಮನುದ್ಧರಿಸನೆಂದು ॥ ೧೯ ॥

ಈತನ ಜಿತೇಂದ್ರಿಯತ್ವದ ಶಕ್ತಿಯುಕ್ತಿಗಳ-
ನೀತನ ಶಿವಾನುಭವಬೋಧಾವಿಚಾರಗಳ-
ನೀತನ ವಿರಾಗಸಮ್ಯಜ್ಞಾನ ಧರ್ಮಾಭಿಲಾಷಾದಿಗಳನೀಕ್ಷಿಸಿ
ಪ್ರೀತಿಯಿಂದಾ ಪ್ರಾಂತದಖಿಲಶಿವಭಕ್ತರ್ಕ-
ಳೀತನಂ ನೋಡಿ-ಕೊಂಡಾಡಿ ಸೇವೆಯ ಮಾಡಿ
ನೀತಿಧರ್ಮಂಗಳಂ ಕಲಿತರುತ್ತಮರಿಂದ ದೇಶಪಾವನನಲ್ಲವೇ ॥ ೨೦ ॥

ಪರಕುಮಾರಸ್ವಾಮಿಗಳ ಮಠವೆನಿಪ್ಪೊಂದು
ಚರಮಾಶ್ರಮಮಂಟು ಹಾನಗಲ್ಲೊಳದಕ್ಕೆ
ವಿರತರುಂ ಧರ್ಮಾತ್ಮರುಂ ತಪೋನಿಷ್ಠರುಂ ಶಿವಯೋಗಿವರ್ಯರಾದ
ಪರತರಫಕೀರೇಶನಾಮಕ ಯತೀಶ್ವರರು
ಮೆರೆವುತಿರ್ದರು ಮುಪ್ಪುವರೆದಸ್ವಾಮಿಗಳಾಗಿ
ಹರಭಕ್ತಕುಲದ ಯೋಗಕ್ಷೇಮವನು ಪೊತ್ತು ಪದೆದು ಪಾಲಿಸುತಿರ್ದರು ॥ ೨೧ ॥

ಪಾಣಿಯೊಳು ವರದಾಭಯೋತ್ಕರ್ಷಸಂಪದಂ
ವಾಣಿಯೊಳು ನಿಗ್ರಹಾನುಗ್ರಹಮಹಾಶಕ್ತಿ
ಪ್ರಾಣಿಕರುಣಾಮೃತರಸಂ ಕಟಾಕ್ಷದೊಳು ವೈರಾಗ್ಯಭಾಗ್ಯಂ ಬಗೆಯೊಳು
ಸ್ಥಾಣುಯೋಗಾನಂದವೈಭವಂ ಭಾವದೊಳು
ಮಾಣದಾಗಳ್ಸೆಲಸಿ ಸರ್ವಯತಿಪುಂಗವ-
ಶ್ರೇಣಿಯೊಳು ಜಸವೆತ್ತು ಮೆರೆವುತಿರ್ದರ್ಘಕೇರಸ್ವಾಮಿಗಳು ಧರೆಯೊಳು ॥ ೨೨ ॥

ಅವರ ದಿವ್ಯತಪಃಪ್ರಭಾವಮಂ ಕೇಳ್ದು ಬಲು
ತವಕಮುಂ ಮಿಗೆ ದೂರದೂರದಿಂದೈತಂದು
ಶಿವಭಕ್ತಸಮುದಯಂ ದರ್ಶನಾನಂದದಿಂ ತಲೆದೂಗಿ ಬಾಗಿ ನಮಿಸಿ
ತವೆ ತದೀಯಾಂಘ್ರಿಕೃಪೆಯಂ ಪಡೆವುತಿರ್ದಂತೆ
ಸವೆಯದುತ್ಸಾಹದಿಂ ಕೆಂಡಪ್ಪಗೌಡನೀ-
ಭುವನಸನ್ನುತರ ಪದದರ್ಶನಕ್ಕಾಗಾಗ ಬರುತಿರ್ದನಾಯತಿಗಳು ॥ ೨೩ ॥

ಮುಪ್ಪಾದೆವೆಮ್ಮುತ್ತರಾಧಿಕಾರಕ್ಕೆ ಬೇ-
ರೊಪ್ಪುವ ಸದಾಚಾರಸಂಪನ್ನ ವಟುವರಂ
ತಪ್ಪದನ್ವೇಷಣಂಗೈದು ಸರ್ವಾನುಮತಿಯಿಂ ಪರೀಕ್ಷಾಪೂರ್ವಕಂ
ತಪ್ಪದೆಂದೆಲ್ಲ ಪಿರಿಯರಿಗೆ ಪೇಳ್ದಂತೀತ-
ಗಪ್ಪಣೆಯ ನೆಸಗಿರ್ದರಂತಹ ತಪೋನಿಷ್ಠ-
ರಪ್ಪ ವಟುವರ್ಯರಾವೆಡೆಯೊಳಿಹರೆಂದು ಮನದೊಳು ಬಗೆದು ಭಾವಿಸುತ್ತ ॥ ೨೪ ॥

ಕೆಂಡಪ್ಪಗೌಡನೀ ದೇಶಿಕನ ಬಳಿಗೈದಿ
ದಂಡಪ್ರಣಾಮಮಂ ಮಾಡಿ ತದನುಜ್ಞೆಯಂ-
ಕೊಂಡು ವಿಶ್ರಮಿಸಿ ಮಹನೀಯ ನೀನಾಲಿಸೈ ಹಾಗನಲ್ಲಯತೀಶರು
ಪಂಡಿತರು ಘನತಪೋನಿಷ್ಠರಿಹರವರ ಪದ-
ಪುಂಡರೀಕವ ಕಂಡು ಬದುಕುವದು ಶಿವಭಕ್ತ-
ಮಂಡಲಂ ನೋಡಿರುವೆನವರ ಲಿಂಗಾರ್ಚನಾದ್ಯಖಿಲ ಶಿವವೈಭವನನು ॥ ೨೫ ॥

ಹುಳಿಯುಪ್ಪು-ಕಾರ-ಸಕ್ಕರೆ-ಬೆಲ್ಲಮೊದಲಾದ
ಹಲವು ಜಡತರವೆನಿಸುವಾಹಾರ್ಯವಸ್ತುಗಳ-
ನುಳಿದು ಶಾಲ್ಯನ್ನಗೋಕ್ಷೀರಗಳನೇ ಸೇವಿಸುತ ಮೂರುಬರಿಸನ್ನವೇ
ಸಲೆ ಮೌನದಿಂದನುಷ್ಠಾನಮಂ ಮಾಡಲೆಂ-
ದೆಳಸಿ ಸಂಕಲ್ಪಮಂ ಮಾಡಿರುವೆ ದೇವ ನೀ-
ನೊಲಿದು ಶ್ರೀಹಾನಗಲ್ಲಫಕೀರನಾಮಕ ಸ್ವಾಮಿಗಳದರ್ಶನವನು ॥ ೨೬ ॥

ಕೊಂಡವರನುಜ್ಞೆಯಿಂದಾರಂಭಿಸಿದೊಡೆ ಕೊನೆ-
ಗಂಡನುಷ್ಠಾನಮಿದು ಸಫಲಮಾದಪ್ಪುದು ಮೇ-
ಣ್ಪಾಂಡ್ಯೇಂದುಧರಶರಣರೊಪ್ಪಿದಪರೆಂದೆನಗೆ ತೀವುದೆನಲಾ ಮಾತಿಗೆ
ಪಂಡಿತಪ್ರಿಯ ದೇಶಿಕೋತ್ತಮನೊಡಂಬಟ್ಟು
ಕೆಂಡಪ್ಪಗೌಡ ಗುರುಬಸವಾರ್ಯರಿವರನೊಡ-
ಗೊಂಡು ಮರುದಿನವೆ ಪೊರಮಟ್ಟನಾ ಹಾನಗಲ್ಲಿಗೆ ಮಹಾಭಕ್ತಿಯಿಂದ ॥ ೨೭ ॥

ವರಫಕೀರೇಶ್ವರ ಸ್ವಾಮಿಗಳ ಶ್ರೀಚರಣ
ಸರಸಿರುಹಮಂ ಕಂಡು ಮೂವರುಂ ಪೊಡಮಟ್ಟು
ನೆರೆ ತದಾಜ್ಞೆಯನಾಂತು ವಿಶ್ರಮಿಸಲೀ ತಪಸ್ವಿಯ ಘನತಪಸ್ತೇಜವ
ನಿರುಕಿಸಿ ಮುದಂಬಾಳ್ದು ಕೇಳ್ದರೀತನ ಸಕಲ
ಚರಿತೆಯಂ ಮತ್ತಮೇಕಾಂತದೊಳು ತತ್ಪ್ರಮುಖ-
ಪುರುಷರಿಂದೊಂದುಳಿಯದಂತೆ ಗುಣಶೀಲಾದಿಗಳನರಿದು ಶಂಕೆಗೊಳದೆ ॥ ೨೮ ॥

ಎಲೆ ಸುಕೃತಮತಿಯೆ ನಿನಗೀವೆವಸ್ಮನ್ಮತದ
ವಿಲಸದಧಿಕಾರಮಂ ಕೈಕೊಳ್ಳುದೈ ಬಿಡದೆ-
ಸಲುವುದಿದು ಸರ್ವರನುಮತಿಯಪ್ಪುದೆಮ್ಮ ಲಿಂಗಕ್ಕೊಡಂಬಡಿಕೆಯುಂಟು
ಅಲಸಬೇಡಾಲೋಚಿಸದಿರು ಸದ್ಭಕ್ತಸಂ-
ಕುಲವೆಲ್ಲನಿನ್ನಿಂ ಪುನೀತಮಾದಪ್ಪುದೆಂದು-
ತಿಳಿದುಸುರಲೇಳ್ದೆರಗಿ ಕೈಮುಗಿದು ಮಹನೀಯ ಕೇಳೆನ್ನ ಬಿನ್ನಪವನು ॥ ೨೯ ॥

ಅತಿಶಿಥಿಲತೆಯನು ಪೊಂದಿರುವ ಶಿವಧರ್ಮದು-
ನ್ನತಿಗಾಗಿ ಮೀಸಲಿರಿಸಿದ ಜನ್ಮವಿದನೋರ್ವ
ಯತಿಪನ ಮಠಾಧಿಕಾರಕ್ಕೆ ನೀಡುವುದು ಸಂಕುಚಿತದೃಷ್ಟಿಯಿದೆನಿಸದೆ
ಮತರೂಪಮಠವೆನ್ನದೆಂಬ ವಿಸ್ತೃತಮಾದ
ಮತಿಯುಳ್ಳ ನನಗಿದೆಂತೊಪ್ಪಿದಪುದೆನ್ನಿಂದ
ಹಿತಮಪ್ಪ ಬಗೆಯಾವುದೀ ಮಠಕ್ಕದರಿಂದ ಸರ್ವಥಾ ನಾನೊಲ್ಲೆಸು ॥ ೩೦ ॥

ಸ್ವಸಮಾಜಸೇವೆಗಾರಂಭದೊಳು ನಿಮ್ಮ ಪದ-
ಬಿಸಜಮಂ ಕಂಡಾಜ್ಞೆಗೊಂಡು ಪೋಗುವದೆನು-
ತ್ತ ಸವಡೊಳ್ಳೈತಂದೆ ನೆನಗಿಂತುನೀವಪ್ಪಣೆಯನೆಸಪರೇ ಯತಿವರಾ
ಶಿಶುವೆಂದು ಕ್ಷಮಿಸಿ ಮಠದಭಿಮಾನಿಯೆಂದು ಸಂ-
ತಸದಿಂ ಮಠದಿಷ್ಟಸಿದ್ಧಿಗೆ ತ್ವತ್ಕೃಪಾಸುಧಾ-
ರಸವೆನ್ನ ಮೇಲೊಸರುವಂತೆಸಗಿರೈಯೆಂದು ದೈನ್ಯದಿಂ ಬೇಡಿಕೊಳಲು ॥ ೩೧ ॥

ತನಯ ಕೇಳೆಮಗೆ ಮಠಸೇವೆ ಬೇಡಾದುದೇ
ನಿನಗದರ ಲವಲವಿಕೆಯುಳ್ಳೊಡೊಳ್ಳಿತು ಯತಿಗ-
ಳನುದಿನಂ ಮಠಸಂಧಾರಣೆಯ ಹೊಣೆಯಂ ಪೊತ್ತು ಬಾಳ್ವದುಚಿತಮಿದಾದೊಡೆ
ಅನಧಿಕಾರಿಗಳಾಗಿ ಮಠಸೇವೆಯನು ಮಾಳ್ಪ-
ದನಿತುಚಿತಮಲ್ಲಮಧಿಕಾರವಂ ಕೈಕೊಂಡು
ಜನಹಿತವನೆಸಗುವದೆ ತಕ್ಕುದದರಿಂ ಪರಿಗ್ರಹಿಸೆಂದವರ್ನುಡಿಯಲು ॥ ೩೨ ॥

ಅವಧರಿಪುದೈ ಮಹಾಪ್ರಭುವೆ ಮಠಸೇವೆಯಂ
ಶಿವಧರ್ಮಸೇವೆಯಂ ಮಾಳ್ಪುದೆಂತೆರಡರೊಳು
ತವೆ ಹರಿದು ಹಂಚಿಹೋಗುವದಿಲ್ಲವೇ ಮನಂ ಪೂರ್ಣಮಾನಸವನೊಂದೆ
ಪ್ರವಿಮಲಸಮಾಜ ಸೇವೆಯೊಳಗುಪಯೋಗಿಸಿದೊ-
ಡವಿಕಲತೆಯಂ ಪೊಂದುತಿಹುದು ಕರ್ತವ್ಯಮೆ-
ನ್ನ ವಿಚಾರಮಲ್ಲಮಿದು ಮಠಸೇವೆಯಂ ತಿರಸ್ಕರಿಪಮಾತಲ್ಲ ಗುರುವೇ ॥ ೩೩ ॥

ಗುರುವಿರಕ್ತರ ಪೀಠಗಳೆಲ್ಲ ಶಿವಯೋಗಸಂ-
ದಿರಗಳಿಂದೊಪ್ಪಿರುವೆನವುಗಳಿಂ ಶಿವಭಕ್ತ-
ಪರಿಷದುನ್ನತಿಯುಪ್ಪುದಿದು ನಿಜಂ ಮಠಗಳೊಂದೊಂದು ದೇಶದೊಳಿರುವವು
ಪರಿಕಿಸಿದೊಡೆಲ್ಲ ಮಠದೊಡೆಯರೀ ಮತವನು-
ದ್ಧರಿಸಬೇಕೆಂಬಾಶೆಗೊಳಗಾದರಿಲ್ಲವದ-
ನರಿದು ಮತಸೇವೆಗರ್ಥಿಪಗಾಜ್ಞೆಯನವಜ್ಞೆ ಬೇಡವೆಂದಿವನಾಡಲು || ೩೪ ||

ಆಲಿಸಾದೊಡೆ ಮಗನೆ ಗುರುಚರರ ಮಠತತಿಯು-
ನಾಳುವ ಮಹಾಸ್ವಾಮಿಗಳ್ಧರ್ಮರತಿತಪ-
ಶ್ಶೀಲಾದಿ ಸದ್ಗುಣಸಂಪನ್ನರುಳ್ಳೊಡೆ ಸಾಕು ಧರ್ಮವಿದು ಕಳೆಗುಂದವೆ
ಮೇಲೆನಿಸಿ ಮೆರೆವುದವರಿಂ ತಪಸ್ವಿಗಳನನು-
ಕೂಲಿಸುವದೇ ತಕ್ಕುದಖಿಲಮಠದೊಡೆತನ-
ಕ್ಕಾಲೋಚಿಸದೆ ಕಂಡಕಂಡವನಿಗಧಿಕಾರಮಂ ಕೊಡುವುದೆಗ್ಗತನವು || ೩೫ ||

ಎಳಸಿ ಮಠದೊಡೆತನದೊಳೊಮ್ಮೆ ಕಾಲೂರ್ದಡವ-
ನಳವೆಡೆಯೊಳುಂ ತನ್ನ ಪೂರ್ವಾಶ್ರಯದ ಮನೆಯ
ಚೆಲುವಗೊಂಜೆಯ ತಂದು ನಿಜಪೀಠದಲ್ಲಿ ಕುಳ್ಳಿರಿಸಿ ಪೋಷಂ ಪಾಪಿಯು
ತಿಳಿಯಲಾ ಮಠದ ಸೊಮ್ಮೆಮ್ಮ ಮಠಹಿತಕಾಗಿ
ಸಲಲಿರ್ದುಮಾ ಸ್ವಾಮಿಯಾದ ಕೋಡಗನಿಳಾ-
ತಳದೊಳೀಪರಿ ದುರುಪಯೋಗಮಂ ಮಾಡುವಂ ನಾಣ್ಚೆದರಿಕೆಗಳಿಲ್ಲದೆ || ೩೬ ||

ತನ್ನ ತಾಯ್ತಂದೆ ಗಳಿಸಿರ್ದುದೇ ತನ್ಮಠಂ
ತನ್ನ ಪೂರ್ವಾಶ್ರಯದ ಸುತನಿಗಧಿಕಾರಮಂ
ತನ್ನಂತಿಮಪ್ರಸಂಗದೊಳಿತ್ತು ತನ್ನ ಬಳಗವನಲ್ಲಿ ಸೇರಲೆಸಗಿ
ಉನ್ನಿಸೆ ಪರಂಪರೆಯೊಳೀ ಸೊತ್ತನುಂಬುತೆ
ತನ್ನ ಮನೆತನಕೆ ಮಾಳ್ಪಸಮಾಜಘಾತಕಂ
ಮನ್ನಣೆಯನೆಂತು ಪೊಂದುವನವಂ ಗುರುಚರಾಕೃತಿಯ ಜಂತರನಧಮನು || ೩೭ ||

ಭಕ್ತರಂ ಧರ್ಮದಿಂ ತಿದ್ದಲೋಸುಗವಾಗಿ
ಶಕ್ತರೆನಿಪಾಚಾರ್ಯಚರವರರು ಬೇಕವರು
ಭಕ್ತಿಚಿದ್ವೈರಾಗ್ಯ ಲಿಂಗಪೂಜಾರತಿ ವ್ರತಸದಾಚಾರಗಳೊಳು
ವ್ಯಕ್ತವೆನೆ ಪರಿಣಮಿಸುತಿರಬೇಕು ಸಂತತಂ
ಭಕ್ತಹಿತಕಾರ್ಯಗಳನಾಚರಿಸಬೇಕು ಶಿವ-
ಭಕ್ತಸುಸಮಾಜದೊಳಗವರ ಮಠವೆಲ್ಲ ಸೊತ್ತುಪಯೋಗವಾಗಬೇಕು ॥ ೩೮ ॥

ಮಠಸೇವೆಗುಪಯೋಗವಾಗುವದೆ ಹಣವು ಮೇ-
ಣ್ಮತಿಗೆಟ್ಟು ಲೋಭದಿಂ ಕಾಯ್ದಿಟ್ಟುದುದೆ ವ್ರಣವು
ಸತತಮಾ ವಿಷಯಕ್ಕೆ ಪೂರ್ವಾಶ್ರಯದ ಬಳಗಕಾಗುವದೆ ಹೆಣವುಕಂಡ್ಯಾ
ಕ್ಷಿತಿಯೊಳ್ಗುರೂತ್ತಮರು ಚರವರೇಣ್ಯರು ತಮ್ಮ-
ನುತವಿತ್ತಮುಂ ಪೆಣಕೆ ಸರಿಗಟ್ಟಿಸರು ಪಣವೆ-
ಗತಿಯೆಂದು ನಂಬಿ ಬಚ್ಚಿಡರದನು ನಚ್ಚಿ ಮೋಹಿಸರು ಕಡುಮುಮತೆಯಿಂದ ॥ ೩೯ ॥

ಇಂತಿರ್ದುಮೆನ್ನ ಮನೆಯನ್ನಣ್ಣತಮ್ಮದಿರು
ಸಂತಸದೊಳೆನ್ನಿಂದ ಸುಖಮನುಣಲೆಂಬೊಂದು
ಭ್ರಾಂತಿಯೊಳು ಕಂಗಾಣದಾಚಾರ್ಯಚರವರ್ಯರಿಂದಪ್ಪ ಲಾಭಮೇನು
ಸ್ವಾಂತದೊಳು ನೆರೆ-ವಿಚಾರಿಸು ಮಠಾಧಿಪರು ಗುಣ-
ವಂತರಿದ್ದೊಡೆ ಸಾಕು ತಾನೆ ಮಠದೇಳ್ಗೆಯಹು-
ದೆಂತಾವಡುಂ ಮಠಂಗಳ್ಗುತ್ತಮಾಧಿಕಾರಿಗಳನಾರಿಪುದುಚಿತವು- ॥ ೪೦ ॥

ಮೊದಲಿಂದಮೀ ಮಠಕ್ಕಧಿಕಾರಿಗಳ್ಮಹಾ
ಸದಮಲ ತಪೋನಿಷ್ಠರುಂ ವಿರತರುಂ ದಯಾ-
ಹೃದಯರುಂ ಭಕ್ತಪಾಲನಶೀಲರಾಗಿ ಪೋಗಿರುವರದರಿಂ ನಿನ್ನನು
ಪದುಳಮುಂ ಮಿಗೆ ಬಯಸುತಿಹೆವೃಪೇಕ್ಷಿಸಬೇಡ-
ವಿದುನಿನಗೆ ಲೇಸೆಂದು ತಚ್ಚರೇಂದ್ರಂ ಪೇಳ-
ಲದಕೊಪ್ಪಿದಂ ಪ್ರಭೂತ್ತಮನಾಜ್ಞೆ ತಾನಿದೆಂದೀ ಚರಿತ್ರಾಧೀಶನು ॥ ೪೧ ॥

ನೆರೆದಖಿಲ ಭಕ್ತ-ಮಾಹೇಶರಂದುತ್ಸಾಹ-
ಭರಿತರಾದರು ಫಕೀರೇಶ್ವರಸ್ವಾಮಿಗಳು
ಪರಮಹರ್ಷಿತರಾದರೆಮ್ಮುತ್ತರಾಧಿಕಾರಕೆ ತಕ್ಕ ವಟುವನ್ಯನು
ದೊರೆದನೆಂದೀ ಮಠಸುಧಾರಣೆಯ ಭಾರಮಂ
ನೆರೆಹೊತ್ತು ಮಠಸೇವೆಯಂ ಮಾಳ್ಪುದೆಂತೆಂದು
ಪರಿಪರಿಯೊಳಾಲೋಚಿಸುತ್ತೀ ವಟೂತ್ತಮಂ ದೃಢನಿಶ್ಚಯವನು ಮಾಡಿ || ೪೨ ||

ಗುರುಸೇವೆಯೊಳು ನಿಂದನಲ್ಲಿಯೇ ಸದುಭಕ್ತಿ-
ವೆರಸಿ ಗುರುಸೇವಾಚತುಷ್ಟಯಂ ಬಿಡದಿವಂ
ಪರಮಶಿವತತ್ತ್ವವೇ ರೂಪುಗೊಂಡವತರಿಸಿದಂತೆಸೆದನೀ ಭುವಿಯೊಳು
ಗುರುಸೇವೆಯಲ್ಲಿ ನೀಚೋಚ್ಚಭಾವನೆಗಳಂ
ತೊರೆದಪರಿಪಕ್ವ ಮಾನಸವನನುಸರಿಸಿದಂ
ಪರಿವಾದಡಾವಗಂ ತದನುಜ್ಞೆಗಲಸಲಿಲ್ಲಂ ನೆಪನ ಪೇಳಲಿಲ್ಲ || ೪೩ ||

ಗುರುಸನ್ನಿಧಿಯೊಳು ಮಲಗದೆ ಕುಳ್ಳಿರದೆ ನಗದೆ
ಗುರುವಿನೆದುರೊಳು ಸರಸವಾಡದೆ ವಿನೋದಿಸದೆ
ಗುರುಸೇವೆಯಲ್ಲಿ ಸಾಧ್ಯಾಸಾಧ್ಯಗಳನೆಣಿಸದಿನಿಸು ವಂಚನೆಯಿಲ್ಲದೆ
ಗುರುವಚನವಾಗಮಾಮ್ನಾಯ ಪ್ರಮಾಣಮೆಂ-
ದರಿದಾಚರಿಸುತಿರಲು ನೋಡಿ ಬಗೆಬಗೆಯಿಂದ-
ಪರಿಕಿಸಿ ಗುರೂತ್ತಮಂ ಪರಮಪ್ರಸನ್ನನಾದಂ ನಚ್ಚಿದಂ ಮೆಚ್ಚಿದಂ || ೪೪ ||

ಮೊದಲಿಂದ ನಡೆವುತ್ತಬಂದ ದಾಸೋಹಮಂ
ಮೊದಲಿಗಿಂ ಪೆರ್ಚಾಗಿ ಸುವ್ಯವಸ್ಥಿತವಾಗಿ
ಮುದವಲರೆ ನಡೆಸುತಂ ಭಕ್ತರಂ ಧರ್ಮಬೋಧಾಪೂರ್ವಕಂ ತಿದ್ದುತೆ
ಸದಮಲೇಷ್ಟಪ್ರಾಣ ಭಾವಲಿಂಗಾರ್ಚನೆಯೊ-
ಳೊದವಿದಾನಂದದಿಂದಿರಲದಂ ಕಂಡು ಸದು-
ಹೃದಯರವನಂ ಪರಸಿ ಪಾಡಲಾದರು ಮಠೋದ್ದೀಪನ ಮಹಾತ್ಮನೆಂದು || ೪೫ ||

ಮುಂದೊಮ್ಮೆ ಮಲೆನಾಡಿನಲ್ಲಿ ಬಹುದೂರದೊಳ-
ಮಂದಧರ್ಮಸುಧಾರಣಾರ್ಥಮೀ ಶಿಷ್ಯನಾ-
ನಂದಮುಂ ಮಿಗೆ ಪೋಗಲಿತ್ತ ಬಿದರಿಯಕುಮಾರೇಶ್ವರಮಹಾಸ್ವಾಮಿಯು
ಬಂದನೀ ಹಾನಗಲ್ಲಿಗೆ ಫಕೀರಸ್ವಾಮಿ-
ಗಂದು ವಾರ್ಧಕ್ಯರುಜೆಯಡಸಿ ಬಳಲುತ್ತಿಹುದ-
ರಿಂದ ನಾಡೊಳಗುಳ್ಳಪ್ರಮುಖರಂ ಬರಿಸಿಕೊಂಡೈ ಭಕ್ತಮಾಹೇಶರೇ || ೪೬ ||

ನಾವು ಮುಪ್ಪಾದೆವಿನ್ನಲ್ಪಕಾಲದೊಳು ಮಾ-
ದೇವನೊಳು ಬೆರೆವೆವೀ ಮಠದೆಲ್ಲಭಾರಮಂ
ಪಾವನಮಹಾಮಹಿಮರಾದ ಬಿದರಿಯ ಕುಮಾರೇಶ್ವರ ಸ್ವಾಮಿಗಳಿಗೆ
ಈವೆವವರಿಚ್ಛೆಗನುಸರಿಸಿ ವರ್ತಿಸಿರಿ ಮೇ-
ಣಾವಗವರಧಿಕಾರಮುಂ ಕೊಡುವರಾತನಂ
ನೀವೆಲ್ಲರಾದರಿಸಿ ಪರಶಿವಾನುಗ್ರಹಕೆ ಪಾತ್ರರಾಗಿರಿಯೆನುತ್ತ || ೪೭ ||

ಮನವೊಪ್ಪಿ ಪೇಳ್ದಿಲ್ಲರನುಮತಿಯನಾಂತು ಚಿ-
ಹ್ನನಲಿಂಗದೊಳು ಬೆರೆದನಾ ಫಕೀರೇಶ್ವರಂ
ಸನುಮತದೊಳಾ ಕುಮಾರೇಶನೀ ವಟುವರನನಳ್ಕರಿಂಬರಿಸಿಕೊಂಡು
ಜನದೊಳುತ್ಸಾಹಮುಂ ಮಿಕ್ಕಿಮೀರೆ ಗಣತೃಪ್ತಿ-
ಯೆನಿಸಿದಾಗೆ ಶ್ರೀ ಸದಾಶಿವಮಹಾಶಿವಯೋಗಿ-
ಯೆನಿಪ ನಾಮದೊಳೀತಗಿತ್ತಂ ಚರಾಶ್ರಮವನಧಿಕಾರಮುಂ ಮುದದೊಳು || ೪೮ ||

ಈ ಸದಾಶಿವಮಹಾಸ್ವಾಮಿ ಬಿದರಿಯಕುಮಾ-
ರೇಶನಿಂದಂ ಜಂಗಮಾಶ್ರಮವನಾಂತು ಮೇ-
ಣ್ಬಾಸುರಕುಮಾರ ಸಮಯಾಂತರ್ಗತೈಕಮಠವೊಡೆಯನಾದುದರಿಂದಲಿ
ದೇಶದೊಳು ಶ್ರೀಕುಮಾರೇಶನೆಂಬೊಂದು ಪೆಸ-
ರೇ ಸರ್ವದಾ ರೂಢಮಾಗಿರ್ಪುದೀತಂಗೆ
ಲೇಸುಮಿಂಗೆ ನಾನಿದರೊಳುಪಯೋಗಿಸೆನು ಕುಮಾರೇಶನೆಂಬೀ ಪೆಸರನು || ೪೯ ||

**ಅಂತು ಸಂಧಿ ೫ ಕ್ಕೆ ಪದಗಳು ೧೮೧ ಕಲ್ಯಾಣಂ**

§|| ಶ್ರೀ ವಿಶ್ವೇಶ್ವರ ಪ್ರಸೀದ ||§



## ಆರನೆಯ ಸಂಧಿ ಪ್ರಾರಂಭ



**ಸೂಚನೆ:-**

ಬರದೊಳನ್ನಛತ್ರಮಂ ನಿರಾತಂಕಮೆನೆ
ಜರುಗಿಸಿ ವಿರಕ್ತರೊಳಗಣ ಸಮಯಭೇದಮಂ
ಮುರಿದು ತಾನನ್ಯೋನ್ಯರಾನುಕೂಲ್ಯವನೆಸಗಿದಂ ಸದಾಶಿವಯೋಗಿಯು ||

ಬಗೆಯಲಾತ್ಮನ ಭೋಗಸಾಧನಮದಾದೆಲ್ಲ
ಜಗವನೊಡಲೊಳು ತಾಳ್ದು ಜಗದೊಳೊಡೆವೆರೆದು ಮೇ-
ಣ್ಜಗದುದಯ ಪ್ರೋಷಣ ಲಯಂಗಳಂ ಮಾಡುತ್ತಮಿದನಾರುಮರಿಯದಂತೆ
ಜಗವನಾಡಿಸುವೆ ನೀನವ್ಯಕ್ತರೂಪದಿಂ
ಜಗದೊಳೆಡೆತಾಕುವೆನ್ನೀ ವ್ಯಕ್ತರೂಪಮದು
ಜಗದೊಡೆಯನೇ ಕಾಣದೇ ನಿನಗೆ ಸಾಕುಮಾಡೆನ್ನ ಸುಳಿದಾಟವಿದನು || ೧ ||

ಬಳಿಕ ಮಠದೊಡೆತನಂ ದೊರೆದುದೆನಗೆಂದು ಮನ-
ದೊಳು ಹಿಗ್ಗಿ ಮದಿಸಿ ಮದವಾರಣ ತುರಂಗರಥ-
ಗಳನು ಸಂಗ್ರಹಿಸಲಿಲ್ಲಂದಣದೊಳುರಿ ಮೆರೆಯಲಿಲ್ಲಂ ಮಹಾದ್ವಾರವ
ಸಲೆ ಭವ್ಯವಾಗಿ ಕಟ್ಟಿಸಲಿಲ್ಲ ಮೃಷ್ಟಾನ್ನ-
ಗಳನುಂಡು ಬಗೆಬಗೆಯ ಚೀನ-ಚೀನಾಂಬರವ-
ತಳೆದು ರಂಜಿಸಲಿಲ್ಲ ಮಂಚಿಸುಪ್ಪಳವಾಸೆಯಲ್ಲಿ ವಿಶ್ರಮಿಸಲಿಲ್ಲ ॥ ೨ ॥

ಪಡೆದು ಸಂಸ್ಕೃತಪಾಠಶಾಲೆಯಂ ನೆರೆನಿರ್ಮಿ-
ಸಿದನೋದುಗರಿಗನ್ನ ವಸನ ಪುಸ್ತಕಗಳುಂ
ಮೊದಲಾದ ಸರ್ವಾನುಕೂಲಮಂ ಮಾಡಿದಂ ಮಠದೊಳು ಪ್ರಶಸ್ತವಾಗಿ
ಪದುಳದಿಂದಾ ಪ್ರಾಂತದೂರೂರುಗಳಿಗೈದಿ
ಕದನಪಂಗಡಗಳಂ ಮುರಿದು ಸಭೆಗಳೆಸೆದು ಧ-
ರ್ಮದ ರೀತಿಗಳನೊರೆದು ಮತಜಾಗ್ರತೆಯನೆಸಗಲಾದನುತ್ಸಾಹದಿಂದ ॥ ೩ ॥

ಅವನತಿಯನಾಂತ ಶಿವಮತವನುದ್ಧರಿಸಿ ತ-
ನ್ನವತಾರಮಂ ಮುಗಿಸಿದಾ ಬಸವನಿಂದೀಚೆ-
ಗವನಿಯಂ ಪಡೆದಾಳ್ದ ಪರಮತಪ್ರಭುಗಳ ಸಹಿಷ್ಣುತ್ವದಿಂದ ಮತ್ತೆ
ಕವಿದುದೀ ಮತಕತಿಗ್ಲಾನಿ ಗುರುಚರವರ್ಯ-
ರವಿರತಂ ಧರ್ಮದೇಳ್ಗೆಯನೆಸಗದಾಶೆಯಿಂ
ವಿವಿಧವಿಷಯೋಪಭೋಗದೆ ಜೆರೆದಡುಳಿದವರು ವಿದ್ಯೆಗಲಿಯದೆ ಪೋದರು ॥ ೪ ॥

ಅರಿಯದಾದರ್ನಿಜಪ್ರಾಣಸ್ವರೂಪವಮಾ-
ದುರುಲಿಂಗದಿರವನನ್ಯಮತೀಯರಾದ ಭೂ-
ಸುರವರರ ಮದುವೆಯಂ ಮಾಡತೊಡಗಿದರು ಗುರುಗಳು ತಮ್ಮ ಕರ್ತವ್ಯವ
ಮರೆದು ಬಿಟ್ಟರು ಶಿವಕ್ಷೇತ್ರತೀರ್ಥಾದಿಗಳ
ಹಿರಿಯತನಮಾ ಪಾರ್ವರಿಗೆ ಸಲ್ಲಿದುದು ಮಠದ-
ವರಿಗುಳ್ಳ ಮನ್ನಣೆಗಳೆಲ್ಲ ಬಾಡಬರ ಕೈಸೇರಿದವು ಪೇಳ್ವುದೇನು ॥ ೫ ॥

ಹಿರಿಕಿರಿಯ ಮಠದ ಕೆಲಬರ್ದೀಕ್ಷೆಯಂ ಪೊಂದ-
ದಿರುತಿರ್ದರಿಷ್ಟಲಿಂಗವ ಧರಿಸಿಕೊಳ್ಳದಲೆ
ತಿರುಗುತಿರ್ದರು ಶೂದ್ರರಹುದು ನಾವೆಂಬನಿತು ಕಡು ಮಂದರಾಗಿರ್ದರು
ಗುರುಚರರಿಗಿದರೆಚ್ಚರರಿವಿಲ್ಲದಿರೆ ಮಿಕ್ಕ
ಮರುಳು ಮಾನವರ ಪಾಡೇನೊಟ್ಟಗೀ ಮತಂ
ತಿರುಗಣೆಯ ಮಡುವಿನೊಳು ಸಿಲುಕಿ ಮೆಯ್ಮರೆದಳಿವತೆರದೊಳಿರ್ದತ್ತು ಮುಳುಗಿ || ೬ ||

ಇದನು ಸೈರಿಸದೆ ವಿದ್ಯಾಶಿಕ್ಷಣಾಧಿಕಾ-
ರದೊಳಿರ್ದ ಚೆನ್ನಬಸವಪ್ಪನೆಂಬೋರ್ವ ಸದು-
ಹೃದಯನುಂ ಗಿಲಗಂಚಿಗುರುಸಿದ್ಧನಾಮನುಂ ರುದ್ರಗೌಡನುಮೆನಿಪ್ಪ
ಪದವೀಧರರ್ಪಳುಂ ಲಿಂಗವಂತರಿಗೆ ಸ-
ಮ್ಮುದದಿಂದ ಪ್ರೋತ್ಸಾಹಪೂರ್ವಕಂ ಬಿಜ್ಜೆಗಳ-
ನೊದಗಿಸಲು ತೊಡಗಿದರು ಬಹುತರ ಸಹಾಯದಿಂದೆಂಬುದಂ ಮನದೆ ನೆನೆದು || ೭ ||

ಆ ಸಮಯದೊಳು ಟೊಂಕಮಂ ಕಟ್ಟಿದಂ ಕುಮಾ-
ರೇಶನೆಮ್ಮೀ ಸಮಾಜದ ಸೇವೆ ಗೈವುದೆಂ-
ಬಾಶೆಯಿಂ ಮೊದಲೆ ಮನದಲ್ಲಿ ಸಂಕಲ್ಪಿಸಿದ ರೀತಿಯುಂತಿದೆ ಜನ್ಮಕೆ
ಲೇಸೆಂದು ಶಾಂತಿಸಾಧಕಮೆಂದು ಧರ್ಮಪ್ರ-
ಕಾಶಮಂ ಕರ್ನಾಟಕಾಂಗ್ಲ ಸಂಸ್ಕೃತಕಲಾ-
ಭ್ಯಾಸ ಪ್ರಸಾರಕಾರ್ಯಂಗಳಂ ಮಾಡಲಾರಂಭಿಸಿದನುತ್ಸಾಹದೆ || ೮ ||

ಪಾರುವದು ತಮ್ಮ ಸಂಸ್ಕೃತಪಾಠಶಾಲೆಯೊಳು
ವೀರಶೈವರನಿವರು ಶೂದ್ರರಿಹರೆಂದೆಣಿಸಿ
ಸೇರಗೊಡದಿರ್ದರೀ-ಶಿವಯೋಗಿಯಲ್ಲಲ್ಲಿ ಸಂಸ್ಕೃತಸುಶಾಲೆಗಳನು
ಭೋರನೇ ನೆಲೆಗೊಳಿಸಿ ವ್ಯಾಕರಣ-ತರ್ಕ ಸುಖ
ಸಾರತರ ವೇದವೇದಾಂತಂಗಳೊಳು ಪರಮ-
ಧೀರರಂ ಮಾಡಿಸಿದನೀ ವೀರಶೈವರೇ ಮೇಲೆನಿಸಿಕೊಂಡರಾಗ || ೯ ||

ಪೆಸರಾದ ಕಾಶಿಕಲಕತ್ತೆ ಮೊದಲಾದೆಲ್ಲ
ಮಿಸುಪನಗರಗಳ ವಿದ್ಯಾಪೀಠಗಳೊಳೆಮ್ಮ
ಕುಶಲ ವಿದ್ಯಾರ್ಥಿಗಳು ಶೋಭಿಸಿಸರೀ ಕುಮಾರೇಶಕೃಪೆಯಿಂದಂದಿಗೆ
ಅಸಮವೈದಿಕ ಪಾಠಶಾಲೆಗಳನೆಲ್ಲೆಡೆಯೊ-
ಳೆಸಗಿ ಸಕಲಮಠಾಧಿಪತಿಗಳಿಗೆ ಕಲಿಸಿ ಸಂ-
ತಸದೊಳವರಿಂ ಧರ್ಮಕಾರ್ಯಗಳನಾಗಿಸಲು ತೊಡಗಿಪಂ ಶಿವಯೋಗಿಯು ॥ ೧೦ ॥

ವೀರಶೈವರು ವಿವಾಹಾದಿ ಕಾರ್ಯವ ತಮ್ಮ
ವೀರಮಾಹೇಶರಿಂ ಜರುಗಿಸಿದರೊಡನೆ ಕೆಲ-
ಹಾರುವರಸೂಯೆಯಿಂವೆಮ್ಮ ಬಾಧ್ಯತೆಯನೇ ಭಂಗಿಸಿದರೆಂದು ಬಿಡದೆ
ದೂರಲಾ ಸರಕಾರದೊಳು ಜಯಂಬಡೆದಂ ಕು-
ಮಾರಶಿವಯೋಗೀಂದ್ರನಳುಕದೆಮ್ಮಯ ಧರ್ಮ-
ಸಾರಮಂ ಪೇಳ್ದು ಸುಕುಮಾರಸೃಷ್ಟಿಯಿದೆಂದು ಸರ್ವರುಂ ಪರಿಕೀರ್ತಿಸೆ ॥ ೧೧ ॥

ಜ್ಯೋತಿಷ್ಯ ಪಾಠಶಾಲೆಗಳನೇರ್ಪಡಿಸಿ ವಿ-
ಖ್ಯಾತಿಯಂ ಪಡೆದ ಜ್ಯೋತಿಷಿಗಳಂ ಮಾಡಿಹಂ
ಜಾತಕಾದಿಗಳನತ್ಯಂತ ನೈಪುಣ್ಯದಿಂದವರು ಬರೆವುತಿರ್ಪರು
ಓತಿವರು ಬರೆದ ಪಂಚಾಂಗಗಳು ಬಹುಲ ಕುಲ-
ಜಾತಿಯವರೊಳ್ಸುಪ್ರಸಿದ್ಧಮಾಗಿಹವು ಪರಿ-
ಪೂತಮಾದೀಯೆಲ್ಲ ಜಸವೆಮ್ಮಚರವರನ ಪಾಲಿಗೈದದೆ ಮಾಣ್ಬುದೇ? ॥ ೧೨ ॥

ಬರವಾದುದಧಿಕಾರವಾದ ಮರುಃಬರಿಸವೇ
ಕೊರಗಿದರು ತತ್ಪ್ರಾಂತದವರದಂ ಕಂಡೆಮ್ಮ
ಚರವರಂ ಸೈರಿಸದೆ ಬಡಜನಕ್ಕನ್ನಸತ್ರವನೆಸಗಿದಂ ಮಠದೊಳು
ಗುರುವರಂ ಮಠಕ್ಕೆ ಪಿತ್ತಲಪತ್ರಮಂ ಪೊದಿಸ-
ಲೊರೆದೆಂದು ಮೂರುಸಾವಿರ ರೌಪ್ಯಕಂಗಳಂ
ಕರುಣಿಸಿರ್ದಂ ಮಠನೊಳೆಂಟುನೂರ್ಪೇರ್ಬತ್ತವಿರ್ದವಿವು ತೀರಲಾಗ ॥ ೧೩ ॥

ನಾಡಿಗನ್ನವನೀವುದಸವಳಂ ಧನಧಾನ್ಯ-
ದೀಡೆಲ್ಲ ಬರಿದಾದುದಿನ್ನಿನಿತಕೇ ಸಾಕು-
ಮಾಡಿಮೆಂದಾ ನಾಡಿನೆಲ್ಲ ಪಿರಿಯರು ಪೇಳಲದಕೀ ಮಹಾದಯಾಳು
ಮಾಡಿ ನಡುವಿಂದು ಸಾಕೆಂದು ಬಿಟ್ಟಡದೇಸು
ಕೇಡಪ್ಪುದವನು ಮನದೊಳು ವಿಚಾರಿಸಿ ನೀವು
ನೋಡಿದೈ ಬಡವರುಪವಾಸವೇ ಸಾವಿಗೀಡಪ್ಪರೀಕ್ಷಿಸುವದೆಂತು ॥ ೧೪ ॥

ಅವರೊಡನೆ ನಾವು ನಮ್ಮೊಡನವರು ಸಾವುದೇ
ಸುವಿಚಾರಕೊಪ್ಪುತಿಹ ಸದ್ವೃತ್ತಿಯೆಂದೊರೆದು
ತವಕದಿಂದಣ್ಣಿಗೇರಿಯ ಶಂಕರಪ್ಪನೆಂಬೋರ್ವಭಕ್ತನ ಹೊಲವನೇ
ತವೆಯೇಳುಸಾವಿರಕೆ ವಿಕ್ರಯಂ ಗೈಸಿ ಮೇ-
ಣವಸರಂ ಮಿಗೆ ಮೂರುಸಾವಿರಕೆ ಮಠದೊಂದು
ಭವನಮಂ ಮಾರಿ ಬಳಸಿದನಿನಿತು ರೌಪ್ಯಕವನೀತನಾ ದಾಸೋಹಕೆ ॥ ೧೫ ॥

ತಿಳಿದುದನಿತಕೆ ಬರಂ ನಿಖಿಲಧಾನ್ಯಂಗಳುಂ
ಬೆಳಿದವೆಲ್ಲರ್ಗೆ ಸುಖವಾಯ್ತು ಮುಂದಿನ ಬರಿಸ-
ದೊಳು ಚರೇಂದ್ರಂ ಭಿಕ್ಷೆಗಾಗಿ ಪೊರಮಡಲಾದನದನರಿದು ತತ್ಪ್ರಾಂತದ
ಹಲವು ಪ್ರಮುಖರು ಬಂದು ದೇವ ಭಿಕ್ಷೆಗೆ ತಾವು
ತಳರುವವದೇಕೆ ನಾವೇ ನಮ್ಮ ಯೋಗ್ಯತೆಗೆ
ಸಲುವಂತೆ ಭಿಕ್ಷೆಯಂ ಮಠಕೆ ಮುಟ್ಟಿಸುವೆವೆಂದೆರಗಿ ಬಿನ್ನೈಸಿ ಬಳಿಕ ॥ ೧೬ ॥

ಸಲಿಸಿದರ್ಮಠಕೆ ತಂದೆಲ್ಲರಾ ನಾಡಿನವ-
ರೊಲವಿನಿಂದಂ ತಪ್ಪದನುಕೂಲಧನಧಾನ್ಯ-
ಗಳನೀ ಚರೇಂದ್ರನಾ ಹಣದಿಂದ ಶಂಕರಪ್ಪನ ಹೊಲವನವಗೆ ಮರುಳಿ
ಬಲುಯತ್ನದಿಂ ಪೇಳಿ ಬಿಡಿಸಿ ಕೊಟ್ಟಂ ಮಠದ
ನಿಲಯಮಂ ಬಿಡಿಸಿಕೊಳಲಿಲ್ಲ ಪೋದುದು ಮನದೊ-
ಳೆಳಸಲಿಲ್ಲಂ ನಲಿದು ಪೊಗಳ್ದರೀತನ ಭಕ್ತವಾತ್ಸಲ್ಯಮಂ ಗುಣಿಗಳು ॥ ೧೭ ॥

ಹಾನಗಲ್ಲಿಗೆ ಬಂದುದೊಮ್ಮೆ ಗುರುಳಿಯಬೇನೆ-
ಯೀ ನಿರಂಜನಕುಮಾರೇಶ್ವರಂ ಬಳಲುತಿಹ
ಬೇನಿಗರಿಗೌಷಧವನುಣಲು ಗಂಜಿಯನವರಮನೆಗಳಿಗೆ ಹೋಗಿ ಮುಕ್ಟಿ
ತಾನೆ ಕೊಡಿಸಿದನುಳಿದರವರೆಲ್ಲರುಂ ಜೀವ-
ದಾನಮಂ ಮಾಡಿ ರಕ್ಷಿಸಿದನೀ ಪ್ರಭುವೆಂದು
ಜಾನಿಸಿದುದತಿಭಕ್ತಿಯಿಂ ಪುರಂ ಕರುಣಾಳು ಸೈರಿಸನೆ ಪರತಾಪವ ॥ ೧೮ ॥

ವಿರತರೊಳು ನಡುವೆ ಕೆಲದಿನಗಳಿಂದೀಚೆಗಂ
ಮುರುಘಾರ್ಯ ಸಂಪಾದನಾರ್ಯ ಸುಕುಮಾರಾರ್ಯ
ಪರಮಚೀಲಾಳಾರ್ಯರೆಂಬರಾ ನಾಲ್ವರಭಿಮಾನದಿಂ ಬೇರೆ ಬೇರೆ
ಪುರಗಳೊಳು ತಮ್ಮ ತಮ್ಮಯ ಮಠಂಗಳನು ಸುಂ-
ದರಮಾಗಿ ಮಾಡಿಕೊಂಡೀ ಮಠಕೆ ನಾವ್ಜಗ-
ದ್ಗುರುವೆಂದು ಪೊಗಳಿಕೊಳ್ಳುತ್ತಿರ್ಪರೋರ್ವರಂ ನೋಡದಂದದೆ ಪೋರೆಗೆ ॥ ೧೯ ॥

ಪರದೆಯನು ಹಾಕಿಕೊಂಡಿವರು ಬೇರೇ ಬೇರೆ
ತೆರದೆ ತಮ್ಮಾಚರಣೆಯನು ಮಾಡಿಕೊಂಡು ಬಲು
ಮೆರೆದಾಡುತಿರ್ಪರಾ ಶಾಂತತಾಭಂಗದೋಷಕ್ಕಳುಕದಾ ಮಹಿಮರು
ಮುರುಘಸಮಯಮದು ಸಂಪಾದನಾಹ್ವಯ ಸಮಯ-
ಮುರುಕುಮಾರೇಶಸಮಯಂ ಮಹಾಚೀಲಾಳ
ವರಸಮಯಮೆಂದಿಂತು ನಾಲ್ಕು ಸಮಯಂಗಳಂ ಮಾಡಿಕೊಂಡಿರುವರವರು ॥ ೨೦ ॥

ನಾವೇ ಜಗದ್ಗುರುಗಳುಳಿದ ಚರವರರೆಮಗ-
ತೀವ ವಿನಯದೊಳೆರಗಬೇಕೆಂಬರಲ್ಲವೇ
ತಾವವರಿಗೆಂದಿಗುಂ ಬಾಗದಿರ್ಪರ್ಬಾಗಿದೊಡೆ ತಮಗೆ ಹಾನಿಯೆಂದು
ತೀವಿದೊಂದಭಿಮಾನದಿಂ ನಿರಾಭಾರಿತ-
ತ್ವಾವಲಂಬನವನಾಲೋಚಿಸದಹಂಕೃತಿಯೊ-
ಳಾವಗಂ ಮೆರೆಯಲಾತಃರಿಪರೆಮ್ಮ ಸಮಯಸಪ್ಧತಿಯಿದೆಂದು ಬಗೆದು ॥ ೨೧ ॥

ಆನೆ-ಕುದುರೆಯು ಕಟ್ಟೆ ಪಲ್ಲಕ್ಕಿಯೊಳು ಮೆರೆವು
ಮಾನವಾಧಿಪರಿಂದ ಮಾನಮಂ ಪಡೆವು ಮತ-
ಹಾನಿಯನು ನೋಡದೀ ಲಿಂಗಪೂಜಾಸಕ್ತಿಯಿಂ ಮಹಾಶಕ್ತಿವಡೆವು
ಸಾನುರಾಗದೊಳೀ ಜಗತ್ತ್ರನೋವವೆ ಬರಿದೆ
ನಾನೇಜಗದ್ಗುರುವೆನುತ್ತ ಬಡಬಡಿಸುತಿಹ-
ರೀ ನಿರಂಜನನಾಮಧಾರಿಗಳಾತ್ಮಳ್ಪದೇಂ ಕಾಲವೈಚಿತ್ರ್ಯವಲ್ತೇ ॥ ೨೨ ॥

ನೆಲವ ಮೇಲುಳಿದ ಶಿವಯೋಗಿಗಳು ಬಂದೆರಗಿ
ಕುಳಿತುಕೊಳ್ಳಲು ಬೇಕು ಮಗುಳ್ದಿವರಿಗೆರಗದಲೆ
ಬಲುಹಿನಿಂವಗ್ರಪೀಠವೊಳು ತಾವಿರಬೇಕು ದೊಡ್ಡವರೆ ಗುಡ್ಡದನಿತು
ಉಳಿದವರು ಚರವರ್ಯರಲ್ಲವೇ ತಮ್ಮ ಕೊಂ-
ಕುಳದಕೂಸುಗಳೆ ಪಿಂದಿಂತಾರು ಮಾಡಿಪರು
ಗಳಿಸಿದರದಾರಿಂದಿವರ್ಗಳೀ ಪೇರ್ಮೆಯಂ ಧರ್ಮಕಿದು ಸನ್ಮಾನ್ಯವೇ ? ॥ ೨೩ ॥

ಮತಶಾಸ್ತ್ರದೊಳಗಿದಂ ಬರೆದಿಲ್ಲವೆಲ್ಲಿಯುಂ
ಕ್ಷಿತಿಯೊಳೀ ಭಕ್ತರಾಮಾತನಾಚರಣೆಯಂ
ಪತಿಕರಿಸಬೇಕು ಧರ್ಮೋದ್ಧಾರವೆಂತಾಗಬೇಕೀ ವಿರಕ್ತರಿಂದ
ಕೃತಕತನವಮು ಬೆಳೆಮದೀ ಸಮಯಭೇದದಿಂ-
ದತಿಶಯಾಸೂಯೆಯುದು ಪೆರ್ಚಿದುದು ಚಿಛಕ್ತಿ
ಗತಿಗೆಟ್ಟು ಪೋಮದೀ ಹಾನಿಯೇಕರಿಯಬಾರದು ಚರಾಧಿಪರಿಗಕಟಾ ॥ ೨೪ ॥

ಸಮಯಮಂ ಪಿಡಿಯದಿರ್ಪಂ ಮಹಾಶಿವಯೋಗಿ
ಸಮಯಭೇದದೊಳಾಡುವವನೆ ಧರ್ಮತ್ಯಾಗಿ
ಸಮಯಕಾಗಿ ನಿರಂತರದೊಳು ಹೋರಾಡದಿರ್ಪಾತನೇ ವೀತರಾಗಿ
ಸಮಯವೆಂದಿಗೆ ಮುಳುಗಿಹೋಗುವದೊ ಹಾಳಾಗಿ
ಸಮಯಗಳಿಗೊಪ್ಪುವರು ಸ್ವಾರ್ಥಿಗಳು ತಲೆವಾಗಿ
ಸಮಯಾದ್ರಿಯೊಳು ಪೋಗಿ ಸುವಿಚಾರಮಂ ನೀಗಿ ನಲಿವನೇ? ಕೂಗಿ ಜೋಗಿ ॥ ೨೫ ॥

ಸಮಯಭೇದಗಳಿಗಿಂದಧಿಕ ಕಂಟಕವಿಲ್ಲ
ಸಮಯಭೇದಗಳಿಗಿಂ ಪೆರ್ಚ್ಚಿದ ಕೆಡುಕಿಲ್ಲ
ಸಮಯಾಭಿಮಾನದಿಂ ಮತದೇಳ್ಗೆಯಾಗದದರಿಂ ಸಮಯಕಪಕಾಶವ
ವಿಮಲಮಾನಸವುಳ್ಳವರದೇಕೆ ಕೊಟ್ಟಪರು
ಸಮಯಾವಲಂಜನಂ ಮತಿಗೊಡದು ಗತಿಗೊಡದು
ಸಮಯಭೇದವನುಳಿದವನೆ ಸತ್ಯನೆಂದುಬ್ಬಿ ಕಬ್ಬಿಗರು ಪಾಡುತಿಹರು ॥ ೨೬ ॥

ಘನಜಗದ್ಗುರುಗಳಾವೆಂಬವರು ಮತ್ತೋರ್ವ
ಘನಜಗದ್ಗುರುವರ್ಯರಿಗೆ ಜಗದ್ಗುರುವೆಂದು
ನೆನೆಯರಾಲಿಸರು ಬಾಯಿಂ ನುಡಿಯರುಳಿದಚರವರ್ಯನಿಗೆ ಸ್ವಾಮಿಯೆನದೆ
ಮನದುರ್ಕಿನಿಂದ ಚರಮೂರ್ತಿಯೆಂದಾಡುವರು
ಜನರು ತಮ್ಮೆದುರಿನೊಳು ಬೇರೆಯವರಿಗೆ ನಿರಂ-
ಜನಜಗದ್ಗುರುವೆಂದು ನುಡಿದೊಡುವರಿವರೆ ಪುರುಡಿನವರೀ ಜಗದೊಳು ॥ ೨೭ ॥

ವರಕುಮಾರೇಶನೀ ಸಮಯದಿಂದಪ್ಪ ದು-
ರ್ಧರಮಹಾನರ್ಥಕೋಟಿಯನರಿದು ಮನಸಿನೊಳು
ಪರಿತಾಪಗೊಂಡು ತಡೆಯದೆ ಜಗದ್ಗುರುವರೇಣ್ಯರಸನ್ನಿಧಿಗಳ ಸಾರ್ದು
ಚರಸಮಯವೊಂದಲ್ಲದೀ ನಾಲ್ಕುಸಮಯಗಳು
ಮೆರೆಯುವೆಮ್ಮಯ ಶಿವಾನುಭವಶಾಸ್ತ್ರದೊಳು ನೀ-
ವರಿಯದರೆ ಶಿವಮತೋದ್ಧಾರಮಂ ಮಾಳ್ಪದೊಂದೇ ನಿಮ್ಮ ಕರ್ತವ್ಯವು ॥ ೨೮ ॥

ತಿಳಿಯಲು ನಿರಂಜನ ಚರಾಶ್ರಮವಿದೊಂದೆ ಮೇ-
ಣೊಲಿದೀ ವಿರಕ್ತರೆಲ್ಲರ ಸತ್ಕ್ರಿಯಾಚರಣೆ-
ಗಳುಮೊಂದೆ ಪಡೆದೀ ನಿರಾಭಾರಿಸದ್ಗುರುತ್ವಾಧಿಕಾರಂಗಳೊಂದೇ
ಸುಲಭಮೆನೆ ಚರರೆಲ್ಲರಾಚರಿಸಿ ಸಾಧಿಸುವ-
ಫಲವೊಂದೆ ಶಾಸ್ತ್ರವಿಹಿತೈಕೋತ್ತರಾತುಲ-
ಸ್ಥಲವೊಂದೆ ಕುಲವೊಂದೆ ಛಲವೊಂದೆ ಚರಸಮಯ ಭೇದಂಗಳೆಂತಿವರೊಳು
॥ ೨೯ ॥

ವರನಿರಂಜನ ಜಗದ್ಗುರುವರರಿಗಾಜಗ-
ದ್ಗುರುಗಳೇ ಗುರುವಾಗಬಲ್ಲರೇನುಳಿದಚರ-
ವರರಾಗಲಾಗವೇನಾಗುತಿರ್ದೊಡೆ ಜಗದ್ಗುರುಗಳೇ ಗುರುವರ್ಯಗೆ
ಎರಗರೇ ಪಿಂದೆರಗಿ ಮುಂಪೆರಗಬಾರದೇ
ಸರಿಯಲ್ಲವೆನುಗುಳಿದ ಚರವರ್ಯರೆಂಬೊಂದು
ಪರಿಯಾವುದಿದು ಮಹತ್ವಾಕಾಂಕ್ಷೆಯುಂ ಮತವಿರೋಧಮಾರ್ಗಮುಮೆನಿಸದೆ ॥ ೩೦ ॥

ನಿಮ್ಮೊಳ್ಜಗದ್ಗುರುತ್ವಮದುಳ್ಳೊಡಾವಗಂ
ನಿಮ್ಮಂತೆ ಮೆರೆವುಳಿದ ಚರವರರೊಳೇಕಿಲ್ಲ
ನಿಮ್ಮೊಬ್ಬರಿಗೆ ಜಗದ್ಗುರುತನಮದುಂಟೆಂದೊಡದನಾರು ಕರುಣಿಸಿಹರು
ಹೆಮ್ಮೆಯಿಂ ನಿಮಗೆ ಕೊಟ್ಟವರುಳಿದಯತಿಗಳಿಗೆ
ಸಮ್ಮತಿಸರೇ ಜಗದ್ಗುರುಗಳಾವೆಂದೊಡೀ-
ಬಿಮ್ಮು ಸರಿಯಲ್ಲ ನಿಮ್ಮಂತವರನರಿದು ಧರ್ಮೋದ್ಧಾರಮಂ ಮಾಡಿರಿ ॥ ೩೧ ॥

ನೀವನ್ಯಸಮಯದವರಂ ನಿಷೇಧಿಸುವಂತೆ
ಭಾವಿಸುವರವರು ನಿಮ್ಮಂ ನಿರಾಕೃತರೆಂದು
ಕೋವಿದತ್ವಮಿದಲ್ಲಮನ್ಯೋನ್ಯರನುಕೂಲತೆಯೊಳಿರ್ದೊಡೊಳಿತಲ್ಲವೇ
ಈ ವಿವೇಕವಿಚಾರಕಾಲದೊಳು ಸಮಯಭೇ-
ದಾವಲಂಬನಮಿದೆಳ್ಳನಿತು ಸಾಗದು ಮೊದಲಿ-
ನಾ ವಿಮುಗ್ಧತೆಯ ಕಾಲಂ ಪೋದುದಿನ್ನು ನಾವೇ ಜಾಣರಾಗಬೇಕು ॥ ೩೨ ॥

ಪರಿಪರಿಯೊಳೀ ಜಗದ್ಗುರುಗಳಿಗುಮಿಂತುಳಿದ
ಚರವರೇಣ್ಯರಿಗುಮತ್ಯಂತಹಿತಮೆನಲೊರೆದು
ಪರತರಕುಮಾರ ಸಮಯದಯತಿಯು ತಾನಿರ್ದುಮನ್ಯಸಮಯಚರೇಂದ್ರರ
ಚರಣತೀರ್ಥವ ಪಡೆದನವರೊಡನೆ ಸದ್ಭಕ್ತಿ
ವೆರಸಿ ಸಮರಸವನುರೆ ಮಾಡತೊಡಗಿದನಾಗ
ಸರಿದುದೀ ಸಮಯಭೇದಭ್ರಮೆ ಸಮಸ್ತಚರವರ್ಯರೊಂದಾದರರರೇ ॥ ೩೩ ॥

ತಾನು ಪೂಜಿಸಿದನಲ್ಲದೆ ಸಕಲಚರಪರವಿ-
ತಾನಮಂ ಪಡೆದೆಂದುಮಾವಾತನಿಂದಲುಂ
ತಾನೊಪ್ಪಿ ಪೂಜೆಗೊಳಲಿಲ್ಲವಾದಡುಮಿವನಧೀನತೆಯೊಳಿರ್ದ್ದರೆಲ್ಲ
ಶ್ರೀನಿರಂಜನಚರಾಧಿಪರವರು ಸಮುಯದಭಿ-
ಮಾನವಿಲ್ಲದೆ ಸಾಮರಸ್ಯಮಂ ಮಾಳ್ಪರ್ಶ್ರಿ-
ವಾನುಭವಶಾಸ್ತ್ರವೊಪ್ಪುವ ತೆರದೊಳಾನಂದತುಂದಿಲಮನಸ್ಕರಾಗಿ ॥ ೩೪ ॥

ನೆಲದಮೇಲುಂ ತೃಣಾಸನದೊಳುಂ ಕುಳ್ಳಿರುವ-
ಜೊಳಿತಾಗಿಯೊಪ್ಪುತಿರ್ದ್ದಶ್ರೀ ಮಹಾತ್ಮನಿಗೆ
ನೆಲದ ಮೇಲ್ತಾನು ಕುಳ್ಳಿರ್ದ್ದಡುಂ ಬಂದಗುರುಪರ್ಗ್ಗದಧಿಕಾರಿಗಳನು
ವಿಲಸಿತಯತೀಶ್ವರರನುಚಿತಾಸನಂಗಳೊಳು
ನೆಲೆಗೊಳಿಸುವಂತೆ ಮಾಡುತಿರ್ದ್ದನೊಪ್ಪಿನಿಂ
ಒಲು ಮೇಲುಗದ್ದುಗೆಯೊಳಿರಲೆಳಸಲಿಲ್ಲ ತಾನೀ ಮಹೋತ್ಕೃಷ್ಟರಮನು ॥ ೩೫ ॥

ಅಂತು ಸಂಧಿ ೬ ಕ್ಕೆ ಪದಗಳು ೨೧೬

ಜಯಂ



॥ ಶ್ರೀ ಶಿವಗಣೇಭ್ಯೋ ನಮಃ ॥



## ಏಳನೆಯ ಸಂಧಿ ಪ್ರಾರಂಭ





**ಸೂಚನೆ:-**

ಮಹಿಳೆ ತಾನೆಸಗಿದಡಿಗೆಯನೂಡಬೇಕೆಂದು
ಬಹುಭಕ್ತಿಯಿಂದಪೇಕ್ಷಿಸಲೊಪ್ಪಲಿಲ್ಲ ನಿಜ -
ವಿಹಿತಮಾತೆಗೆ ಪಾದವನ್ನಂಗೊಡಲಿಲ್ಲವೀ ಮಹಾಶಿವಯೋಗಿಯು ॥

ನಾಮರೂಪಕ್ರಿಯಾರಹಿತನಾದ ಭವನೀ
ಸೀ ಮಹಿಯನುದ್ಧರಿಸಲೆಂದು ಜಂಗಮನೆಂಬ-
ನಾಮದಿಂ ಪಂಚಲಾಂಛನಸುಶೋಭಿತರೂಪದಿಂದನುಗ್ರಹಕಾರ್ಯದಿಂ
ಪ್ರೇಮದಿಂ ಮಿಗೆ ಸದಾಸಂಚರಿಸುತಿರ್ದಪುಂ
ಈ ಮರಂ ನಾನಾತನಂ ಅವರಿಂದು ಸೇವಿಸದೆ
ವ್ಯೆಮರೆದು ಪಶುವಿನಂತಿರುವೆನೆನಗರಿವಿತ್ತು ಸಲಹು ಮಕರಧ್ವಜಾರಿ ॥ ೧

ನಾರಿಯರ ಮುಖವನಾಗಳ್ನೋಡುತಿರಲಿಲ್ಲ
ನಾರಿಯರು ಮಾಡಿದಡಿಗೆಯನುಣ್ಣುತಿರಲಿಲ್ಲ
ನಾರೀವಿಲಾಸಶೃಂಗಾರಮಂ ಮರೆದಾದಡುಂ ಕೇಳುತಿರಲಿಲ್ಲವು
ನಾರಿಯರೊಳುಳ್ಳ ಪಾತಿವ್ರತ್ಯಮಂ ಪರಮ-
ವೈರಾಗ್ಯಮಂ ಕೇಳ್ದು ಸಮ್ಮತಿಸದಿರಲಿಲ್ಲ
ನಾರೀವಿತಾನದೊಡನಾಟವದು ವಿಷದೂಟವೆಂಬನೀ ಶಿವಯೋಗಿಯು ॥ ೨ ॥

ಮೆರೆವಾ ಸಿರಾಳಕೊಪ್ಪದೊಳೋರ್ವ್ವ ಭಾಗ್ಯವತಿ
ಪರತರಾಚಾರಗುಣಸಂಪನ್ನೆ ಗುರುಲಿಂಗ-
ಚರವರ್ಯಸೇವಾಪ್ರವೃತ್ತೆ ಸದ್ಭಕ್ತಿಯುತೆಯಿರ್ದ್ದಳಾ ಮಹಿಳೆಯೊಮ್ಮೆ
ವರಕುಮಾರೇಶ್ವರನ ದರ್ಶನಾರ್ಥಂ ಮಹಾ-
ದರದಿಂದ ಹಾನಗಲ್ಲಿಗೆ ಬಂದು ಮಠದೆ ಮೊದ-
ಲರಳೆಲೆಯುಚರಮೂರ್ತಿಗಳನು ಕಂಡೆರಗಿ ಕಡುವಿನಯದಿಂ ಗುರುವರೇಣ್ಯಾ ॥ ೩ ॥

ಅವಧರಿಪುದೆನ್ನ ಬಿನ್ನಪವನೀ ಸ್ವಾಮಿಗಳಿ-
ಗವಧಾನದಿಂ ನಾನೆ ಶುದ್ಧಮಡಿಯಾಗಿ ಪಾ-
ಕವನೆಸಗಿ ತತ್ಪಾದತೀರ್ಥಮಂ ಸ್ವೀಕರಿಸಿ ಕೈಮುಟ್ಟಿ ನೀಡಿ ತಣಿಸಿ
ತವೆ ಸಮರ್ಪಿಸುವೆನಾನೊಂದು ಸಾಸಿರರೌಪ್ಯ-
ಕವನಿದಂ ತಿಳಿಸಿ ನೆರೆವೇರಿಪಂತೆಸಪುದೆಂ-
ದವಿದಿಡಲು ಚರಮೂರ್ತಿಗಳ್ಪೋಗಿ ತಿಳಿಸಿದರು ಸ್ವಾಮಿಗಳಿಗೀವಾರ್ತೆಯ ॥ ೪ ॥

ಲೇಸು ವ್ಯವಹಾರವಿದು ಚರಮೂರ್ತಿಗಳೆ ನಿಮ್ಮ
ಸಾಸಕಾವೊಪ್ಪಿದೆವು ನೀವಿಂತು ಮಾಡಿ ಸಮ-
ಗೇಸು ಲಾಭವನಾಗಿಸುವಿರಿ ಭಾಪುರೆಯಲ್ಲೊ ನಿನಗಿಸಿತು ತಿಳಿಯಲಿಲ್ಲೇ
ಆ ಸುದತಿಯರ ಪಾಕಮಂ ಮುಟ್ಟದಿಹ ವ್ರತವ-
ನೀ ಸಾವಿರಕ್ಕೆ ಮಾರಿಸಲೆಂದು ಬಂದಿರುವೆ
ದೇಶದೊಳು ನೀನಿಂತು ನಮ್ಮೆಲ್ಲ ವ್ರತಗಳಂ ಮಾರಿಸೋಳತಪ್ಪದೆಮಗೆ ॥ ೫ ॥

ವ್ರತಲೋಪದೊಳಗಸುವನುಳಿವುದೆಂದುಂ ಪಿಡಿದ-
ವ್ರತವನೆಡವಿಡದಛಲಿಯಾಗಬೇಕೆಂದು ಮುಲಿ-
ವತುಲ ಶಿವಧರ್ಮಶಾಸ್ತ್ರಗಳ ಬಾಯ್ಬಡಿದು ಸಮ್ಮಯ ವ್ರತವ ಮಾರಿಕೊಂಡು
ಕ್ಷಿತಿಯೊಳ್ಸುವರ್ಣರಾಶಿಯ ಮೇಲೆ ಮೆರೆವುದೋ
ವ್ರತಗೆಟ್ಟು ಸಿರಿವಡೆದೊಡಪ್ಪ ಸೊಗಪೇನು ತ-
ದ್ವ್ರತಕಾಗಿ ಸಿರಿಗೆಟ್ಟೊಡಾವ ಕಷ್ಟಂ ಪೇಳು ವ್ರತವಿತ್ತಗಳ ಮರ್ಮವ ॥ ೬ ॥

ವ್ರತವನಾಚರಿಸಿ ಜಾಣರ್ಚಿತ್ತಶುದ್ಧಿಯಂ
ಜಿತರತೀಶಪ್ರೀತಿಯಂ ಪಡೆವರರ್ಥಕ್ಕೆ
ಮತಿಗೊಟ್ಟು ಮೋಹಿಪವಿವೇಕಿಗಳನಾ ಲಕ್ಷ್ಮಿಯೆಳೆದೊಯ್ದು ಕಷ್ಟದಲ್ಲಿ
ಗತಿಗೆಡಿಸಳಿಟ್ಟು ಲಕ್ಷ್ಮಿಗೆ ಸೋಲ್ದವಂ ಮಹಾ-
ಕೃತಕನತಿವಿಶ್ವಾಸಘಾತಕಂ ಪಾತಕಾ-
ನ್ವಿತನಸತ್ಯಂ ನಿರ್ದಯಾಚಿತ್ತನಪ್ಪನುತ್ತಮಗುಣಕ್ಕೊಪ್ಪದಿಹನು ॥ ೭ ॥

ಚಿಂತೆಗಳೆ ಲಕ್ಷ್ಮಿಗಣುಗೆಯರವರ್ಕೆಳೆವರ-
ತ್ಯಂತದುಷ್ಟಾಲೋಚನೆಗಳಿಂದ ನಿಜಮಿತ್ರ-
ಸಂತತಿಯುಮರಿವರ್ಗಮಾಗಿಯುಂ ಪರಿಪಂಥಿಗಳನಾಪ್ತಗಣವಾಗಿಯುಂ
ಸಂತತಂ ಮಾಳ್ಪಳೀ ಲಕುಮಿಯೀಕೆಯ ಸೋಂಕಿ-
ನಿಂ ತಪೋಧನನ ಮನಮಾವಡುಂ ಕುಂದಿ ಕ-
ಪ್ಪಾಂತು ಪಕ್ವಾಗದಿರನವಿಚಾರದಿಂದವನಸಳಿಂಪ ಚಪಲತೆಯುಂಟೇ ॥ ೮ ॥

ನೀತಿಯಿಂದನ್ನವಸನಂಗಳಿಗೆ ವಿತ್ತಮಂ
ಭೂತಲದೆ ದುಡಿದು ಪಡೆವುದು ಯೋಗ್ಯವೈ ನರನ-
ನೀತಿಯಿಂದಾವನುಂ ಗಳಿಸಬಾರದು ಸಕಲಜೀವಿಗಳಿಗನ್ನವಿತ್ತು
ಪ್ರೀತಿಯಿಂ ಪೊರೆವ ವಿಶ್ವಂಭರಂ ಶಿವನಿರ್ಪ-
ನೇತಕುರುಸುಖದಾಯಕ ವ್ರತವನುಳಿದು ದುಃ-
ಖಾತಿಶಯಕೊಳಗಾಗಿಸುವ ಹಣವಗಳಿಸಬೇಕಾ ತಾಯಿಗೊರೆ ಸತ್ಯವ ॥ ೯ ॥

ಲಿಂಗಮುಂ ತನ್ನ ಮನದಂತರ್ಪಿಸುವದು ಗುರು-
ಜಂಗಮರನವರ ಮನಮೊಪ್ಪುವಂದದೊಳು ನಿಯ-
ಮಂಗೆಡದೆ ಸತ್ಕರಿಸುವದು ನೀತಿವಿಡಿದು ಭಕ್ತರ್ಭಕ್ತಿಯಿಂದರಿಯದೆ
ಪೋಗಿ ತನ್ನಯ ಮನಸಿನಂತೆ ಗುರುಜಂಗಮಗ-
ಣಂಗಳಂ ಸೇವಿಸಲಪೇಕ್ಷಿಪನೆ ಧರ್ಮಮೂ-
ಢಂಗಡ ಮಹಾತ್ಮರ ಮಹಾಲಿಂಗತೃಪ್ತಿಕರ ಕಾರ್ಯವೇ ಪರಮಸೇವೆ ॥ ೧೦ ॥

ಲಲನೆಯರು ಮಾಡಿದಡಿಗೆಯನುಣ್ಣಬಾರದೆಂ-
ದುಳಿವೆವಾವಮಲ ದೀಕ್ಷಾವಂತರಾಗಿರ್ದ-
ಬಳಿಯರೇಂ ಪುರುಷರೇಂ ಮಡಿಯಿಂದ ಮಾಡಿದೋಗರವನುಣ್ಣುವೆವಾದೊಡೆ
ವಿಲಸದ್ವಿರಕ್ತಿಗತಿಕಂಟಕಿಗಳೆನಿಪ ಪೆ-
ಣ್ಗಳ ಸರ್ವಸಂಗದಿಂದೂರವಿರಬೇಕೆಂದು
ಛಲಿಯಾಗಿ ವ್ರತವಕೈಕೊಂಡಿರುವೆವದರಿಂದ ಸ್ತ್ರೀಪಾಕವೆಮಗೆಬೇಡ ॥ ೧೧ ॥

ಪುರುಷರಿಗೆ ಪೆಣ್ಗಗಳುಂ ಪೆಣ್ಗಳಿಗೆ ಪುರುಷರುಂ
ದುರಿತವಸ್ತುಗಳಲ್ಲವಿವರಲ್ಲಿ ಪುಟ್ಟಿಮುಂ-
ಬರಿಮ ಗತಿಗೆಡಿಸುತಿಹ ಕಾಮವೇ ಮೃತ್ಯುವಿದಕೊಳಗಾಗಬಾರದೆಂದು
ತೊರೆವರ್ಪರಸ್ಪರರ್ಸಕಲಸಂಗವನುಮಾ-
ವರಯೋಗಸಾಧಕರ್ಬಲವದಿಂದ್ರಿಯಜಯಂ
ಬರಿದೆ ಸಮನಿಪುದೆ ಸಾಧನವಿಲ್ಲದಿದನು ತಿಳಿದಿಲ್ಲವೇ ನೀನೆನ್ನಲು ॥ ೧೨ ॥

ಇಳಿದುದಾ ಚರಮೂರ್ತಿಗಳ ಮನೋಭ್ರಮೆ ನಾನು-
ಸಿಲುಕಿದುದೆ ತಪ್ಪೀಯಪಕ್ವಯೋಚನೆಯೊಳಾ-
ಲಲನೆಯೊಳ್ನುಡಿಯ ಮಬ್ಬಿನೊಳು ಮರೆದೆನು ವಿಚಾರವನೆಂದು ನಾಣ್ಚಿ ಬಂದು
ತಿಳಿಸಿದನವಳ್ಗಿದೆಲ್ಲವನು ಕೇಳ್ದಾಕೆ ಮನ-
ದೊಳು ನೊಂದು-ಬೆಂದು ನಿಷ್ಕೃತಿಗಾಗಿ ಮಾಡಿದಳು
ವಿಲಸಿತ ಗಣಾರಾಧನೆಯನು ಘನತರ ಕರ್ತೃವೇದಿಕಾಸಾಕ್ಷಿಯಾಗಿ ॥ ೧೩ ॥

ತನುಭವಂ ಸುಪ್ರಸಿದ್ಧಸ್ವಾಮಿಯಾಗಿ ಬಲು-
ಘನತೆಯಿಂ ಮೆರೆವುತಿಹನೆಂದು ಜನರಿಂ ಕೇಳ್ದು
ನೆನೆದಾ ಕುಮಾರೇಶನಂ ಕಾಣಲೆಂದೊಮ್ಮೆಯೀ ಹಾನಗಲ್ಲಮಠಕೆ
ಜನನಿ ನೀಲಾಂಬೆಯೈತರಲದಂ ತಿಳಿವುತಾ-
ದಿನವೇ ಮಹಾರಾಜಪೇಟೆಯೊಳಗುಳ್ಳ ಸ-
ದ್ವಿನುತನಿಜಮಠಕೆ ಪೋದಂ ತನ್ನ ತಾಯ್ಗೆ ಮುಖಮಂ ತೋರದಂತೀತನು ‖ ೧೪ ‖

ನೋಡಲೆಂದೈತಂದ ಕನಿಕರದ ಮಾತೆಯಂ
ನೋಡದೋಡಿದನು ಜೀರಿಡೆಗಿವಂ ಪುತ್ರನೇ ?
ನಾಡೆ ಶ್ರುತಿಮಾತೃದೇವೋಭವ ಎನುತುಲಿವ ಮಾತಿಗೊರಸಿದನು ಮಸಿಯ
ಊಡಲಿಲ್ಲವೆ ಮೊಲೆಯನಿವಗವಳ್ಮೊದಲು ಮು-
ದ್ದಾಡಲಿಲ್ಲವೆ ಕರಗಳಿಂದೆತ್ತಿ ಜೋಗುಳವ-
ಹಾಡಲಿಲ್ಲವೆ ತೊಟ್ಟಿಲೊಳು ಮಲಂಗಿಸಿ ಹತ್ತಿಗರೆದು ಪೋಷಿಸಲಿಲ್ಲವೇ ‖ ೧೫ ‖

ಈಗ ತಾನುರು ವಿರತನಾದೊಡೇನಾಯ್ತು ಶಿವ-
ಯೋಗಿಗಳು ಹಡೆದವ್ವನಂ ನೋಡಿದೊಡೆ ಕೆಡುವು-
ದೇ ಗುರುಚರತ್ವಾಧಿಕಾರವದು ಶ್ರೀ ಜಗದ್ಗುರು ಶಂಕರಾಚಾರ್ಯರು
ಆಗ ತನ್ನಯ ತಾಯಶವದೊಡನೆ ಸುಡುವೆಡೆಗೆ
ಪೋಗಿರ್ದರೆಂದು ಹೇಳುವದಿಲ್ಲವೇ ಕುಶಲ-
ರೀ ಗುಣವನೇಕೆ ಕೊಡಲಿಲ್ಲವೋ ಪರಮೇಶ್ವರಂ ಕುಮಾರೇಶ್ವರಂಗೆ ‖ ೧೬ ‖

ಮದುವೆಯೊಳು ವೈರಾಗ್ಯದಿಂದ ಮನೆಯಂ ಬಿಟ್ಟು
ಸದುಗತಿಗೆ ಮನವಿಟ್ಟು ಸುಜ್ಞಾನಮಂ ಪಡೆದು
ಚಿದುರನೆಂದೆನಿಸಿ ಜನಹಿತಕಾಗಿ ಸಂಚರಿಸುತಂ ನಿಜಾಲಯಕೆ ಮರೆದು
ಪದೆದು ಭಿಕ್ಷೆಗೆ ಬರಲು ತನ್ನನೆನೆವಿಂದ ಕಂ-
ದಿದ ಮಾತೆಯಂ ತಿಳಿದು ನಿನ್ನ ಮಗನಾನೆಂದು
ಮೊದಲಹೆಸರಂ ಪೇಳ್ದು ತಳ್ಕೈಸಲಿಲ್ಲವೇ ರಾಮದಾಸಂ ಮಾತೆಯ ‖ ೧೭ ‖

ಈ ತೆರದೊಳಗಣಿತ ಮಹಾತ್ಮರತಿಭಕ್ತಿಯಿಂ
ಮಾತೆಯರನೀಕ್ಷಿಸಿಹರೀತಗೇನಾದುದೋ
ಭೂತಳದೊಳೀ ರೀತಿಗಾವನೊಪ್ಪುವನು ತೆಗೆ ತಾಯಿಗಿಂ ಪ್ರೀತರಾರು
ಓತು ತುರುಕರುಗಳಂಬಾ ಎನುತ್ತೊದರುವವು
ನಾತಿ ಸುತಹಿತಕೆ ಕಷ್ಟವನೆದುರಿಸುತ್ತಿಹಳು
ಮಾತೆಯೊಳು ನಿಜಕೃಪಾಬಲವನಿರಿಸಿಹನು ದೇವಂ ಮರೆದಸಿವನು ಯತಿಯು ॥ ೧೮ ॥

ಅಲ್ಲಲ್ಲ ಮರೆವಾತನಲ್ಲೀ ಕುಮಾರೇಶ-
ನೆಲ್ಲವಂ ಬಲ್ಲವಂ ನಿಜಮಾತೆಯಂ ನೋಡ-
ಲೊಲ್ಲದನ್ಯಸ್ಥಲಕೆ ಪೋದಬಗೆ ಬೇರಿವಂ ಪೂರ್ವಾಶ್ರಯ ಪ್ರೇಮವ
ತಳ್ಳಿರ್ದನೋಳಗೆ ಹೊರಗಿನಿಸುಳಿಯದಂತಾತ್ಮ-
ದಲ್ಲಿ ಲೌಕಿಕವಿಷಯ ಸಂಬಂಧವಿಃ ಯತಿಗೆ
ತಲ್ಲಣಂಗೊಳಿಸುತಿರ್ದತ್ತದರಿನೀಕ್ಷಿಸದೆ ಪೋದನೀಕ್ಷೆಯನು ಯತಿಯು ॥ ೧೯ ॥

ಶ್ರೀ ಶಂಕರಾಚಾರ್ಯರುಂ ರಾಮದಾಸರುಂ
ಲೇಸಾದ ಕೇವಲಾದ್ವೈತನಿಪುಣರ್ಕಳವ-
ರಾ ಸರ್ವಕರಣಗಳ್ನೀತಿಯಿಂ ತಮ್ಮ ವಿಷಯಗಳೊಳಾಡುವವರಿಂದ
ಈ ಸುಮಾತೆಯರನುಂ ಲಕ್ಷಿಸಿರಲಹುದು ಸ-
ವಿಸ್ಮೇ ಸದಾಶಿವಯೋಗಿ ಲಿಂಗಮಯ ಕರಣಪ್ರ-
ಕಾಶನಾಗಿಹುದರಿಂ ಮಾತೆಗೀತೆಗಳ ಹಂಗೇನಿವಂಗರಿದು ನೋಡೆ ॥ ೨೦ ॥

ನಾನು ತನ್ನಂ ನೋಡಲೆಂದು ಬಂದುದನರಿದು-
ಮೀ ನಿರಂಜನಮೂರ್ತಿ ಮಠದಿಂದ ಪೋದ ನಿ-
ನ್ನೇನು ಮಾಳ್ಪುದು ಜನನಿಯೆಂಬ ಮರುಕವನು ಬಿಟ್ಟಿರುವೆನಾ ತಾಯೆ ನೀನು
ಸೂನುವೆಂಬೆನ್ನ ಮೋಹವನು ತೊರೆಯೆಂದಂದೆ
ತಾನೊರೆದು ಬಂದಿರ್ಪನಿವನವಂ ಮರೆದಿಲ್ಲಿ-
ಗಾನನವ ನೋಡಲೈತಂದೆನಿವನಾಡಿದಂತಾಗಿರ್ಪನರಿಕೆಯಾಯ್ತು ॥ ೨೧ ॥

ಎನ್ನ ಮೊಗಮಂ ನೋಡಲಿಲ್ಲೆಂಬ ಮುನಿಸಿಲ್ಲ-
ವೆನ್ನಣ್ಣನೆಮ್ಮ ತಾಯೆಮ್ಮ ಬಳಗವಿದೆಂಬ
ಮನ್ನಣೆಯ ಮೋಹವೀತನೊಳಿಲ್ಲದಂತಾದುದೇ ಮಹಾಭಾಗ್ಯವೆಮಗೆ
ಮುನ್ನು ಮಾಡಿದ ಪುಣ್ಯದಿಂದೀ ಮಹಾತ್ಮನೊಲಿ.
ದೆನ್ನುದರದೊಳು ಪುಟ್ಟಿ ಬಂದಿರ್ಪನಿದೆ ಸಾಕು
ಚೆನ್ನಾದುದಿವನ ಸುಕ್ಷೇತ್ರಮಂ ನೋಡಿದೆನೆನುತ್ತ ಹಿಗ್ಗಿದಳು ಮನದೆ ‖ ೨೨ ‖

ಸ್ವಾಮಿಗಳ ದರ್ಶನಕ್ಕೆಂದವರ ತಾಯಿತಾ-
ನೀ ಮಠಕೆ ಬಂದಿರ್ಪಳದನರಿದು ನಿಲ್ಲದಿಂ-
ದಾ ಮಹಾರಾಜಪೇಟೆಗೆ ಪೋದರೆಂದು ತನ್ಮಠಸುವ್ಯವಸ್ಥೆಗೈವ
ಶ್ರೀಮದರಳೆಲೆಯಮಠದಸಮಚರಮೂರ್ತಿಗಳು
ಪ್ರೇಮದಿಂ ಮೂರುದಿನವಿರಿಸಿಕೊಂಡುಪಚರಿಸಿ
ನೇಮದೆನೆ ಸೀರೆಕುಪ್ಪಸಗಳಂ ಗೋವನೊಂದಂ ಕೆಲವುದಿನಸನಿತ್ತು ‖ ೨೩ ‖

ಕಳಿಸಿದರ್ಶ್ರೀಲಾಂಬೆಯುಂ ಪೋಗುತಿರೆ ಮಾರ್ಗ-
ದೊಳಗೊಂದು ಹರಿವ ಹಳ್ಳದೆ ಬಂಡಿ ಬೀಳ್ವಲ್ಲಿ
ಮುಳುಗಿ ಕೈಗೊದಗದಂತಾ ಕೆಲವು ದಿನಸುಗಳ್ಪೋದವಿನ್ನೇನೇಳ್ವುದು
ಉಳಿದವಾಕಳು ಸೀರೆ-ಕುಪ್ಪಸಗಳದಕವಳು
ಬಳಲಿದಳು ಶಿವಶಿವಾ ಹೆಚ್ಚಿನ ಪದಾರ್ಥಂಗ-
ಳುಳಿಯಲಿಲ್ಲವುಗಳಂ ತಂದುದೇ ತಪ್ಪೆಂದು ಮನದೊಳಚ್ಚರಿಯ ನಾಂತು ‖ ೨೪ ‖

ಮಗನೆಂಬ ಭ್ರಮೆಯಿಂದ ಬಂದುದೇ ಮೌಢ್ಯವೀ-
ಸುಗುಣನಂ ತಾನಾತ್ಮಜಾಭಿಮಾನವನುಳಿದು
ಬಗೆಯೊಳತಿಭಕ್ತಿಯಿಂ ಬಂದಿರ್ದಡಾಗುತಿರ್ದತ್ತವನ ದರ್ಶನವದು
ಜಗವೆನ್ನದೆಂಬ ಮಹಿಮನ ಮಾತೆಯಿವಳೆಂದು-
ಒಗೆದು ಚರಮೂರ್ತಿಗಳ್ಪದೆದಿತ್ತ ಕೆಲಪದಾ-
ರ್ಥಗಳೆನಗೆ ದಕ್ಕಲಿಲ್ಲೆಂದು ತನ್ನೂರಿಗೈದಿದಳು ಮರುಗುತ್ತಾಕೆಯು ‖ ೨೫ ‖

ನಾನೆನ್ನದೆಂಬೊಂದು ಘೋರತರ ಮೋಹಾಭಿ-
ಮಾನವೇ ಭೂಸ್ವರ್ಗನಿರಯಗಳಿಗೆಡೆವಿಡದೆ
ಮಾನವನನೆಡತಾಕಿಸುವದು ಜಗಮುದಯಾದಿಯಿಂದವಳಿಪೊಡನೆ ಮುಕ್ತಿ
ತಾನೆ ಮೆಯ್ಗೂಡುತಿಹುವಭಿಮಾನಕಿಂದಧಿಕ-
ಹಾನಿಯಿಲ್ಲಂ ತಿಳಿದಿದಂ ಬಿಟ್ಟು ಲಿಂಗವೇ-
ತಾನೆಂಬ ಚಿದ್ಘನನೆ ಧನ್ಯನವಗೊರೆ ಸದಾಶಿವನಲ್ಲದಿನ್ನಾವನೋ ॥ ೨೬ ॥

ಅಂತು ಸಂಧಿ ೭ ಕ್ಕೆ ಪದಗಳು ೨೪೨



॥ ಶಂಭವೇ ನಮಃ ॥



# ಎಂಟನೆಯ ಸಂಧಿ ಪ್ರಾರಂಭ





ಸೂಚನೆ:-

ವೈರಾಗ್ಯಮಲ್ಲಣಾರ್ಯನ ಬೆಸನದಂತೀ ಕು-
ಮಾರಶಿವಯೋಗೀಂದ್ರನಖಿಲಾನುಮತಿವಡೆದು
ವೀರಶೈವಮಹಾಸಭಾಸ್ಥಾಪನಂ ಗೈದನೆಮ್ಮ ಮತವೇಳ್ಗೆಗಾಗಿ ॥

ತಿರುನೀಲಕಂಠನಿಗೆ ಕಳವಿನಾಕ್ಷೇಪಮಂ
ಪೊರಿಸಿದೈ ಮಾನಕಂಜರನ ಮಗಳೊಳ್ಮುಡಿಯ
ನೆರೆದ ಹಂದರದಲ್ಲಿ ಕೊಯ್ಸಿದೈ ಭಕ್ತಸತಿಯಂ ಬೇಡಿ ಪಡೆದು ಪಿಂದೆ
ಕರೆದೊಯ್ದೆ ನಿನ್ನೀ ಮಹಾಪರಾಧಕ್ಕೆ ಯೋಗಿ-
ವರರು ಸೈರಿಸದೆ ನಿಜಹೃದಯಕಾರಾಗೃಹದೊ-
ಳಿರಿಸಿದರು ಬಲುಹಿನಿಂ ನಿನ್ನನತಿಕುಟಿಲನೆಂದಿದು ತಕ್ಕುದೆಂಬೆನೆಭವಾ ॥ ೧ ॥

ಶಿವಧರ್ಮದಿಂ ನೀತಿಯಿಂ ಬಿಜ್ಜೆಯಿಂದ ಗೌ-
ರವದಿಂ ಮಹಾರಾಜಪದವಿಯಿಂ ಕೃಷಿಯಿಂದ
ವಿವಿಧ ಶಾಸ್ತ್ರಪ್ರವೀಣತೆಯಿಂದ ವಾಣಿಜ್ಯವಿಭವದಿಂ ಭಾಗ್ಯದಿಂದ
ಕವಿಗಳಿಂದೆಲ್ಲ ಕೈಗಾರಿಕೆಯ ಜಾಣ್ಮೆಯಿಂ-
ದವನಿಯೊಳಗೆಮ್ಮೀ ಜನಾಂಗವಾದರ್ಶವಾ-
ಗುವ ಯತ್ನಮಂ ಮಾಳ್ಪುದೆಮಗೆ ಕರ್ತವ್ಯವೆಂದೆಣಿಸುವಂ ಶಿವಯೋಗಿಯು ॥ ೨ ॥

ಆ ಸಮಯದೊಳ್ವಿರಾಟ್ಪುರದಿವನ ಮಠಕೊಂದು
ವಾಸರದೊಳೈತಂದನೀತನಂ ಕಾಣಲೆಂ-
ಬಾಶೆಯಿಂ ವೈರಾಗ್ಯಮಲ್ಲಣಾರ್ಯನೆನಿಪ್ಪ ವಿಖ್ಯಾತಪರಮಮೂರ್ತಿ
ದೇಶಾಟನಂಗೈವುತಂದೀ ನಿರಾಭಾರಿ-
ದೇಶಿಕೋತ್ತಮನೂರೊಳಿರಲಿಲ್ಲವಿರುಳಾಗೆ
ಬೇಸಾದ ಗರ್ದುಗೆಯ ಮಂಟಪದೊಳೊರಗಿದಂ ಧ್ಯಾನಪೂರ್ವಕವಾತನು ॥ ೩ ॥

ನೆರೆಹಳ್ಳಿಯೊಳಗಣಿಂದೀ ಯತಿಪನಂದೆ ನ-
ಟ್ಟಿರುಳೊಳೈತಂದು ಗರ್ದುಗೆಯ ಶುಭಮಂದಿರದೊ-
ಳೊರಗಿರ್ದ ಮಲ್ಲಣಾರ್ಯನನು ಕಂಡಿವರದಾರೆಂದಾಗ ನುಡಿಸಲೊಡನೆ
ಹರಹರ ಎನುತ್ತೇಳಲವನ ವೈರಾಗ್ಯಮುಂ-
ದರಮುಖಕ್ಕೊಪ್ಪಿ ನೀವಾರು ಭಿಕ್ಷುಕನೋರ್ವ-
ನಿರುವೆನೈ ನೀನಾರು ನಾನೋರ್ವನೀ ಮಠದವಂ ಸ್ವಾಮಿಯೇನು ನೀನು ॥ ೪ ॥

ಜನರು ಕರೆವರು ಸ್ವಾಮಿಯೆಂದು ನೀನಲ್ಲವೋ
ಮನವರಿಯೆ ಸ್ವಾಮಿತ್ವವೆನ್ನೊಳಿಲ್ಲಂ ನಿರಂ-
ಜನಮಹಾಸ್ವಾಮಿತ್ವವೆಂತಹದು ಯತ್ನದಿಂ ಶಿವಮಠವನುದ್ಧರಿಪುದು
ನಿನಗೇಕೆ ಬಾರದದು ಜನಧನಸಹಾಯವೆನ-
ಗನಿತಿಲ್ಲವಿಂತವರು ಪ್ರಶ್ನೋತ್ತರವನಾಡ-
ಲನುತಾಪದಿಂ ಮಲ್ಲಣಾರ್ಯನಕಟಕಟೆಂದು ಕಂಬನಿಗಳುದುರೆ ನೋಡಿ ॥ ೫ ॥

ತೊಗುಮುಂಚದೊಳಿಂತು ಕುಳಿತು ಬಲುಸೊಗಸಿನಿಂ
ತೂಗಾಡುತಿರುವ ನೀವೆಂತು ಮತಸೇವೆಯಂ
ಸಾಗಿಸಿರಿ ನಿಮ್ಮದಿದು ಧರ್ಮರಕ್ಷಣಗುಣವೆ ಹೇಳಬೇಕಾರು ನಿಮಗೆ
ಯೋಗೀಶ್ವರರು ಪಿಂದೆ ಶಿವಧರ್ಮದೇಳ್ಗೆಯನು
ಹೇಗೆ ಮಾಡಿದರೆಂಬುದಂ ತಿಳಿಯದಿಪ್ಪಿರಾ
ಭೋಗಿಭೂಷಣನ ಕೃಪೆಗೆರವಾದುದೇನೀ ಸಮಾಜವಿದನಾರರಿವರು ॥ ೬ ॥

ಕಾವಿಭಸಿತ ಶಿವಾಕ್ಷಮಾಲಾವಳಿಯ ಧರಿಸಿ
ಕೋವಣನಾಂತು ದಂಡವ ಪಿಡಿದು ಮಸ್ತಕದ
ಪಾವುಡವ ಬಲಿಸು ಪಾವುಗೆಗಳಂ ಮೆಟ್ಟಿಕೊಂಡೆಸೆವ ಗುರುಚರವರ್ಯರು
ತೀವಿರುವರಲ್ಲಲ್ಲಿ ಮಾಳ್ಪುದೇನೀ ವೀರ-
ಶೈವಮತವೆಂಬೊಂದು ತೀರಸಣ್ಣ ಸಮಾಜ-
ವಾವಗಂ ಬಾಳ್ಪುದವನತಿಯಿಂದಿದಂ ನೋಡಲಾರೆನೀ ಮರ್ದಿಶಿಯನು ॥ ೭ ॥

ಶಿವಮತವನುದ್ಧರಿಸಲೆಂದು ಪಟ್ಟವಕಟ್ಟಿ
ಶಿವಧರ್ಮಪೀಠದೊಳು ಕುಳ್ಳಿರಿಸಿ ದಿನದಿನಂ
ಶಿವಭಕ್ತರೈತಂದು ಶಿವಶಿವ ಎನುತ್ತಡ್ಡಬಿದ್ದು ಕಾಣಿಕೆಯನಿತ್ತು
ಸವಿಸವಿರವರದರೆಚ್ಚರಿಲ್ಲದಾ ದುರ್ವಿಷಯ-
ಸಿನಹದೊಳು ಮೈಮರೆದು ತಿಂದುಂಡು ದಂಭದಿಂ-
ದವನಿಯೊಳು ಕುಟಿಲಕೆಡೆನಿಸಿಕೊಂಡುಪಜೀವಿಸುತ್ತಿಪರೇಗೈವುದು ॥ ೮ ॥

ಕಾವಿಯಂ ಧರಿಸಿದವರಂ ಕಂಡು ಕೈಮುಗಿವ
ಭಾವಿಕತನಂ ನಡೆದುಬಂದಿಹುದು ಮೊದಲಿನೀ-
ಕಾವಿಯೀಗಳ್ಮೋಸದಿಂ ಧರ್ಮಮಂ ರಸಾತಳಕೆ ತುಳಿದಿಳಿಸಿರ್ಪುದು
ಕಾವಿಯೀ ಧರ್ಮಮಂ ಕಾಯ್ವುದು ಮೋಸಪ ಗುರುಚ-
ರಾವಳಿಯನೇಕೊತ್ತಿ ತುಳಿದಿಕ್ಕಲಾಗದೋ
ದೇವರಿಗಿದರರಿವಿಲ್ಲವೇ ಶಿವಶಿವಾ ಕೋಪತಾಪಂಗಳೊತ್ತರಿಸವು ॥ ೯ ॥

ಧರಣಿತಾಯೊಡಲುಗಾಣ್ಬನಿತು ಕಾವಿಯ ತೆಗೆದು
ಧರಿಸುತ್ತ ಬಂದಿಹರು ತಮ್ಮ ವಸನಂಗಳಿಗೆ
ಗುರುವಿರಕ್ತರ್ಕಳವರಿಂದಿನಿಸು ಮತಸುಧಾರಣೆಯಾಗದಿರ್ಪುದಕಟ
ಅರಿಯಲಿವರಾಂತಕಾವಿಯೊಳು ಬಲವಿಲ್ಲವೋ
ಗುರುವಿರಕ್ತತ್ವಗಳ ತಪವು ಹಾಳಾಗಿಹುದೋ
ಬರಡಾದುದೋ ಶಿವನ ಧರ್ಮವಿದು ನಮ್ಮದೂರಟವಿರೋದನವಾದುದು ॥ ೧೦ ॥

ಆಲಿಸೈ ಪಿಂದೆ ನೃಪಶಾಸನವಿದಗ್ಧತೆಯ-
ತಾಳಿ ನ್ಯಾಯಾಸನದೆ ಗುಡುಗಾಡುತೆಲ್ಲರೊಳು
ಮೇಲೆನಿಸಿದಾ ವಿವೇಕಾನಂದನೆಂಬವಂ ಜಗವನುದ್ಧರಿಸಲೆಂದು
ಶೀಲತನದಿಂ ತನ್ನ ನಾಲ್ದೋಳಿನಂಗಿಯನು
ಬೀಳುಗಳೆದೊಗೆದು ಧರಿಸಿದಕಾವಿಯೆಬ್ಬಿಸಿದು-
ದೀ ಲೋಕವೆಲ್ಲಮಂ ನಮ್ಮವರ ಕಾವಿಗೇಂ ಬಂದುದೋ ಪಿಡುಗು ದೇವ ॥ ೧೧ ॥

ಕಾವಿಯವರಭಿಮಾನಮಂ ಪಿಡಿದು ಧರ್ಮಮಂ-
ಕಾವರಂ ಕಾಣಬೇಕೆಂದು ತಿರುಗುತ್ತಿಹೆನು
ಕಾವನೊಕ್ಕಲುಗಳೇ ಕಾಣ್ಬರೆನ್ನೀ ದುಷ್ಟದೃಷ್ಟಿಗಿನ್ನೇವೇಳ್ವುದು
ಸಾವನಿತು ಕಷ್ಟವಾಗಿಹುದು ನೀನಾದಡುಂ
ಸೇವೆಯಿಂ ಮತವನುದ್ಧರಿಸಲಾಗದೆ ನಿನ್ನ
ಜೀವನಕಿದಲ್ಲದಿನ್ನಾವ ಕರ್ತವ್ಯವುಂಟೋ ತಿಳಿದು ನೋಡು ಯೋಗಿ ॥ ೧೨ ॥

ಅರರೆ ಶಿಷ್ಯೋದ್ಧರಪರಾಯಣತೆಗಾಚಾರ್ಯ-
ವಿರತರೆಂದೆರಗುತಿಹ ಸ್ವಾರ್ಥಿಗಳ ಹಣೆಯಲ್ಲಿ-
ಮುರಿಯದಿಹನೇ ಮುಳ್ಳನಂತಕಂ ರೇಣುಕಾಲ್ಲಮರ ಬೋಧಾಚರಣೆಯು
ಸರಿದಡಂಗಿಹುದು ನೀನಿವಕೆ ಪೇಳೇನೆಂಬೆ
ಹರಮತದ ಸೇವೆಯಂ ಕೈಕೊಂಡು ಪಡೆದಿರುವ
ಚರಪಟ್ಟಮುಂಬಿಡದೆ ಸಾರ್ಥಕಂಗೊಳಿಸು ದಿಕ್ಕಿಲ್ಲವೀ ಶಿವಸಮಯಕೆ ॥ ೧೩ ॥

ಮಠಸುಧಾರಣೆಗಾಗಿ ಜನಧನಗಳಿಲ್ಲವೇ?
ಯತಿಪತಿಯೆ ನಿಮ್ಮ ಮಠಕಾಗಿ ಜನಧನಮುಂಟೆ
ಮತಿಯಿಲ್ಲಪವರಂತೆ ಬರಿಸೆ ಮಿಡುಕುತ ಕುಳಿತುಕೊಳ್ಳುವದಿದಾವ ಘನತೆ
ಹಿತಭಕ್ತರುಂಟು ಮುಂದಾಳು ನೀನಾಗು ಸ-
ನ್ಮತಮಹಾಸಭೆಗಳೆ ಪ್ರಯತ್ನಮಂ ಮಾಡುವಾ-
ಪತಿಯ ಕೆಲಸವಿದೇಸು ಲಕ್ಷ ಹಣಗಳು ಬೇಕು ಪೇಳು ನಾನಿರುವೆನೆಂದು ॥ ೧೪ ॥

ಗುರುವಿರಕ್ತರ ಸುಧಾರಣೆಗಾಗಿ ಸಾಲೆಯೊಂ-
ದಿರಬೇಕು ಶಾಸ್ತ್ರ ಶಿವಯೋಗಸಾಧನವಲ್ಲಿ
ಜರುಗಬೇಕಂತಹ ಗುರೂತ್ತಮವಿರಕ್ತರೀ ಮಠವನುದ್ಧರಿಸಬೇಕು
ಸಿರಿದು ಸಾಹಸಿಗಳಾದೆಮ್ಮ ಜನರಿಂದ ಭಾ-
ಸುರವಿಶ್ವವಿದ್ಯಾಲಯಂ ನೆಲಸದಿರದು ಗುರು-
ಚರರಿಗಸದಳವಲ್ಲವಿದು ಬೇರೆ ವಿಷಯದೊಳ್ತೊಡಗಿರುವದವರ ಮನವು ॥ ೧೫ ॥

ಬಸವಮುಖ್ಯಪ್ರಮಥರಿಷ್ಟಲಿಂಗವನು ಪೂ-
ಜಿಸುತೆ ಮೇಲಕ್ಕೇರಿ ಶಿವಸಭೆಗೆ ಪೋದರೇ
ವಸುಧೆಯೊಳು ಕಾಯಕವ ಮಾಡಿ ಜಂಗಮಗಣವ ತಣಿಸಿ ವಚನವನು ಪೇಳ್ದು
ಪೊಸವಿಚಾರಕ್ರಾಂತಿಯ ಜನಗಳೊಳು ಬೆಳಸಿ
ಮಸುಳಿಸಿದ ಶಿವಧರ್ಮವಿದನುಜ್ಜ್ವ ವೀರಶೈ-
ವಸಮಾಜದೇಳ್ಗೆಯಂ ಮಾಡಲಿಲ್ಲವೆ ಚರಕುಲೋತ್ತಂಸ ನಿನಗಿದರಿದೆ ? ॥ ೧೬ ॥

ನೆರವಾಗದವರಾರು ಕಾರ್ಯಕಭಿಮುಖನಾಗಿ
ಹುರಿದುಂಬಿ ನಿಲ್ಲಿದೇ ಶಿವಸೇವೆಯಿದೆ ವಿರ-
ಕ್ತರ ಕಾರ್ಯವಿದೆ ಲಿಂಗಪೂಜೆಯಿದಕಾಗಿ ಕೆಲಬರ್ತಾಪಸರ್ತ್ತವ್ಯಯ
ಪರಮ ಜನ್ಮಂಗಳಂ ತೆತ್ತಿಹರು ನಿನಗೆ ನಾ-
ಹೊರತಿಲ್ಲ ನಿನ್ನೊಡನೆ ದುಡಿವೆ ನಾನೆಂದೊರೆದು
ವರವಚನಮಂ ಕೊಂಡು ಕಾರ್ಯದಾಲೋಚನೆಯ ಮಾಡಿ ನಿಶ್ಚಯಿಸಿ ಬಳಿಕ ॥ ೧೭ ॥

10*

ಹಾಲುಸಕ್ಕರೆಗೂಡಿದಂತುಭಯ ಮತಗಳಂ
ಮೇಳಯಿಸಿ ಪೋಗಿ ಬೊಮ್ಮನಹಳ್ಳಿಯೊಳು ಪದೆದು
ಪೇಳಿಸಿದನಾ ಮಲ್ಲಣಾರ್ಯನಿಂದಂ ಪುರಾಣವನೀ ಕುಮಾರೇಶನು
ಕೇಳಿ ಸರ್ವರಭೂತಪೂರ್ವಮಿದು ತಾನೆಂದು
ಲೋಲಮನದಿಂ ಗಣಾರಾಧನೆಯನೆಸಗಿ ಸ-
ಲ್ಲೀಲೆಯಿಂ ಮುಗಿಸಿದರು ನಾಡೊಳ್ಳು ಸಿದ್ಧಮೆನೆ ಧರ್ಮಜಾಗ್ರತೆಯಾಗಲು ॥ ೧೮ ॥

ಅಲ್ಲಿಂದ ಪೊರಮಟ್ಟು ಪೋದಪೋದೆಡೆಗಳೊಳು
ಬಲ್ಲವರನಭಿಮಾನಿಗಳನೇಳ್ಗೆವೆತ್ತವರ-
ನೆಲ್ಲರಂ ಪೇಳ್ದು ಜಾಗ್ರತೆಗೊಳಿಸುತಾ ಮಲ್ಲಣಾರ್ಯನಾಲೋಚನೆಯೊಳು
ಸಲ್ಲೀಲೆಯಿಂದ ಬಾಗಲಕೋಟೆಗೈತಂದು
ಬಲ್ಲಿದರಿಗೊರೆದಲ್ಲಿ ಮೂದಿನಂ ಸಭೆಗರೆದು
'ಸಲ್ಲಲಿತ ಭಾಷಣವ ಮಾಡಲಾದಂ ಕೇಳಲೆಲ್ಲ ಪುರುಷಸ್ತ್ರೀಯರು ॥ ೧೯ ॥

ಕೂಡಿದರು ನಮ್ಮೀ ಸಮಾಜಸೇವೆಯನರಿದು
ಮಾಡದಿಪ್ಪವರ ಜನ್ಮಕ್ಕೆ ಧಿಕ್ಕಾರವೆಂ-
ದಾಡಿದರು ತಲೆಗೂಡಿ ನೋಡಿ ಪಾಡಿದರೆಲ್ಲ ವೀರಶೈವಮತೀಯರು
ನಾಡೊಳತಿವಿಖ್ಯಾತನಾದೀ ವಿರಾಗಿತಾ-
ಬೇಡಿದರೆ ಸಾಕಾ ಸಹಾಯಮಂ ಮನವೊಪ್ಪಿ
ಜೋಡಿಸುವೆವೆಂದು ನಲಿದಾಡಿದರು ಮತವನುದ್ಧರಿಪನಂ ಬಂದನೆಂದು ॥ ೨೦ ॥

ಸಾಗಿದುದೆರಳ್ದಿನಂ ಶಾಸ್ತ್ರಲೌಕಿಕರೀತಿ-
ಯಾಗಿ ಮೂರನೆಯ ದಿನದೊಳು ಭಾಷಣದ ಮಧ್ಯ-
ಭಾಗದೊಳು ಮಲ್ಲಣಾರ್ಯನ ಪ್ರಕೃತಿ ತಡೆಯದೆವೆಯೊಡೆದು ಕೆಮ್ಮುದಿಸಿ ನಿಲವೆ
ಏಗೈವುದಾಸನದೊಳುಕ್ಕಿದರುಣಾಂಬುಬಲು
ಕೂಗಿ ಪೇಳಿದುದರಿಂದಾದ ಪರಿಣಾಮವೆಂ-
ದಾಗ ಮಿಡುಕಿದರೆಲ್ಲ ಸಭಿಕರನಿತಕೆ ನಿಂದುದಾ ಸಭಾಕಾರ್ಯವದಕೆ ॥ ೨೧ ॥

ಒಂದೆ ಮನೆಯೊಳು ಭೋಜನಮದಿಲ್ಲ ನಲ್ಲಣಿಸ
ತಂದಿತ್ತೊಡದನುಂಬುದಂತಿಲ್ಲ ನಿಜಮನಕೆ-
ಬಂದುದಂ ಬೇಡಿ ಪಡೆವವನಲ್ಲ ಹಾಲಿಲ್ಲ ತುಪ್ಪ ಸಕ್ಕರೆಗಳಿಲ್ಲ
ಕುಂದಪ್ಪುದೇಮನೆಗಳಿಗೆ ಪ್ರತಿದಿನಂ ಪೋಗಿ
ಬಂದನಿತು ಭಿಕ್ಷಾನ್ನಮಂ ಲಿಂಗಕಿತ್ತುಣುವ
ಮುಂದಾತುಲವ್ರತವನಾಚರಿಸುತಿರ್ದನೆಲ್ಲಾಗಳಿವರಲ್ಲಿ ಮತ್ತೆ ॥ ೨೨ ॥

ಗುರುತಿಲ್ಲದವರ ಮನೆಗಳಿಗಲ್ಲದೇ ತನ್ನ-
ಗುರುತುಳ್ಳವರ ಮನೆಗೆ ಪೋಗುವದು ಕಡಿಮೆ ತಾ-
ನೆರಸಿಕೊಳಲಿಲ್ಲೊಂದು ರೊಟ್ಟಿಗಿಂ ಪೆರ್ಚಾದೊಡೊಳಗಿರ್ದೊಡೊಪ್ಪಿದಪನು
ತೊರೆಯದೈವನೆಗಳೊಳಗೊಂದೆರಡೆ ಮನೆಯಲ್ಲಿ
ದೊರೆವೊಡನಿತನೆ ಮುಗಿವುತಿರ್ದನಾ ಪಂಚಮಂ-
ದಿರಗಳುಂ ಬರಡಾದಡಾಗ ಮತ್ತಂ ಮುಂದೆ ಪೋಗುವಂ ಮೂರು ಮನೆಗೆ ॥ ೨೩ ॥

ಎನಿತುಮಾ ಮೂಮನೆಗಳೊಳು ದೊರೆಯದಿರ್ದೊಡಾ
ದಿನದೊಳುಪವಾಸವೇ ಪರಿಣಮಿಸುತಿರ್ದನೀ-
ತನಗಿಂತೆರಳ್ದಿನಂ ಮೂದಿನಂ ನಿರಶನವ್ರತಮೊದಗುತಿರ್ಪುದದಕೆ
ಮನದೊಳೆಳ್ಳನಿತಳುಕಲಿಲ್ಲ ಬೇರಾವ ಯೋ-
ಚನೆಗೈಯಲಿಲ್ಲ ಮತಧರ್ಮನೀತಿಯನೆಮ್ಮ-
ಜನಕೆ ಬೋಧಿಲುಪೇಕ್ಷಿಸಲಿಲ್ಲ ನೋಡಲಿವನಾತ್ಮಸಂಯಮಮನಮೆನಿತೋ ॥ ೨೪ ॥

ಶಿವಯೋಗವನು ವೀರಶೈವಜನರೊಳು ಪಸರಿ-
ಸುವ ಯತ್ನದಿಂ ಘನಮತಾರ್ಯರಂತೆಲ್ಲೆಡೆಯೊ-
ಳವಿರತಂ ವೈರಾಗ್ಯದೊಡವೆರೆದು ಸಂಚರಿಸುತತ್ಯಂತ ಪರಿತಾಪದೆ
ಸವಿದು ಶಿವಯೋಗಮಂ ಬೋಧಿಸುವದಕೆ ಬೇರೆ
ಸುವಿಶಾಲ ಶಿಕ್ಷಣಾಲಯವೊಂದು ಬೇಕೆಂದು
ಹವಣಿಸುತ್ತಿರ್ದನೀತಂಗದೆತ್ತಣ ಸುಖಂ ಕಷ್ಟಕೆದೆಗೊಟ್ಟಿರ್ದನು ॥ ೨೫ ॥

ಪ್ರತಿದಿವಸಮಿಂತು ಪಗಲೊಪ್ಪತ್ತರಕೆಯಸು-
ಣ್ಣುತ ನಗರಕ್ಕೈದಿರುಳು ಪಳ್ಳಿಗೊಂದಿರುಳಿನಂ-
ತತಿಶಯಮಿದೆನೆ ಚರಿಸುತಿರುವೀ ವಿರಾಗಿ ನಾಲ್ಕೈದುಸಾವಿರ ಜನಗಳ
ಶ್ರುತಿಗೆ ಕೇಳಿಸುವಂತೆ ಕೂಗಿ ಹಾನೋರ್ವನೇ
ಮಿತಿಗೆಟ್ಟು ಭಾಷಣವ ಮಾಡಿದುದರಿಂದವಂ
ಮೃತನಾದನೆನ್ನಮತವೆನ್ನಮತವೆನ್ನುತೀ ಮತವ ಮನದೊಳು ನೆನೆವುತ || ೨೬ ||

ತನುವಿಯೋಗದೊಳೀನ ನೆನೆವನಂತಹನಾಗಿ
ತನಗಲ್ಲಿ ಸಿಜದೆಚ್ಚರಿರಬೇಕೆನುತ್ತ ನಿಜ-
ಗುಣಮಹಾಶಿವಯೋಗಿ ಪರಮಾನುಭವ ಬೋಧೆಯೊಳು ಪೇಳಿದಂತೆ ಕೊನೆಗೆ
ನಿಸುತಶಿವಮತವ ಕನವರಿಸುತ ಭವನೊಳಡಗಿ-
ದನುಪಮವಿರಾಗಿಯಾದೀ ಮಲ್ಲಣಾರ್ಯನಿಳಿ-
ಯನೆ ಸಮಾಜಸುಧಾರಣಾರ್ಥಮೀ ಧರೆಗೆ ಮುಂದೆಂದು ನುತಿಸಿದರೆಲ್ಲರು || ೨೭ ||

ಎಮ್ಮ ಬಲಗೈ ಮುರಿದುದೆಮ್ಮ ಸಂಪದವಳಿದು
ದೆಮ್ಮ ಮತದೇಳ್ಗೆಗಾತಂಕಮಾದುದು ಪ್ರಭುವೆ
ಎಮ್ಮಿಂದ ಸಾಧ್ಯವೇ ಮತಸೇವೆ ಶಿವಶಿವಾ ದುರ್ಭಾಗ್ಯರಾದೆವಿಂದು
ಹೆಮ್ಮೆಗೆಟ್ಟಿತು ಸಮಾಜಂ ಮುಂದದಾವನಂ
ನೆಮ್ಮುವದೆನುತ್ತೀ ಕುಮಾರೇಶ್ವರಂ ಮನದೊ-
ಳುಮ್ಮಳಂಗೊಂಡನೀ ಮತಭಾಗಧೇಯನಗಲಿದುದರಿಂಪೇಳ್ವುದು || ೨೮ ||

ಪಶುಪತೀಚ್ಛೆಗುಪಾಯಮಿಲ್ಲವನು ಮತಿಗೊಟ್ಟು
ಸ್ವಸಮಾಜಸೇವೆಯಂ ಮಾಡದಡಗಿದನು ತ-
ನ್ನಸಮಲಿಂಗದೊಳಕ್ಕೆ ತನ್ಮಲ್ಲಣಾರ್ಯನಾಲೋಚನೆಯ ಮೇರೆಗಿನ್ನು
ಒಸೆದು ಮತಕಾರ್ಯಮಂ ಮಾಡದಿರಬಾರದೆಂ-
ದಸವಸದೊಳಲ್ಲಲ್ಲಿ ಪ್ರಮುಖರಂ ನೆರೆ ವಿಚಾ-
ರಿಸಿ ಮಹಾಸಭೆಯನಾಗಿಸಿ ಬಳಿಕ ಶಿವಯೋಗಮಂದಿರವ ಮಾಳ್ಪುದೆಂದು. || ೨೯ ||

ಧಾರವಾಡದೊಳು ಸಂಭ್ರಮವೆರಸಿ ಮೊದಲನೆಯ
ವೀರಶೈವಮಹಾಸಭೆಯನಾ ಜಗದ್ಗುರುತೋ-
ಂಟದಾರಶಿರಸಂಗಿಯಧಿಪತಿ ಲಿಂಗರಾಜನಧ್ಯಕ್ಷತೆಯೊಳೆಸಗಿ ನೆರೆವ
ಧೀರರಿಂದುತ್ತಮೋಪನ್ಯಾಸಪೂರ್ವಕಂ
ಸಾರಮತವಿಷಯಮಂ ನಿರ್ಣಯಿಸಿ ಮುಂದಿನೀ-
ಗೌರವ ಮಹಾಸಭೆಗೆ ಧನರಾಶಿಯಂ ಕೂಡಿಸಿವನೀ ಮಹಾಸಭೆಯೊಳು || ೩೦ ||

ನೆರೆ ಮಹಾರಾಷ್ಟ್ರ ಕರ್ನಾಟಕಾಂಧ್ರ ಪ್ರಾಂತ-
ದುರುವೀರಶೈವ ಪದವೀಧರರು ಪಂಡಿತರು
ಗುರುಚರವರೇಣ್ಯರಖಿಲಪ್ರಸಿದ್ಧರ್ಮತಸುಧಾರಣಾಶಾಚತುರರು
ಪಿರಿಯರ್ಧನಾಢ್ಯಸಂಸ್ಥಾನಿಕರು ಪರಿತಂದು
ಪರಿಶೋಭಿಸಿದರಲ್ಲಿ ಸ್ವಸಮಾಜದೇಳ್ಗೆಗಾ-
ತುರಿಸಿದರ್ತಡೆಯದೊಮ್ಮನಸಿನಿಂದುತ್ಸಾಹಭಾವವಚನಂಗಳಿಂದ || ೩೧ ||

ಎಮ್ಮ ಮತದೊಳಗಿನಿತು ಜನಸಂಪದಂ ಮತ್ತ-
ಮೆಮ್ಮೀ ಸಮಾಜದೊಳಗಿನಿತು ವಿದ್ಯಾಘನತೆ-
ಯೆಮ್ಮೊಳಿನಿತೈಶ್ವರ್ಯಪದವಿಗೌರವಗಳುಂಟೆಂಬುದಂ ನೋಡಿ ತಿಳಿದು
ಹೆಮ್ಮೆಗೊಳದವರನಾರಾರನುಂ ಕಾಣಲಿ-
ಲ್ಲಿಮ್ಮೆಳವಡಂಗಿಮುದು ಮರೆಯೊಳಿಹ ನಿಕ್ಷೇಪ-
ವೆಮ್ಮ ಕಣ್ಣೆದುರಿನೊಳು ನಿಂದಂತೆ ಮನಸಿಗಾನಂದವಾಯ್ತೆಲ್ಲ ಜನಕೆ || ೩೨ ||

ಪರದೇಶಕಾಂಗ್ಲವಿದ್ಯಾಶಿಕ್ಷಣಾರ್ಥವೇ
ತೆರಳಲಪ್ಪಣೆವಡೆವುದೆಂದೀ ಮಹಾಸಭೆಗೆ
ಗರಡಿರುದ್ರಪ್ಪನೆಂಬೋರ್ವ ವಿದ್ಯಾರ್ಥಿ ತಾನೈತಂದು ಬಿನ್ನೈಸಲು
ಶರಧಿಯಾನ ನಿಷೇಧವಿರ್ದ್ದಡುಂ ಲಕ್ಷಿಸದೆ
ಪರಿಪರಿಯ ಸಕಲಕಲೆಗಳನು ಕಲಿವುದಕಾಗಿ
ಪರದೇಶಕೆಮ್ಮವರು ಪೋಪುದೇ ಯೋಗ್ಯಮೆಂದೆಲ್ಲರನುಮತಿಯಿಂದಲಿ || ೩೩ ||

ಚರವರಂ ನಿರ್ಣಯಿಸಿ ಪೋಗಲಪ್ಪಣೆಗೊಡಿಸಿ
ಮರುಳಿ ಬಂದಬಳಿಕ್ಕೆ ಧರ್ಮಪದ್ಧತಿಯಂತೆ
ಪರಿಶುದ್ಧನಾಗಬೇಕೆಂಬೊಂದು ವಚನಮಂ ಕೊಂಡು ಕಳುಹಿದನವನನು
ಹರುಷದಿಂದಲ್ಲಿಗಾತಂ ಪೋಗಿ ಕಲಿತು ಬಂ-
ದರಿಸವಿಧಿಯಿಂದ ಪರಿಶುದ್ಧನಾದಂ ಮಹಾ-
ತ್ಮರಿಗತಿಸಮಾಧಾನವಾದುದವಗೀಸರಂಮಾಡಿದಂ ಕಲ್ಯಾಣವ || ೩೪ ||

ಮತಸುಧಾರಣೆಗಾಗಿ ಧರ್ಮನಿರ್ಬಂಧದೊಳು
ಮತಿವಂತರೊಪ್ಪುವುಚಿತೋಪಾಯಮಂ ಪುಡುಕಿ
ಸುತಧರ್ಮಮಂ ನಡಿಸುತಿರ್ಪನಲ್ಲದೆ ಕಾಕದೃಷ್ಟಿಯಿಂ ಛಲವಪಿಡಿದು
ಮತಹಿತದ ಕಾರ್ಯಮಂ ಮಾಡದಿರಲಿಲ್ಲ ಸ-
ಮ್ಮತಮಾದ ಪರಮಧರ್ಮವನುಪೇಕ್ಷಲಿಲ್ಲ
ಯತಿಗಳ್ಗುರೂತ್ತಮರು ಲೌಕಿಕರ್ಮೆಚ್ಚುವಂತಿರ್ದನೀ ಚರವರ್ಯನು || ೩೫ ||

ಎಮ್ಮ ಕೊರತೆಯನೆ ಪರಿಹರಿಸಿಕೊಳಲಾರದಿಹೆ-
ವೆಮ್ಮೀ ಸಮಾಜವೇಳಿಗೆಯ ಹೊಣೆಯಂ ಪೊತ್ತು
ಸಮ್ಮತಂ ಮಿಗೆ ದುಡಿವಮಹನೀಯಗಾಭಾರಿಯಾದೆವೆಂದೀ ಸಭೆಯೊಳು
ನೆಮ್ಮಿ ಪೊಗಳ್ದರುದಾರಚರಿತರಿಗಿದೇಂ ಪೊಸತು
ಹೆಮ್ಮೆಯಿಂ ಸ್ವಸಮಾಜಸೇವೆಯಂ ಮಾಳ್ಪುದೇ
ತಮ್ಮ ಕರ್ತವ್ಯವಲ್ಲವೆ ನಿರಂತಂ ಸ್ವಾರ್ಥಕಿಂ ಬಾಗದಿಹ ಮಹಿಮರ || ೩೬ ||

ಈ ಮಹಾಸಭೆಯಿಂದಿಗುಂ ನಿಲದೆ ಸಾಗಿಹುದು
ಸ್ವಾಮಿಯೀತಂ ಮೊದಲಿನಿಂದೇಳು ಸಭೆಗಳಿಗೆ
ಪ್ರೇಮದಿಂ ಪೂರಯಿಸಿದನು ವೆಚ್ಚದರ್ಥಮಂ ಭಿಕ್ಷೆಯಿಂದಿತ್ತೀಚೆಗೆ
ಸೋಮಧರಭಕ್ತರೊಳು ಕೆಲಬರೀಗಿನ ಪ್ರಮುಖ-
ರೀ ಮಹಿತಧರ್ಮವಿಷಯವನೀ ಸಭೆಯೊಳುಳಿದ-
ರೀಮಿಷದಿನೀ ಕುಮಾರೇಶ್ವರಂ ಧರ್ಮಪ್ರಸಾರಾಭಿಲಾಷೆಯಿಂವ || ೩೭ ||

ಆ ಮಹಾಸಭೆಗಾಗಿ ಮಡಿವುದಂ ಬಿಟ್ಟುಸು-
ಪ್ರೇಮದಿಂ ಬೇರೆಥರ್‍ಮೋತ್ತೇಜಕಾಖ್ಯಸಂ-
ಸ್ಥಾಮಂಡಲವನು ಒಂಕಾಪುರದೊಳಾಗಿಸಿದನೀ ಯೋಗಿ ಹುಬ್ಬಳ್ಳಿಯ
ಶ್ರೀಮಜ್ಜಗದ್ಗುರುವರೇಣ್ಯ ಗಂಗಾಧರ-
ಸ್ವಾಮಿಯಧ್ಯಕ್ಷತೆಯ ಕೆಳಗೆ ಮೊದಲಾಬಳಿಕ
ನೇಮವೆನೆ ಶಿವಯೋಗಮಂದಿರದ ಜಾತ್ರೆಯೊಳು ಕೊನೆಗೆ ನಿಶ್ಚಯಗೈದನು ॥ ೩೮ ॥

ಪ್ರತಿವರ್‍ಷಮುಂ ನಡೆಪ್ಪುತಿಪುದಿನ್ನೆವರಮು-
ಪ್ರತಿಮಸಭೆಯದರಲ್ಲಿ ವಿಖ್ಯಾತಪಂಡಿತ-
ಪ್ರತತಿ ಧಾರ್ಮಿಕ ಮಹಾವಿಷಯಮಂ ಪ್ರತಿಪಾದಿಸುವದಖಿಲರೊಪ್ಪುವಂತೆ
ಅತುಲಲೌಕಿಕ ಪಾರಮಾರ್ಥಿಕ ಸುಬೋಧೆ ಸಂ-
ಗತಮಾಗಿ ಸಾಗಿದೊಡೆ ಮಾನವಂ ಭೂಮಿಯೊಳು
ಕೃತಕೃತ್ಯನಪ್ಪನೆಂದವಕಾಗಿ ವಿಶ್ವಪ್ರಯತ್ನಮಂ ನೆಗಳ್ವನೊಲಿದು ॥ ೩೯ ॥

ಪರತರಮಹಾಸಭಾಕಾರ್‍ಯಮೊಳು ಧಾರ್ಮಿಕಾ-
ಚರಣೆಯೊಳು ಶಿವಮತೋತ್ಕರ್ಷ ಪ್ರಸಂಗದೊಳು
ಹರಗುರುಚರೋತ್ಸವಾದಿಗಳೊಳುಂಟಾದ ವಿಘ್ನಂಗಳಂ ಕೊರತೆಗಳನು
ಪರಿಹರಿಸಲೆಡೆಗೊಟ್ಟವಿಶ್ರಾಂತಯತ್ನದೊಳು
ಜರಿವನರ್‍ಚನೆಯೆಚ್ಚರಿಲ್ಲದೆದುರಿಸಿ ಮಹಾ-
ಚರವರಂ ಮಾನಧನಭಯಗಳಂ ತೊರೆದಾ ಭಗೀರಥಮಹೀಶನಂತೆ ॥ ೪೦ ॥

**ಅಂತು ಸಂಧಿ ೮ ಕ್ಕೆ ಪದಗಳು ೩೮೨**

ಶ್ರೀ

...॥ ಶ್ರೀ ಬಸವೇಶ್ವರ ಪ್ರಸೀದ ॥...



# ಒಂಬತ್ತನೆಯ ಸಂಧಿ ಪ್ರಾರಂಭ



**ಸೂಚನೆ:-**

ಮರುಳವೇದಾಂತಿಗಳ ದುರ್ವಿಲಾಸವ ತವಿಸಿ
ಪಿರಿಯಭೂತವನನುಷ್ಠಾನದಿಂ ಕಾಲ್ದೆಗಿಸಿ
ಮೆರೆವ ಸಿದ್ಧಾರೂಢರಂ ನಿರಾಕರಿಸಿ ಹಿಂದುಳಿಸಿದಂ ಪ್ರೊಸಸಾಧುವ ॥

ಕನ್ನಡಿಯೊಳಗೆ ತೋರ್ಪ ಪಡಿನೆಳಲಿನಂತಿರ್ಪ
ನಿನ್ನೊಳವಿನಾಭಾವ ಸಂಬಂಧದಿಂದಿರುವ
ಸನ್ನುತಮಹಾಮಾಯೆ ಭವದೀಯಶಕ್ತಿರೂಪಂ ನೀಂ ಪ್ರಕಾಶಾತ್ಮನು
ನಿನ್ನ ಕಾಯಂ ಧಾತುಮಯಮಲ್ಲ ನೀನೆನಗ-
ಭಿನ್ನನಿರುವವನರಿಯಬಳಲಿ ಬಳಲುವೆನೊಲಿದು
ಚಿನ್ನಿಧಿಯೆ ಮರವೆಯಂ ಪರಿಹರಿಸ ಶರಣಸೇವೆಯನೆನಗೆ ಕರುಣಿಸಭವ ॥ ೧ ॥

ಕುಲಜಾತಿಗಳುಮಿಥ್ಯೆ ನಿಜವನರಿದವನೆಗುರು
ಫಲವಿಲ್ಲ ಪೊರಗಾಂತಶಿವಲಿಂಗಪೂಜೆಯಿಂ-
ದೊಳಗೆ ನೆಲಸಿರುವಾತ್ಮಲಿಂಗಮಂ ತಿಳಿದೊಡದೆ ಮುಕ್ತಿಯೆಂದುಪದೇಶಿಸಿ
ಕುಲಗೆಡಿಸಿ ಲಿಂಗಮಂ ಬಿಡಿಸಿ ಸರ್ವಸ್ವಮಂ-
ಸೆಳೆದಲ್ಪಮತಿಗಳಂ ಭಂಗಕೀಡಾಗಿಸುವ
ಬಲುದುರುಳವೇದಾಂತಿಗಳು ಪಸರಿಸಿರ್ದರಾ ಕಾಲದೊಳಗಲ್ಲಲ್ಲಿಗೆ ॥ ೨ ॥

ಕರಣಗಳು ವಿಷಯಂಗಳೊಳು ತಾವೆ ಸಂಚರಿಸು-
ತಿರುವವಾನವುಗಳಿಗೆ ಸಾಕ್ಷಿಯಲ್ಲದೆ ನಿರಂ-
ತರಮವರ ಸಂಬಂಧಮಿಲ್ಲಮೆನಗದರಿಂದ ನಿರ್ಲಿಪ್ತನುಂ ಮುಕ್ತನು
ಇರುವೆ ನಾನೆಂದೊರೆದು ಹಲವು ದುರ್ವಿಷಯದೊಳು-
ಜರೆದು ಮನಸಿಗೆ ಬಂದ ತೆರದೊಳಾಚರಿಸುತ್ತ
ನರರೊಳಿಹ ಪಾತಕದಭೀತಿಯಂ ತೊರಿಸುತಿರ್ದರ್ಕಪಟಸಾಧುಜನರು ॥ ೩ ॥

ಕುಡಿಯುಗಲಿತರು ಸಿಂದಿಸೆರೆಗಳಂ ಚಿಲುಮೆಯಂ
ಪಿಡಿದು ಗಾಂಜೆಯ ಸೇದಗಲಿತರನುಕೂಲವಿಹ
ಮಡದಿಮಕ್ಕಳನು ಬಿಡಗಲಿತರನ್ಯಾಬಲೆಯರೊಡನಾಡಗಲಿತರಯ್ಯೋ
ನುಡಿಯುಗಲಿತರು ಬೊಮ್ಮದೊಣವಾತುಗಳನು ಸಲೆ-
ತೊಡಗಲಿತರುದ್ಧಕಂಥೆಯನು ಕೋವಣವನುಂ
ನಡೆಗಲಿತರತಿದುರಾಚಾರದಿಂ ದುಸ್ಸಾಧುಸಂಗದಿಂ ಮೂರ್ಖಜನರು ॥ ೪ ॥

ವಾಮತಂತ್ರವನು ರೂಢಿಯೊಳು ತಂದರಾತ್ಮಕ್ಷ-
ನೇಮಮಂ ಕಾಲ್ದೆಗಿಸಿದರು ನಿಷಿದ್ಧಾಹಾರ-
ಸಿಮೆಯೊಳು ನಲಿದು ವಿಹರಿಸಲಾದರೇನೊಂದು ನಾಣ್ಚೆದರಿಕೆಗಳಿಲ್ಲವೆ
ಸೋಮಧರ ಸತ್ಯಶರಣರಿಗೆರಗದವರಿಂದ
ಪ್ರೇಮಮುಂ ಮಿಗೆ ನಮಿಸಿಕೊಳಲೆಳಸಲಾದರೀ-
ತಾಮಸಗುಣವ ಮರಸಿ ಧರಿಸಲಾದರು ಭೂತಿರುದ್ರಾಕ್ಷೆಯನು ದುರುಳರು ॥ ೫ ॥

ಅವರಿಂದ ಜಾತಿಸಂಕರವಾದುದಲ್ಲಲ್ಲಿ
ಯುವತಿಯರು ಸ್ವೇಚ್ಛಾಪ್ರವರ್ತನೆಯನಾಂತು ನಿಜ-
ಧವರನುಳಿದಂಜದಲೆ ಭ್ರೂಣಹತ್ಯಾದಿ ಪಾಪವನೆಸಗಿ ಶಿಕ್ಷೆಪಡೆದು
ಹವಣಿಸಲು ಬಾರದನಿತಳಲಿಗೊಳಗಾದರ-
ನ್ನವನು ಕಾಣದೆ ತಿರುಗಿದರು ದುಷ್ಟಸಾಧುಗಳ
ವಿವಿಧದುರ್ಬೋಧೆಯಿಂ ಪೊಲಮನೆಗಳಂ ಕಳೆದುಕೊಂಡು ಲೌಕಿಕರಿರುವುದೆ ॥ ೬ ॥

ಇದನರಿದು ಶ್ರೀ ಕುಮಾರೇಶ್ವರಂ ಶ್ರುತಿಶಾಸ್ತ್ರ-
ವಿದುಗಳಿಂದೊಡಗೂಡಿ ಪೋಗಿ ತಾನಲ್ಲಲ್ಲಿ
ಪಡೆದು ಸಭೆಗಳಿಂದು ತದ್ವೇದಾಂತಿಗಳನು ತಕ್ಕನುವಿಂದ ಬರಿಸಿಕೊಂಡು
ಮೊದಲವರಭಿಪ್ರಾಯಗಳನೆಲ್ಲಮಂ ತಿಳಿದು
ಹೃದಯದೊಳು ಮಲಮಲನೆಮರುಗಿ ಖೇದಂಗೊಂಡು
ಮೃದುಲೋಕ್ತಿಯಿಂದೆಲವೊ ಸಾಧುಗಳೆ ವೇದಾಂತಪಥವಲ್ಲಿದು ಕೇಳಿರಿ ॥ ೭ ॥

ಮುಕ್ತಿಗಡ್ಡಾಗುವವೆ ಜಾತ್ಯಾಶ್ರಮಾದಿಗಳು
ಮುಕ್ತಿಸಾಧನವಲ್ಲವೇ ಧರ್ಮಕರ್ಮಗಳು
ಮುಕ್ತಿಯಾಗುವುದೆ ಕುಲಜಾತಿಕರ್ಮಾದಿಗಳನುಳಿದೊಡೀ ಲೋಕದಲ್ಲಿ
ಮುಕ್ತನಲ್ಲವೆ ಕರ್ಮನಿರತಂ ವಸಿಷ್ಠಮುನಿ
ವ್ಯಕ್ತವೆನಿಸೆ ನಿಜಧರ್ಮಜಾತ್ಯಾಶ್ರಮದೊಳಿರ್ದು
ಮುಕ್ತಿಯಂ ಪಡೆಯಲಿಲ್ಲವೆ? ಶಂಕರಾಚಾರ್ಯರಧ್ಯಾತ್ಮವಿದ್ಯೆಯಿಂದ ॥ ೮ ॥

ಕಂಡವರ ಕೂಡಿಕೊಂಡುಂಡನೇಜನಕನಾ-
ಗಂಡುಗಲಿಪಾರ್ಥನಾಜಿಯೊಳು ಗೀತೆಯಕೇಳ್ದು
ಚಂಡಪ್ರತಾಪದಿಂ ಪಗೆಗಳಂ ಗೆಲ್ದು ಕರ್ತವ್ಯಮುಂ ಮುಗಿಸಿ ಕೊನೆಗೆ
ಪಂಡಿತರೊಡಂಬಡುವ ಮುಕ್ತಿವಡೆಯದಲೆ ಯಮ-
ಗೊಂಡದೊಳು ಮುಳುಗಿರಲು ಬಹುದಲ್ಲವೇ ಧರಾ-
ಮಂಡಲದೆ ನಿಮ್ಮ ಬಗೆ ಪೊಸತು ಶ್ರುತಿಶಾಸ್ತ್ರವದು ಶರಣುಹೊಡೆದಿಹುದೆ? ನಿಮಗೆ
॥ ೯ ॥

ನಡತೆಯುಂ ಬಿಟ್ಟು ಸ್ವೇಚ್ಛಾಪ್ರವರ್ತನೆಯಿಂದ
ಪೊಡವಿಯೊಳು ಹಂದಿನಾಯಿಗಳಂತೆ ತಿರುಗದಿರು
ಕಡುಸದಾಚಾರದಿಂ ದೇವರಂದದೆ ಪೂಜೆಗೊಳ್ಳಲ್ಕೆ ಸಾಧುವೆಂದು
ಬಿಡದೆ ಪೇಳುವುದಿಲ್ಲವೇ? ಪಂಚದಶಿಯೊಳ್ಳೆ
ನಡತೆಯದು ಬೇಡ ತನುಭೋಗವದು ಬೇಕೆಂಬ
ತುಡುಗತನವೆಂತು ನಿಮಗೊಪ್ಪುವುದು ಶಿವಶಿವಾ ಕಲಿಕಾಲದಾಟವಲ್ತೇ! ॥ ೧೦ ॥

ಧರ್ಮಂಚರ ಪ್ರಧರ್ಮಾನ್ನಾತಿದುಷ್ಕರಂ
ಧರ್ಮೇಣಪಾಪಮಪನುದತಿ ಧರ್ಮಾತ್ಸುಖಂ
ಧರ್ಮಮುಪಸರ್ಪಂತಿ ಸರ್ವೇಜನಾ ಎಂದು ವೇದಗಳು ಪೊಗಳುತಿರುವ
ಧರ್ಮವದು ನಿಮಗೆ ಮಾಡಿರುವದೇನದನು ನೀ-
ನ್ನಿರ್ಮೂಲಮಂ ಮಾಡಲೆಂದಿರುವಿರೇಕೆ ಶಿವ-
ಧರ್ಮರತಿಯಿಲ್ಲದವನುಳಿವಧಮಜನಕೆ ಧರ್ಮದ್ರೋಹವನುದಿಸದಿಹುದೆ? ॥ ೧೧ ॥

ಪರಮಧಾರಣಪೋಷಣಗಳರ್ಥಮುಳ್ಳ ಬಂ-
ಧುರಧರ್ಮವಿದುವೆ ಕರ್ತವ್ಯಮೆನಿಪುದು ನಿರಾ-
ಕರಣೀಯಮಲ್ಲ ಜ್ಞಾನಿಗಳಾದೊಡಂ ನಡಿಸಲೇಬೇಕು ಚಿತ್ತಮೊಪ್ಪಿ
ತೊರೆಯದಲೆ ನಿತ್ಯಕರ್ಮವನಾಚರಿಸಿದೊಡದು
ಮೊರೆವ ಬೆಳೆವುದರಿಂದ ಕರ್ಮಮುಂ ಗ್ರಾಹ್ಯಮಿ-
ತ್ತರವಾಗಿ ತೋರ್ಪುದಿದು ಕಾಮ್ಯ ನಿಷ್ಕಾಮ್ಯವೆಂದಖಿಳ ಶಾಸ್ತ್ರಂಗಳಲ್ಲಿ ॥ ೧೨ ॥

ಫಲಭೋಗಮಂ ಬಯಸಿ ಮಾಳ್ಪುದೇ ಕಾಮ್ಯವದು
ಬೆಳಸುವದು ಭವಪಾಶಮಂ ಪ್ರವೃತ್ತಿಯಿದೆಂದು
ತಿಳಿದ ಮೋಕ್ಷಾರ್ಥಿಗಳದಂ ಮಾಡದಿಹರು ಮಂದರು ಮಾಡುತಿಹರು ಬಿಡದೆ
ಫಲದಾಶೆಯಿಲ್ಲದಾಗಳ್ದೈವಾರ್ಪಣವೆನು-
ತ್ತುಳಿಯದೆಸಗುವುದೆ ನಿಷ್ಕಾಮ್ಯವದು ಚಿತ್ತಚಂ-
ಚಲತೆಯಂ ಕಳೆವುದಿದಕೆಂಬನ್ನಿವೃತ್ತಿಯೆಂದೊಲಿದೆಸಗುವರ್ಜಾಣರು ॥ ೧೩ ॥

ತೊರೆಯದಾಚರಿಸುತಿರಬೇಕು ನೂರಬ್ದಗಳ-
ಪರಿಯಂತಮೀ ಧರ್ಮಕರ್ಮಗಳನೆಂಮುಲಿವು-
ತಿರುವದೀಶಾವಾಸ್ಯಮೆಂಬುಪನಿಷತ್ತದಂ ನೋಡಿಲ್ಲವೇ ? ಸುಪ್ತನ
ಕರವಕಂತುಕದಂತೆ ಪರಬೊಮ್ಮದಾಸಂಪ
ಪರವಶದೊಳಮು ತಾನೆ ಜಗುಳಿದೊಡೆ ತಪ್ಪಲ್ಲ
ಬರಿದೆ ಜೀವನ್ಮುಕ್ತರಾಗಿರುವೆವೆಂದೆರಡು ಮಾತುಗಳ ಕಲಿತುಕೊಂಡು || ೧೪ ||

ತನು ಮಿಥ್ಯೆಯೆಂದು ತನುಭೋಗಕ್ಕೆ ಬಾಯಾರಿ
ತನುವಿಗೊಳ್ಳುಣಿಸನಿಟ್ಟುಪಚರಿಸಿ ಸಿಂಗರಿಸಿ
ತನುವಿಗಾಯಾಸವಾಗುವದೆಂಬ ನೆವದಿಂದ ಕುಲಜಾತಿಕರ್ಮಗಳನು
ತನುವಿಂದ ತ್ಯಜಿಸಿ ಜೀವಿಸುವ ವೈಗಳ್ಳರಿಂ
ಜನಕಾಗುತಿರ್ಪುದತಿಹಾನಿ ಯಿಂತಹ ಸಾಧು
ಪಸುಜನಲ್ಲವೆ ಬೇರೆ ಮನುಜನಲ್ಲೆಂದು ಪೇಳುವದಿಲ್ಲವೇ ? ಶಾಸ್ತ್ರವು || ೧೫ ||

ಬಿಡಬೇಕು ಕಾಮ್ಯ ಕರ್ಮವನು ನಿಷ್ಕಾಮ್ಯಮಂ-
ಪಿಡಿದು ಮಾಡುತ್ತಿರಲುಬೇಕು ಜ್ಞಾನೋತ್ತರದೊ-
ಳುಡುಗದಾಚರಿಸಬೇಕೀ ಲೋಕಸಂಗ್ರಹಾರ್ಥ ಜ್ಞಾನಿ ತಾನಾದಡುಂ
ಪೊಡವಿಯೊಳಿದಂ ಬಿಟ್ಟವನೆ ಲೋಕಕಂಟಕಂ
ನಡೆ ಫಲೋದ್ದೇಶವಿಲ್ಲದೆ ಮಾಳ್ಪ ಕರ್ಮವದು-
ಜಡವಲ್ಲವದಕೆ ಕರ್ಮತ್ಯಾಗವೆಂದೊರೆವವಾಗಮಾಮ್ನಾಯಂಗಳು || ೧೬ ||

ಭಸಿತರುದ್ರಾಕ್ಷಗಳುಬೇಕು ಬೇಡವೆ ಲಿಂಗ-
ವೆಸೆವ ಕೋವಣಕಂಥೆ ಬೇಕು ಬೇಡವೆ ? ಧರ್ಮ
ಪೊಸೆದುಂಬ ನಲ್ಲುಣಿಸುಬೇಕು ಸತ್ಕುಲಜಾತಿ ಶೀಲಾದಿಗಳು ಬೇಡವೇ ?
ಪೊಸಸಿಂದಿ ಸೆರೆಗಾಂಜಿ ಪರನಾರಿಯರು ಬೇಕು
ಪಶುಪ ಯಜನಂ ನಿಜಸ್ತ್ರೀಸುತರು ಬೇಡವೇ ?
ಮಿಸುಪ ತನುಭೋಗಗಳು ಬೇಕು ವೈರಾಗ್ಯವದು ಬೇಡವೇ ? ಸಾಧುಗಳಿಗೆ || ೧೭ ||

ಶಿವನ ವೇಷಂಗಟ್ಟಿದವನು ನಾಟಕದೆ ಮಾ-
ನವನೆಂಬ ಭಾವಮಂ ತನ್ನೊಳಡಗಿಸಿ ತಾನು-
ಶಿವನೆಂದು ನಟಿಪಂತೆ ಮೇಲಹಂಬ್ರಹ್ಮಾಸ್ಮಿಯೆಂದೊಳಗಹಂಕರಿಸುತ
ಭುವನದೊಳು ಮನುಜರನು ವಂಚಿಸುವ ದುಸ್ಸಾಧು-
ನಿವಮಹಂ ನಂಬಿಕೆಡಬಾರದೆಂದೆಚ್ಚರಿಪ
ಷವಣಗಳನರಿದಿಲ್ಲವೇ ? ನೀವು ಚನ್ನಾಗಿ ಕಣ್ದೆರೆದು ನೋಡಿರಿ ಗಡಾ || ೧೮ ||

ಗುರುವಾಗಿಯಜ್ಞಗಲ್ಪಪ್ರಬುದ್ಧನಿಗೆಲ್ಲ
ಪರಬೊಮ್ಮವೆಂದಾವನುಪದೇಶಿಸುವನವಂ
ನಿರಯಮಂ ಪೊಂದುವಂ ತಚ್ಛಿಷ್ಯನೊಡನೆಂದು ಯೋಗವಾಶಿಷ್ಠ ಮುಲಿಗುಂ
ಅರಿವಿಲ್ಲದೆಲ್ಲಮುಂ ಬೊಮ್ಮವಿಹುದೆಂದುಬ್ಬಿ
ಹೊರಗೆ ಹೋಳಿಯ ಹುಡುಗರಂತೆ ತಿರುಗಾಡುವದು-
ಸರಿಯಲ್ಲವೆಂದದೇ ಶಾಸ್ತ್ರಪ್ರಮಾಣಮುಸುರುವದಿಲ್ಲವೇ ನೋಡಿರಿ || ೧೯ ||

ಆವ ಕುಲದವನಾದೊಡೇನು ಪರಮಾತ್ಮಾನು-
ಭಾವಿಯಾದೊಡೆ ಮುಕ್ತನಹನಲ್ಲವೆಂಬರಾ-
ರ್ಯಾವಲಯದೊಳಗವಂ ಶೂದ್ರನಿರ್ದೊಡೆ ಸರ್ವಥಾಗುರೂತ್ತಮನಾಗನು
ಭಾವಿಸಲ್ದ್ವಿಜನುತಸ್ಥರಿಗೆ ಗುರುತ್ವಾಭಿಮಾ-
ನಾವಲಂಬನಮುಂಟದಾದೊಡುಂ ಶಾಸ್ತ್ರದಿಂ-
ದಾವಗಂ ಗುರುವಾಗಲರಿಯನಾ ವರ್ಣಾಧಮಂ ಸುವರ್ಣೋತ್ತಮರಿಗೆ || ೨೦ ||

ಬ್ರಾಹ್ಮಣಂ ನಿಖಿಲವರ್ಣಕ್ಕೆ ಗುರುವಾಗುವಂ
ಬ್ರಹ್ಮಮಂ ಬಲ್ಲಶೂದ್ರಂ ದಾಸರೂಪದಿಂ
ಬ್ರಾಹ್ಮಣಗೆ ಬ್ರಹ್ಮವಿದ್ಯೆಯನು ವಂದಿಸಿ ಪಿಂದೆ ಕೊಟ್ಟಿರುವನಲ್ಲವನು
ಬ್ರಹ್ಮವನು ಗುರುವಾಗಿ ತಾನು ಬೋಧಿಸಲಿಲ್ಲ
ಬ್ರಹ್ಮವೇತ್ತರು ನಾವೆನುತ್ತೊಂದು ಮೋಸದಿಂ
ಬ್ರಹ್ಮವನು ವರ್ಣೋತ್ತಮರಿಗೆ ಬೋಧಿಪುದಾವರೀತಿ ? ಗ್ರಂಥವನೋದಿರಿ || ೨೧ ||

ಪರಮವರ್ಣಾಶ್ರಮಕೆ ತಕ್ಕಶೀಲಾಚಾರ
ವಿರುವ ಗುರುವಿನನುಪಾವಸ್ಥೆಗೈವುದದಿಲ್ಲ-
ದಿರಲವನನುಳಿವುದೆಂದಾ ಪಾರಮಾರ್ಥ್ಯಪ್ರಕಾಶಿಕೆಯೊಳೊರೆದಿಲ್ಲವೇ
ಹರಿವ ಹರುಗೋಲಿನೊಳು ಬಡಿವಾರದಿಂ ಕುಳಿತು
ತೊರೆಯದಾಟುವೆನೆಂದು ಪೊರಮಟ್ಟ ಮರುಳನಂತೆ
ಚರಿಪ ಶಿಶ್ನೋದರಪರಾಯಣದ ಗುರುವನಾಶ್ರಯಿಸಿದೊಡೆ ಹಾನಿಯಲ್ತೇ? ॥ ೨೨ ॥

ಜ್ಞಾನಿ ಯೋಗ್ಯೆಡೊಡುಂ ಪೊಲೆ ಕೊಲೆ. ನಿಷೇಧಂಗ-
ಳೇನುಮಿಲ್ಲೆಂದು ನೀ ನೊರೆವುದಿದು ಪುಸಿಯಲ್ಲ
ಜ್ಞಾನಿಗಳೊಳೆರಡು ಬಗೆಯುಂಟು ಸರ್ವಾತ್ಮಕಸಮಾಧಿಯಿಂದಾಗಿ ಮೆರೆವ
ಜ್ಞಾನಿ ಪಯ್ಯಾಕರಣನಾಮನೆಂದೆನಿಪನಿವ-
ನಾನಂದಮಯನಾಗಿ ಪರಿಣಮಿಸುತಿರ್ಪನಿವ-
ಗೂನಮಿಲ್ಲವೆ ಕರ್ಮಭೋಗಿ ಮೂಢಾತ್ಮಕಾವಸ್ಥಾತ್ರಯಂಗಳಲ್ಲಿ ॥ ೨೩ ॥

ಬರುತಿರ್ಪುದಾವುದಾನೊಂದವಸ್ಥೆಯಜಸ್ರ-
ಮರಿದಶಾಸ್ತ್ರವ ಪೇಳುವಂ ಕೇಳುವಂ ನೆನೆವ-
ನುರು ರಾಮಕೃಷ್ಣ-ಜನಕಾದಿ ಸಕಲಮುನೀಂದ್ರರೀ ವರ್ಗದವರುಮತ್ತೆ
ಪರಮನೇತ್ಯಾತ್ಮಕ ಸಮಾಧಿಯಿಂದಾಗಿ ವೈ-
ಮರೆವ ಸುಜ್ಞಾನಿ ಮೌನಿಯೆನಿಪ್ಪನಿವಗೆ ಮೂ-
ದೆರನಾದ ಬಾಲಕೋನ್ಮತ್ತಪೈಶಾಚಕಾವಸ್ಥೆಗಳೊಳೊಂದು ಸೇರಿ ॥ ೨೪ ॥

ಆರೊಡನೆಮಾತಾಡದದ್ವೈತಶಾಸ್ತ್ರಮವಿ-
ಚಾರಮಂ ಮಾಡದಲೆ ಬಾಹ್ಯದೆಚ್ಚರಮರೆದು
ಸಾರಸುಖದಲ್ಲಿ ಬಾಳುತ್ತಿರ್ಪನಿವನ ತನು ಪ್ರಾರಬ್ಧತವಕದಿಂದ
ಧಾರುಣಿಯೊಳಡ್ಡಾಡುತಿಹುದವಗೆ ಹೊಲೆಕೊಲೆಯು-
ನಾರದೆಂತೊರೆವರಾ ಶಾಸ್ತ್ರಗಳು ಕೈಬಿಟ್ಟು
ದೂರದೊಳು ನಿಂದು ಭಯದಿಂ ಶರಣುಹೊಡೆವುತಿರ್ಪ್ಪುಂ ನೀಂ ಪ್ರಗಲ್ಭನೆಂದು ॥ ೨೫ ॥

ಈ ಮೌನಿವರ್ಗದೊಳು ಬರುವನೆಮ್ಮಗಸೂರ
ಶ್ರೀ ಮಹಾಜಡೆಯಸಿದ್ಧೇಶ್ವರಾದಿಗಳು ನೀ-
ನೀ ಮಹಿತನಿಜಗುಣರ ಪರಮಾನುಭವಬೋಧೆಯಿಂದರಿದು ಜಾಣರೆನಿಸಿ
ಭೂಮಿಯೊಳು ಪರಮಜೀವನ್ಮುಕ್ತರಾಗಿ ಮೋ-
ಕ್ಷಾಮೋದ ಸಾಗರದೊಳೋಲಾಡಿರ್ಪೆ ಮೋಸ
ಹೀನವೃತ್ತಿಯನಾಂತು ತನುಭೋಗವೊಳು ಬೀಳ್ದು ಸರ್ವಥಾ ಕೆಡಬೇಡಿರಿ ॥ ೨೬ ॥

ಲಲನೆಯೀಶ್ವರಸೃಷ್ಟಿ, ತಾಯ್ಮಡದಿಮಗಳಕ್ಕ-
ಗಳೆ ಜೀವಸೃಷ್ಟಿಯೀಶ್ವರಸೃಷ್ಟಿಯೊಂದೆಂಬು
ತಿಳಿವುದಾತ್ಮದೊಳಿದಂ ಬಳಸಬಾರದು ಬಾಹ್ಯದಲ್ಲಿ ಸಾಧಕಸಿದ್ಧರು
ಹಲವೆಂದು ಜೀವಸೃಷ್ಟಿಯವಸ್ತುಗಳ ಭೇದ-
ದಳಿದು ಹೊರಗವರ ಪರತೆರದೊಳಾಚರಿಸಬೇ-
ಕೊಳಗೆ ಹೊರಗೊಂದೆಯೆಂದಾಚರಿಸಲಾಗದೀ ಸೃಷ್ಟವಸ್ತುವ್ರಜದೊಳು ॥ ೨೭ ॥

ಬಳಸಬೇಡದ್ವೈತವನು ಬಾಹ್ಯದಲ್ಲಿ ನಿ-
ನ್ನೊಳಗೆ ತಿಳಿಯೆಲ್ಲವೊಂದೆಂದು ನಿಜಗುಣಯೋಗಿ
ಸುಲಭವೆನೆ ಪೇಳಿರ್ದ್ದಪುಂ ಬಾಗಿಲಂ ಬಲಿದು ಹೊರಗಾರು ಕಾಣದಂತೆ
ನಿಲಯದೊಳಗದ್ವೈತಮಂ ಮಾಳ್ಪರಾ ಸಾಧು-
ಗಳೊಳು ಕೆಲಬರ್ದುರಾಚಾರಮೋಹಿಗಳು ಬಹು
ಸುಲಭಶಾಸ್ತ್ರಗ್ರಂಥಗಳಿಗಪಾರ್ಥವ ಮಾಡಿ ದುರಿತಕರ್ಮಕೆ ಹೇಸದೆ ॥ ೨೮ ॥

ಕೇವಲಾದ್ವೈತಶಾಸ್ತ್ರವಿದೆಮ್ಮದಲ್ಲವೈ
ಪಾವನಶಿವಾದ್ವೈತಶಾಸ್ತ್ರವೆಮ್ಮದು ಕೇಳ-
ರಾವಗಂ ತನುವಿನೊಳು ಲಿಂಗವಿರಬೇಕು ಹೊರಗಣಲಿಂಗವೇಕೆ ಬೇಕು ?
ಭಾವದೊಳಗುಳ್ಳ ಲಿಂಗವನರಿದೊಡವೆ ಸಾಕು
ಕೈವಲ್ಯವಪ್ಪುದೆಂದೊರೆದೊರೆದು ವರವೀರ-
ಶೈವರಂ ಭ್ರಷ್ಟರೆನೆಮಾಡುವರು ಕೆಲದುರುಳವೇದಾಂತಿಗಳು ಮೋಸದಿಂ ॥ ೨೯ ॥

ಅವರೇನು ಬಲ್ಲರೀ ಶಿವಶಾಸ್ತ್ರದರ್ಥಮಂ
ಪ್ರವಿಮಲೋಜ್ವಲದ್ವೀಪಮುಂ ದೀಪಕಿರಣಮುಂ
ಕವಿದಪ್ರಭೆಯುಂ ಕೂಡಿ ಮೆರೆವಂದದಿಂದಿಷ್ಟಮುಂ ಪ್ರಾಣಮುಂ ಭಾವವು
ತವೆಮೆರೆವುತಿಹವು ಸಮವಾಯಸಂಬಂಧದಿಂ-
ದಿವುಗಳೊಳು ಬೇರೆಬೇರೆಂದು ಹೇಳುವಮೂರ್ಖ-
ನಿವಹಕೇಗೈವುದೆಂದಿಂತತುಲ ಶಾಸ್ತ್ರಪ್ರಮಾಣದಿಂದವರ ಮತವ || ೩೦ ||

ಖಂಡಿಸಿದನವರೆಲ್ಲರುಂ ನಾಣ್ಚಿ ಬಲುಭಯಂ-
ಗೊಂಡು ಪಡಿನುಡಿಗುಡದೆ ಸುಮ್ಮನೇ ತಮ್ಮ ಮುಖ-
ಮಂಡಲವ ತಗ್ಗಿಸಿ ಮನೋವ್ಯಥಾಭಾರದಿಂ ಗುಂಪುಗೊಡೆದು ನಿಲ್ಲದಂತೆ
ಕಂಡಕಡೆ ಗೈದಿದರು ಕೂಡಿರ್ದ ಸಭ್ಯರೀ-
ಖಂಡಶಶಿಧರಯೋಗಿಯಂ ಪೊಗಳ್ದರುಳಿದವರು
ಕಂಡೆವದ್ವೈತಸುಖಸತ್ಯಮಾರ್ಗವನೀತನಿಂದೆಂದು ಮತಿಗಲಿತರು || ೩೧ ||

ಮರುಳವೇದಾಂತಿ ಮತ್ತೋರ್ವಂ ಪರಬ್ರಹ್ಮ-
ದಿರವನರಿದಿಹೆನೆಂದು ಜನಗಳಂ ಬೋಧೆಯಿಂ
ಮರುಳುಗೊಳಿಸಿ ಮಹಾತ್ಮನೆನಿಸಿಕೊಂಡಲ್ಲಲ್ಲಿ ಪೇರ್ಮೆವೆತ್ತ ಭವಮತದ
ಪರಮಧರ್ಮವ ನಿರಾಕರಿಸುತಂ ಸಂಚರಿಸು-
ತಿರುವದಂ ತಿಳಿದು ಸಭೆಗರೆದಾತನಂ ಕರಿಸಿ
ಪರಿಭಂಗಿಸಿದನೀ ಕುಮಾರೇಶ್ವರಂ ನಿಖಿಲರರಿಯೆ ಶಾಸ್ತ್ರಾರ್ಥದಿಂದ || ೩೨ ||

ಎನ್ನನೀ ಸ್ವಾಮಿ ಶಾಸ್ತ್ರಾರ್ಥದೊಳು ಸೋಲಿಸಿದ-
ನಿನ್ನಿವಂಗೇಗೈವುದೆಂದು ಮನದೊಳಗೆಣಿಸಿ
ನನ್ನಿಂದವನು ಧರ್ಮಸ್ಥಲಮೆನಿಪ್ಪೂರಿಗಿಚ್ಛೈಸಿ ಪೋದನಲ್ಲಿ
ಅಣ್ಣಪ್ಪನೆಂಬೊಂದು ದೇವರುಂಟಾ ದೇವ
ಸನ್ನಿಧಿಯೊಳತಿಭಯಂಕರ ಪಿಶಾಚಗಳುಂಟು
ಮನ್ನಣೆಯವೆತ್ತ ಪೂಜಾರಿಯುಂಟವನಗೆ ಹಣವಂ ಕೊಟ್ಟುಗಡುವುದಾಡಿ || ೩೩ ||

ತಮಗೆ ಬೇಕಾದೊಂದು ಕೆಟ್ಟಗ್ರಹಮಂ ತಂದು
ಕುಮನದಿಂ ಕಾಡುವವಕಾಗಿ ತಮ್ಮಯ ಶತ್ರು
ಸಮುದಯದ ಮೇಲೆ ಜನಗಳು ಬಿಡುವದುಂಟಾ ಮಹಾ ದುರುಳವೇದಾಂತಿಯು
ಭ್ರಮೆಯಿಂದ ಪೂಜಾರಿಗರ್ಥಮಂ ಕೊಟ್ಟೊಂದು
ಕ್ರಮದಷ್ಟಿ ಕಾಡುವ ಪಿಶಾಚಮಂ ಕರತಂದು
ಕ್ರಮವನೋಡದೆ ಕಾಡು ನೀನೆಂದದಂ ಕಳಿಸಿದನು ವಿರಾಟ್ಪುರದಮಠಕೆ ॥ ೩೪ ॥

ಅದು ಪೋಗಿನಿಂದಲ್ಲಿ ಬಹುಮೋಸದಿಂದ ಮಾ-
ಣದೆ ತನ್ನ ಚೇಷ್ಟೆಯಂ ಬಗೆಬಗೆಯೊಳೆಸಗತೊಡ-
ಗಿದುದಂ ಪೇಳಲೇನೊಮ್ಮೊಮ್ಮೆ ರಾತ್ರಿಯೊಳು ಕಾಣದಂದದೊಳಾರ್ಪ್ಪುತ
ಬೆದರಿಸುತ್ತಿರ್ದತ್ತು ಮಠದ ಜನಗಳನೊಮ್ಮೆ
ಕದವತೆಗೆದಂತೆ ಶಬ್ದಂಗೈದು ಬಂದು ಮಲ-
ಗಿದ ಜನರಕಾಲ್ಗಳಂ ಪಿಡಿದೆಳೆವುತವರ ಹಾಸಿಗೆಯ ಬದಲಿಸುತಲಿತ್ತು ॥ ೩೫ ॥

ನಿರುತಮಾ ಮಠದೆಲ್ಲ ಹಿರಿಯತನಮಂ ಮಾಡು-
ತಿರುವವೇ ಹಾನಗಲ್ಲರಳೆಲೆಯಮಠದ ಘನ-
ಚರಪಟ್ಟದಾರ್ಯನೀ ಗ್ರಹಚೇಷ್ಟೆಯಂ ಮಠದೊಳಿರುವರಿಂ ಕೇಳ್ದೊಪ್ಪದೆ
ಬರಿದೆ ಪೇಳ್ವಿರಿ ಗ್ರಹಮದೆಂತಹುದು ತೋರಿಸಿರಿ
ನಿರುಕಿಸುವೆನೆಂದು ನುಡಿದಂದು ನಿಜಮಠಕ್ಕೈದಿ
ಮೂರುದಿನಂ ಬರುವಂತೆ ಸ್ವಾಮಿಗಳ ಮಠಕಾಗುರೂತ್ತಮಮಂ ಬಂದು ತನ್ನ ॥ ೩೬ ॥

ತಲೆಯಮೇಲಿನ ಮುಡಿಯನುಂ ಶಾಲು-ಪಾವುಡಂ-
ಗಳನಲ್ಲಿ ಕೆಳಗಿಟ್ಟು ಚಾಪೆಯೊಳು ಕುಳ್ಳಿರಲು
ತಳುವದೊಮ್ಮಿಂದೊಮ್ಮೆಗುರಿಮುದಾ ಮುಡಿಯೀತನೆಮರಿನೊಳು ಧಗಧಗಿಸುತ
ಅಲೆಲೆಯೇನದ್ಭುತಮಿದೆಂದು ಬಲುಬೆರಗಾಗಿ
ಬಳಿಕ ನಿರುಕಿಸಿದನಾ ಶಾಲುಪಾವುಡಗಳಂ
ತೊಲಗಿರ್ದವವುಗಳುಂ ನಿಲ್ಲದೆಲ್ಲಿಯೊ ಪೇಳಲೇನೀ ಚರಂತಿಗಳನು ॥ ೭ ॥

ಪುಡುಕಲಾತನ ಜೆಲ್ಲನ್ಮೃದುವಾದ ಶಾಲುಪಾ-
ವುಡಗಳಾ ಮಠದ ಹಿತ್ತಲೊಳುಳ್ಳ ಕೂಪದೊಳು
ಬಿಡದೆ ತೊಯಿಸಿಟ್ಟು ಮೇಲೊಂದು ಕಲ್ಲಂ ಪೇರಿರುವದನುರೆ ನೋಡಿಯಿಳಿದು
ಕಡೆಗೆ ತೆಗೆದಿತ್ತರೀತಂಗೆ ಪರಿಚಾರಕರು
ಕಡುಹಿನಿಂದದನು ನೋಡುವೆನೆಂದು ಮೊದಲೆಂವ
ನುಡಿಯಡಂಗಿ ಪಿಶಾಚವಹುದೆಂದು ಬೆದರಿದಂ ಕಣ್ಣಾರೆಕಂಡೀತನು || ೩೮ ||

ಅಟ್ಟಡಿಗೆಯೊಳು ಬೂದಿ-ಮಣ್ಣು-ಕಸಗಳಹಾಕಿ
ಹಿಟ್ಟಕ್ಕಿಬೆಲ್ಲವನು ನೀರಿನೊಳು ಬೆರಸಿ ಮನ-
ಮುಟ್ಟಿ ತಮ್ಮರಿಯ ಮನೆಯೊಳೆಸಗಿದನ್ಯರ ಪಾಕಮಂ ತಂದು ಮಠದೊಳಿರಿಸಿ
ಮುಟ್ಟಲಾಗದ ದಿನಸುಗಳನಾರುಮರಿಯದಂ-
ತಿಟ್ಟು ಮಠವನಶುದ್ಧಮೆನೆಮಾಡಿ ಕರೆವುತಿಹ
ಕಟ್ಟಿರುವ ತುರುಕರುಗಳಂ ಪಲವುಬಗೆಯಿಂದ ಕಾಡಿ ಜೆಲ್ಲಾಟವಾಡಿ || ೩೯ ||

ಈತೆರದೊಳಾ ಪಿಶಾಚಂ ಚೇಷ್ಟೆಯಂ ಮಠದೊ-
ಳೀ ತಪೋನಿಧಿಗಂಜದೆಸಗುತಿರ್ದುದು ಮತ್ತ-
ಮಾತಂಗುಪದ್ರವವ ಮಾಡಲಿಲ್ಲದನು ತಿಳಿದೆಲೆ ಗ್ರಹವೆ ನೀನೆನ್ನನು
ಘಾತಿಸಲ್ಕೆಲ್ತಂದು ಮಂದಿಯಂ ಕಾಡುವೆಯ-
ದೇತಕಿದರಿಂದ ನಿನಗಪ್ಪಲೇಸಾವುದೆಂ-
ದೀತನಾಡುತ್ತಿರ್ದನದರಿಂದ ಮಠಕೆ ಬರಲಂಜುತಿರ್ದರ್ಕೆಲಬರು || ೪೦ ||

ಬರಲಿಲ್ಲವೀ ಚರೋತ್ತಮನ ಮೈಮೇಲಾದೊ-
ಡಿರದೀತನೋರ್ವಸೇವಕನ ಲಿಂಗವನಿರುಳೊ-
ಳರಿಯದಂತೊಯ್ದು ಕರ್ತೃಗಳ ಗದ್ದುಗೆಯೆದುರಿನಲ್ಲಿ ಮಡುಗುತ್ತಿರ್ಪುದು
ಪರಿಕಿಸುವದೆಂದಾ ಮಹಾರಾಜಪೇಟೆಗೀ-
ಚರವರ್ಯನವನನೊಡಗೊಂಡು ಬಂದಂದೊಂದು
ಪಿರಿದಾದ ಪೆಟ್ಟಿಗೆಯೊಳವನ ಲಿಂಗವನಿರುಳೊಳಿರಿಸಿ ಕೀಲಿಯನು ಹಾಕಿ || ೪೧ ||

ಮಲಗಿಸಿದರವನನಲ್ಲಿಯೆ ರಾತ್ರಿಯೊಳದೆಂತು
ತೊಲಗಿದುದೊ ಲಿಂಗವಾ ಗರ್ದುಗೆಯೊಳಿರ್ದತ್ತು
ಬಳಿಕದಂ ತರಿಸಿದರು ಮತ್ತಿಂತು ದೂರದೂರದೊಳ್ಕೈದಿ ಚರವರ್ಯನು
ಹಲವುಬಗೆಯಿಂ ಪರೀಕ್ಷಿಸಿ ನಿಲ್ಲಸುದರಿಂದ
ತಳುವದಾ ಹಾನಗಲ್ಲಿಗೆ ಬಂದು ಮಠದಲ್ಲಿ
ಬೆಳಸಿದನನುಷ್ಠಾನಮಂ ಮೌನದಿಂದ ಪದಿನೈದು ದಿನಮಸಿತರಲ್ಲಿ || ೪೨ ||

ತಡೆಯದೆ ಪಿಶಾಚವದು ತಲ್ಲಣಿಸಿ ಕಂಗೆಟ್ಟು
ನಡೆದುದಾ ದುರುಳವೇದಾಂತಿಯೆಡೆಗೆಲೆ ನೀನು
ಬಿಡದೆ ಕರೆತಂದೆನ್ನನಾ ಮಠದೊಳಿರಿಸಿದ್ದೈ ಸಾಕೊಂದು ಗಳಿಗೆಯಿನ್ನು
ತಡೆಯೆ ನಾನಿರಲಾರೆನಲ್ಲಿಯೊಲ್ಲೆನು ಮೊದಲಿ-
ನೆಡೆಗೆ ಕಳಿಸಿಲ್ಲವೊಡೆ ಗಡುವು ಮುಗಿವನಕಿಲ್ಲಿ
ತುಡುಕಿ ನಿನ್ನಂ ಮುರಿವೆನೇನೆಂಬೆ ಪೇಳೆಂದು ಕೆಟ್ಟದನಿನೆಗೆದಾರಲು || ೪೩ ||

ನಡುಗಿದನವಂ ಕೇಳಿ ಮುಂಪೇನುಗತಿ ಯೋಗಿ
ಯೆಡೆಗಿದಂ ಕಳಿಸಿದುದೆ ತಪ್ಪಾದುದೆನ್ನನೇ
ತುಡುಕಿ ನುಂಗುವದೆಂದು ಬೆದರಿ ಮತ್ತನಿತು ಹಣಮಂ ಕಟ್ಟಿಕೊಂಡು ಹೋಗಿ
ಬಿಡದೆ ಪೂಜಾರಿಗಿತ್ತಿನ್ನು ಸಾಕಿನಿತಕೆ-
ನ್ನೊಡೆಯ ನಿಮ್ಮೀ ಪಿಶಾಚವನು ಕರೆಕೊಳ್ಳಿರೆಂ-
ದಡಿಗೆರಗಿ ಪೇಳ್ದಲ್ಲಿಯೋ ಬಿಟ್ಟು ಬಂದನವನದನು ಪಾರಾದೆನೆಂದು || ೪೪ ||

ಮೆರೆವ ಸಿದ್ಧಾರೂಢರಾಚರಣೆ ಶಾಸ್ತ್ರಕ್ಕೆ
ಸರಿಯಲ್ಲವೆಂಬುದನು ಹುಬ್ಬಳ್ಳಿಯಲ್ಲಿ ಸಭೆ-
ಗರೆದು ಪಂಡಿತಮಹಾಜನರೊಳಖಿಲೋಪನಿಷದರ್ಥಪ್ರಮಾಣದಿಂದ
ಸ್ಥಿರಗೊಳಿಸಿ ಮತ್ತೆ ಸತ್ಯಾರ್ಥಬೋಧಕರನೆ-
ಚ್ಚರಿಸಿ ಮೋಸವಿದೆಂದು ಹಿಂದಿರುಗಿಸಿದನೀ ಸು-
ಚರಿತಂ ಜಗದ್ಧಿತನಿಮಿತ್ತಮಾ ಸಟೆ-ದಿಟಕೆ ನಿಲ್ಲ್ವುದೇ ಪರಿಕಿಸಿ ನೋಡೆ || ೪೫ ||

ಶಿವಧರ್ಮದೊಳು ವಿಪರ್ಯಾಸಮತಿಯಿಂದಪಾ-
ರ್ಥವನೆಸಗುತಂ ಶಿವಾನಂದನೆಂಬಾ ಸಾಧು
ಪವಣವಿಲ್ಲದ ಕೆಲವು ಸಂಶಯಂದೆಗೆದನವುಗಳನು ಖಂಡಿಸಲೆಸುತ್ತ
ಅವನೊಪ್ಪಿದಂತೆ ಹರ್ತಿಯೆನಿಪ್ಪ ಗ್ರಾಮದೊಳು
ಸುವಿಶಾಲವಾದ ಬಸವಣ್ಣದೇವರ ಗುಡಿಯೊ-
ಳವಗಡಿಸದಿದಕೊಂದು ಸಭೆಗೂಡಬೇಕೆಂದು ದಿವಸಮಂ ಗೊತ್ತುಮಾಡಿ ॥ ೪೬ ॥

ಗದುಗಿನಿಂದಾಸ್ಥಲಕೆ ಪೊರಮಡುವ ದಿವಸವೇ
ಕದನವಹುದೀ ಸಭೆಯುಂಕೂಡುವದರಿಂದೆಂದು
ಬೆದರಿಕೆಯನೆಬ್ಬಿಸಿದರವನ ಪ್ರೇರಣೆಯಿಂದಮವನ ಸಂಗಡದ ಜನರು
ಅದನರಿದು ಸರಕಾರದವರಡ್ಡಿಗೈಯಲಾ-
ಕದನವಾಗದವೋಲ್ವ್ಯವಸ್ಥೆಗೈಯಿರಿ ನೀವು
ಪಡೆದೆಸವಿವಾದಮಂ ಬಿಡೆವಿದೇ ಕರ್ತವ್ಯವೆಂದೊರೆದು ಧೈರ್ಯದಿಂದ ॥ ೪೭ ॥

ಭರದೆ ಹರ್ತಿಗೆ ಹೋಗಿ ಕರೆಯಲಟ್ಟಿದೊಡವಂ
ಬರಲಾರದಗಿದದೇ ಗ್ರಾಮದೊಳಗಿರ್ದು ತಾಂ
ಬರಿದೆ ನಡುಗುತ್ತ ತುರ್ಯಾವಸ್ಥೆಯಡಸಿರ್ಪುದೆಂದೊಂದು ನೆಪವಮಾಡಿ
ಬರಲಿಲ್ಲವವನಖಿಲಶಿಷ್ಯರ್ಕೈತಂದರಾ
ಸರಕಾರದವರು ಗೊಂದಲವಾಗದಂದದಿಂ
ಸರಿಯಾದ ಸುವ್ಯವಸ್ಥೆಯೊಳಿರ್ದರರಿಯಲಾತುರದೊಳಾ ಸಭೆಗೆ ಬಿಡದೆ ॥ ೪೮ ॥

ಗದಗಮುಂತಾದೆಲ್ಲ ಸುತ್ತುಗ್ರಾಮಗಳಿಂದ
ಪದೆದೆಲ್ಲ ಪ್ರಮುಖರುಂ ನೆರೆದಿರ್ದರಾಗ ಕೋ-
ವಿದರ ಭಾಷಣಗಳುಪನಿಷದಾದಿಮುಖ್ಯಪ್ರಮಾಣಂಗಳಿಂದಾದವು
ಬೆದರದಾತನ ಮತಂಗಳನೆಲ್ಲ ಖಂಡಿಸಿದ-
ರಿದರೊಳಾರಾದಡುಂ ತಮ್ಮ ಶಂಕೆಯನು ಕೇ-
ಳಿದಡದಂ ಬಿಡಿಸುವೆವೆನುತ್ತೊರೆದರಿವರದಕ್ಕಾವನುಂ ಕೇಳಲಿಲ್ಲ ॥ ೪೯ ॥

ಕೆಲವರದರೊಳವನ ಶಿಷ್ಯರು ಹೇವದಿಂದವಂ
ಗೆಲಸಬೇಕೆಂದೆಳಿಸಿ ನಾಳೆ ನಾಗಾವಿಯೊಳು
ಕಲಿಸಬೇಕೀ ಸಭೆಯನಲ್ಲಿಗೆಮ್ಮಯ ಸಾಧುವಂ ಕರೆದುಕೊಂಡು ನಾವು
ನಿಲದೆ ಬರುವೆವೆನುತ್ತಮೀ ಕುಮಾರೇಶ್ವರನಿ-
ಗಲಸದೊರೆದೊಪ್ಪಿಸಿವರಾ ಮಾತಿನಂತೆ ಮೇ-
ಳೊಲವಿನಿಂ ಮರುದಿನಂ ನಾಗಾವಿಗೈತಂದು ಚರವರಂ ಸಭೆಗರೆವನು ॥ ೫೦ ॥

ಈ ಸಭೆಗೆ ತಮ್ಮ ಗುರುವರ್ಯನಂ ಕರೆದೊಯ್ಯು-
ವಾಶೆಯಿಂ ಬಹುತರಂ ಬೇಡಿಕೊಂಡರು ಶಿಷ್ಯ-
ರಾ ಸಾಧು ಮತ್ತೊಂದು ನೋಗುಹಾಕಿದನಾಗ ಬರಲಿಲ್ಲ ಕೂಡಿವವರು
ಲೇಸಿದಲ್ಲೆಂದು ಮುಳಿಸಿಂದೇಳಿಸಿವರವನ
ನೇಸು ಪೇಳಲಿ ಕೆಲಂಬರ್ನಕ್ಕರೀ ಬಗೆಯು
ಮೋಸಗಾರರನೆಂದಿಗುಂ ನಂಬಲಾಗದೆಂದಾಡಿದರು ಮೇಣ್ಕೆಲಬರು ॥ ೫೧ ॥

ಇಂತು ಬಹುಕಡೆಗಳೊಳು ದುರುಳವೇದಾಂತಿಗಳ-
ನಂತಪರಿಯಿಂ ಮುರಿದನೀ ಚರಾಧಿಪನು ವಿ-
ಶ್ರಾಂತಿಯಿಲ್ಲದೆ ಪಂಡಿತರನೊಡಂಗೊಂಡು ಕೆಲ ಬರಿಸಂಬರಂ ದುಡಿದನು
ಎಂತಾದೊಡೆಲ್ಲಿಯುಂ ವಾದದೊಳು ಸೋಲದ-
ತ್ಯಂತ ಜಯಮಂ ಪಡೆದು ಧರ್ಮದೇಳ್ಗೆಯನೆಸಗಿ-
ದಂ ತನ್ನ ನೈಪುಣ್ಯ-ಶಾಸ್ತ್ರಬಲ-ಧೈರ್ಯ-ಯುಕ್ತಿ-ಪ್ರಯತ್ನಂಗಳಿಂದ ॥ ೫೨ ॥

ಅವಿಕಲತಪೋಯೋಗಚಿದ್ಬಲಗಳಿಂದ ಮಾ-
ನವರಕಷ್ಟಂಗಳಂ ಕಳೆದೀ ಕುಮಾರೇಶ-
ನವನಿಯೊಳು ಶಿವಪೂಜೆಯಂ ಮುಂದುಮಾಡಿ ಶಿವಲಿಂಗವೇ ಬಂದೆಡರನು
ತವಿಸಿ ಬೇಡಿದಫಲವನರ್ಥಿಕರಿಗನುಕೂಲಿ-
ಸುವದೆಂದು ಪೇಳ್ವನಲ್ಲದೆ ತನ್ನನೆರಗಿಪಾ-
ಡುವರಿಗವಕಾಶವನುಂ ಕೊಡಲಿಲ್ಲವೀತನೇನಾತ್ಮಸ್ತುತಿತ್ಯಾಗಿಯೋ ॥ ೫೩ ॥

ಅಂತು ಸಂಧಿ ೯ ಕ್ಕೆ ಪದಗಳು ೪೪೫- ಭದ್ರಂ

...॥ ಶ್ರೀ ಶಿವಲಿಂಗಾಯ ನಮಃ ॥...



# ಹತ್ತನೆಯ ಸಂಧಿ ಪ್ರಾರಂಭ





**ಸೂಚನೆ:—**

ಜಾತ್ಯಂಧನಂ ತನ್ನ ಸನ್ನಿಧಿಯೊಳಿರಿಸಿಕೊಂ-
ಡತ್ಯಂತಕೃಪೆಯಿಂದ ಸಲಹಿ ಸಂಗೀತಪಾಂ-
ಡಿತ್ಯದಿಂ ಜನಹಿತಂ ಗೈವಂತೆ ಮಾಡಿದಂ ಶ್ರೀಕುಮಾರಚರೇಂದ್ರನು ॥

ಕರೆದೊಡೋ ಎಂಬ ನಿನ್ನಂ ಮರೆದೆನೆಲೆ ದೇವ
ಶರಣುಹೊಕ್ಕವರನೊಲವಿಂ ಪಾಲಿಸುವ ನಿನ್ನ-
ಚರಣಮಂ ನೆನೆಯದಪರಾಧಿಯಾಗಿರುವೆನೆಲೆ ದೇವ ಕರುಣಾಬ್ಧಿಯೆಂಬ
ಬಿರಿದುಳ್ಳ ನಿನ್ನತುಲಮಹಿಮೆಯಂ ಕೇಳ್ದು ಮ-
ಸ್ಥಿರವಿರಸಭೋಗಗಳ ಬೆಂಬತ್ತಿ ಕೆಟ್ಟೆನಾಂ
ಮರುಳಹಂಕಾರಿಯೆನ್ನೊಳ್ಸಗುಣಗಳನರಸಬೇಡ ಪೊರೆ ನಂದಿನಾಥ ॥ ೧ ॥

ಒರೆವೆ ನಾನಿನ್ನೊಂದು ಶ್ರೀಕುಮಾರೇಶ್ವರನ
ಚರಿತೆಯನು ಕಾಡಶೆಟ್ಟಿಯಹಳ್ಳಿಯೆಂಬಲ್ಲಿ
ವರಚರಂತಿಯ ಮಠದ ಗುರುಪಾದನಾಮಕ ಪವಿತ್ರಮಾಹೇಶ್ವರನಿಗೆ
ಗುರುಬಸವ ಗದ್ದಿಗಾರ್ಯರೆನಿಪ್ಪ ಮಕ್ಕಳೀ-
ರ್ವರು ಹುಟ್ಟುಗುರುಡರಾಗಿರ್ದರಣ್ಣನಿಗೆ ಪ-
ನ್ನೆರಡನುಜಗೊಂಬತ್ತು ವರ್ಷಂಗಳಾಗಿರ್ದವಾಗ ಮನದೊಳು ತಂದೆಯು ॥ ೨ ॥

ಇವರೀರ್ವರಾತ್ಮಜರ್ಜಾತ್ಯಂಧರಾಗಿರುವ-
ರಿವರ ಜೀವನವೆಂತು ಗೌರವದೊಳಾದಪುದು
ಶಿವಶಿವಾ ಮುಂದೇನುಪಾಯಮಂ ಮಾಳ್ಪುದೀ ಸುತರಿಗೆಂದಾಲೋಚಿಸಿ
ಶಿವಯೋಗಿವರ ಕುಮಾರೇಶನೆಡೆಗೈತಂದು
ಕುವರರಂ ತೋರಿ ಮಹನೀಯ ಜಾತ್ಯಂಧರಿಹ
ರಿವರೆನ್ನ ತನುಜರಿಂತೊಗೆದಿರ್ಪರ್ಕೈ ಪುರಾಕೃತಕರ್ಮದಿಂ ಚರೇಂದ್ರ ॥ ೩ ॥

ಬೇರಿವರ ಹೊರತೆನಗೆ ಸುತರಿಲ್ಲ ತಮ್ಮಪದ
ಕಾರುಣ್ಯದಿಂ ಕೊರತೆಯಿಲ್ಲಮುಪಜೀವನಕೆ
ವೀರಮಾಹೇಶ್ವರ ಕುಮಾರಕರ್ ಶ್ರೀಕುಮಾರೇಶ್ವರರನುಗ್ರಹದೊಳು
ಗೌರವದ ಜೀವನವ ಪಡೆಯಬಹುದೆಂದೆಳಸಿ
ಚಾರುಚರಚಕ್ರವರ್ತಿಯೆ ನಿಮ್ಮ ಸನ್ನಿಧಿಯ
ಸೇರಿದೆನಿವರ್ಗಾಶ್ರಯವನು ಕರುಣಿಪುದೆಂದು ಸುತರನೊಪ್ಪಿಸಿದನವರ್ಗೆ ॥ ೪ ॥

ಕರುಣದಿಂದಾ ಕುಮಾರರಿಗಾಶ್ರಯವನಿತ್ತು
ಕರೆದುಕೊಂಡಾವಗಂ ಪಿಂದೆ ಪರಿಪೋಷಿಸು-
ತ್ತಿರೆ ಕಾಲಕರ್ಮದಿಂದಳಿದನಾ ಗುರುಬಸವನೆಂಬ ಪಿರಿಯಂ ರುಜೆಯೊಳು
ಹರನ ಮಾನಸಕೆ ಬರಲಿಲ್ಲಮಿವನೆಂದು ಬಲು
ಮರುಗಿದಂ ಮಾಳ್ಪುದೇಂ ಗದ್ದಿಗಾರ್ಯನನು ಕನಿ-
ಕರದಿಂದ ಪೋಷಿಸುತ್ತವಗೆ ಶಿವಧರ್ಮಮಂ ಕಲಿಸಲಾರಂಭಿಸಿದನು ॥ ೫ ॥

ಇವನು ಕಲಿಯುದೆ ಸ್ವಲ್ಪಹಾಡುತಿರ್ದುದರಿಂದ-
ನಿವಗೆ ಸಂಗೀತವಲ್ಲದೆ ಬೇರೆ ವಿದ್ಯೆಗಳಿ-
ಸುವದಸಂಭವನೆಂದು ಬಗೆದು ತಂಜಾವುರದ ಸಂಗೀತನಿಪುಣರಿಂದ
ತವೆ ಮೂರುತಿಂಗಳುಂ ಪೇಳಿಸಿ ಬಳಿಕ್ಕ ಶ್ರೀ
ಶಿವಯೋಗಿಸರ್ಕರೆ ಶಿರಾಳಕೊಪ್ಪದ ಗಾಯ-
ನವಿಪಗ್ಗ ಗದ್ದಿಗಾರ್ಯನ ಬಳಿಯೊಳೆಂಟು ಬರಿಸಂಬರಂ ಪೇಳಿಸಿದನು ॥ ೬ ॥

ಮಾಸಕಿಪ್ಪತ್ತೈದು ರೂಪಾಯಿಯಂತೆ ಬಿಡ-
ದಾ ಸುಗಾನಜ್ಞಗೇಣ್ಬರಿಸಮುಂ ಕೊಡುತ ಮೇ-
ಣ್ಪೇಸರಿಯದವಗೆ ಪ್ರತಿವರ್ಷಮಿನ್ನೂರು ರೂಪಾಯಿ ಬಹುಮಾನಗಳನು
ಲೇಸುಮಿಗೆ ನೀಡಿಬಳಿಕಲ್ಲಿಂದ ಮುಂದೊಲಿದು
ಮೈಸೂರಿಗಟ್ಟಿ ವಿಖ್ಯಾತಪಂಡಿತರೊಳ-
ಭ್ಯಾಸಮಂ ಮಾಡಲನುಕೂಲಿಸಿದನುತ್ಸಾಹದಿಂದಲ್ಲಿ ಪೇರ್ಮೆ ವೆತ್ತು ॥ ೭ ॥

ಕಲಿಯಲೆಲ್ಲಿರ್ದಡುಮಿವಂಗಾವುದುಂ ಕೊರತೆ-
ಯಲಪುಗಳ್ಬಾರದಂ ತನ್ನಧನ-ವಸನ-ಜನ-
ಗಳ ಸಹಾಯವನಿತ್ತು ಕಲಿಪರಿಷ್ಕಾರ್ಥಮುಂ ಪದಪಿನಿಂ ಪೂರ್ಣಗೊಳಿಸಿ
ಅಲಸಪಾಗಾಗ ಮರೆಯದೆ ಸಮಾಚಾರಮಂ
ತಿಳಿದು ತಿಳಿಸುತ್ತೋಲೆಯಿಂ ಪಡೆವತಾಯ್ತಂದೆ-
ಗಳಿಗಿಂದಧಿಕವೆನಿಸಿ ಯತಿಸಾರ್ವಭೌಮನಖಿಲಾನುಕೂಲಂ ಗೈದನು ॥ ೮ ॥

ಕಲಿಯಲಾ ಮೈಸೂರೊಳಿರ್ದ ಕಾಲದೊಳಿವಂ
ಗೊಲಿದೀ ಚರಾಧಿಪಂ ಪಂಚಾಕ್ಷರಾರ್ಯನೆಂ-
ಬಲಘುನಾಮವನಿಟ್ಟು ಕರೆದನಖಿಲಪ್ರಮುಖರೊಪ್ಪಿ ನಲಿದಾಡುವಂತೆ
ತಿಳಿಯಲಿವನಭ್ಯಾಸಕಾಗಿ ಯೀ ಯತಿವರಂ
ಬಳಸಿದಂ ದ್ವಾದಶಸಹಸ್ರ ರೌಪ್ಯಕಗಳಂ
ನೆಲದೊಳಿಂತಂಗವಿಕಲರಿಗುದಾರಾಶ್ರಯವನೀವವರ್ಸ್ಥಿರಳರಸ್ತೇ? ॥ ೯ ॥

ಈತಂ ಪ್ರಸಿದ್ಧ ಸಂಗೀತಪಂಡಿತನಾದ-
ನೀತಗಿಷ್ಟ ವಿವಾಹವಿಚ್ಛೆಯಂ ತಿಳಿದು ಪರಿ-
ಪ್ರೀತಯುತಿಪತಿ ಕುಮಾರೇಶ್ವರಂ ಮೆಲ್ಲನೈ ಪಂಚಾಕ್ಷರಾಖ್ಯನಿಪುಣ
ನೀತಿ-ಧರ್ಮಗಳನಾಚರಿಸಿ ಮಾನವನಿವಹ-
ಕೋತುನೆರವಾಗಿ ಸತ್ಕೀರ್ತಿಯಂ ಪಡೆಯಲೆಂ-
ದೈತಂದೆನೀ ಭೂತಲಕ್ಕಿಲ್ಲವೇ ಬೇರೆ ಮತ್ತೇನು ತಿಳಿಪು ನೋಡು ॥ ೧೦ ॥

ಎಂದೆಂದಿಗುಂ ವಿವಾಹ ವಿತೃಷ್ಣನಿರುವೆ ನೀ-
ನೆಂದು ನಂಬಿರ್ದ್ದವೆಳೆ ನಿನ್ನೀವಿಷಯಕಾಂಕ್ಷೆ
ಯೆಂದು ತಿಳಿಪುದು ನಮಗೆ ಶಿವಶಿವಾ ನಿನಗೊರೆವೆನಿನ್ನೆ ಪರಮಪದ ಬಗೆಯ
ಮುಂದನಾಗುವದುಚಿತವೇ ವಿಚಾರಿಸು ಮನದೆ
ಮುಂದೀ ವಿವಾಹದಾಶೆಯನುಳಿದು ವೈರಾಗ್ಯ-
ದಿಂದ ವಿಧಿವದಧೀತನಾಗಿ ಲಿಂಗಾರ್ಚನೆಯ ಸುಖಮೊಳಿಪುದೊಳಿತಲ್ಲವೆ ॥ ೧೧ ॥

ಮಡದಿಯೊಳ್ತನ್ನಾತ್ಮಸುವಿಚಾರಶಕ್ತಿಯಂ
ಪಿಡಿಯಬೇಕಾದ ಲೋಕೋದ್ಧಾರ ವೃತ್ತಿಯಂ
ಬಿಡದೊತ್ತೆಯಿಟ್ಟು ಹೊಟ್ಟೆಯಪಾಡಿಗಾಗಿ ಕಂಡವರಲ್ಲಿ ತಲೆತಗ್ಗಿಸಿ
ನಡೆಕೊಂಬುದಾವ ಜಾಣ್ತನಮವಳೊಳಿನಿತಿಂಪು
ಪಡೆವೆ ಲೌಕಿಕರಿಗಾದನುಭವವನಾಲಿಸೈ
ಕೆಡಬೇಡ ಸಂಸಾರದನುತಾಪಮಂ ಪೇಳ್ವ ಶಾಸ್ತ್ರಮಂ ಕೇಳಿಲ್ಲವೇ ॥ ೧೨ ॥

ನೀನು ಜಾತ್ಯಂಧನಂಗನೆಯರೊಲಿವುದು ಕಷ್ಟ-
ಮಾನುಕೂಲ್ಯವೆ ವಿಷಯಸುಖ ಹೇತುವಾಗಿಹುದು
ಜ್ಞಾನಿಗಳ್ತತ್ಸುಖಂ ದುಃಖಮಿಶ್ರಿತವೆಂದು ಕ್ಷಣಿಕಮೆಂದೊರೆವುತಿಹರು
ನೀನೇಕದಂಬಯಸಿ ಬೇಡಿ ಬೆಂಡಾಗುವೆಯೊ
ಮಾನಸಂ ಪರಿಶುದ್ಧಮಿಹುದು ನಿನ್ನದು ಸಕಲ-
ಮಾನವರೊಳತಿಯಶೋವಿಭವದಿಂ ಮೆರೆವೆ ಭೂಷಣವೆ ನಿನಗೀದುರಾಶೆ ॥ ೧೩ ॥

ತನಗಪ್ಪಜಯಮಂ ನಿರಾಕರಿಸಿ ನೀಚಲಘು-
ತನವನವಲಂಬಿಸುವರುಂಟೆ? ಗುಣಧರ್ಮದಿಂ
ವಿನುತಬಹುದೇಶ ಮಾನ್ಯತ್ವಮುಂ ಶಿವಲಿಂಗಪೂಜಾನುಭವಸೌಖ್ಯವು
ಮನವಾರೆ ದೊರೆಯಲಸುವಾಗಿ ನಿಂದಿರುತಿರ್ಪ
ನಿನಗೆಂತು ವಿಷಯಾಭಿರತಿಯಾದುದೋ ಪೊಸತಿ-
ವಸುರೋಧವಿರಲಿ ನಿನ್ನೊಳು ವಿಷಯವಾಸನೆಯ ತಳ್ಳು ಸುವಿಚಾರದಿಂದ ॥ ೧೪ ॥

ವಿಷಯವೊಳು ಸುಖವಿರ್ಪುದೆಂಬುದೇ ಭ್ರಮೆ ಸಕಲ-
ವಿಷಯಭೋಗದೊಳೆರಕವುಳ್ಳ ಜಡಮಾನವಂ
ಭಷಕನೆಲುವಿನೊಳು ರಮಿಸುತಿರುವನೆಂದು ನಿಜಗುಣಯೋಗಿ ಪೇಳಿಲ್ಲವೇ
ವಿಷಯವದು ಕಂಡಾಗ ರಮಣೀಯವಾಗಿ ಮೇ-
ಣ್ವಿಷವು ನೀರಸವಾಗಿ ತೋರ್ಪುದುಂಡಾಗಳೀ-
ವಿಷಯವಾಸನೆ ಸಲ್ಲದಾರಿಗುಂ ಮುಂದರಿದರೊಳ್ಬೀಳ್ದು ಬಳಲುತಿಹರು ॥ ೧೫ ॥

ಅರಸು ಗೌತಮಬುದ್ಧನೇರುಜವ್ವನದಲ್ಲಿ
ಪರೆಯುಡಿನೆಯುಳನೆಳೆಯನಂ ರಾಜ್ಯಮಂ ತೊರೆದು
ಪೊರಮಟ್ಟು ಸುವಿಚಾರಬೋಧೆಯಿಂ ನರರನುದ್ಧರಿಸಲಿಲ್ಲವೆ ಮೊದಲಿಗೆ
ನೆರೆಬ್ರಹ್ಮಚರ್ಯ ಪ್ರಭಾವದೊಳು ಮೆರೆದು ನೀಂ
ಪರಮಗಾಯನಕಳೆಯ ಧರ್ಮಾರ್ಥವೀ ವಸುಂ-
ಧರೆಯೊಳ್ಪ್ರಸಾರಮಂ ಮಾಡಲಾಗದೆ ಮಂಕ ಮದುವೆಯೊಳು ಲೇಸಾವುದು ॥ ೧೬ ॥

ಹಸಿಯು ಜಗಲಿಯೊಳು ಘುಳ್ಳಿರ್ದ ವೇಳೆಯೊಳ್ಗೊಲ್ದು-
ವಸುಧಾಸುರರ್ಸ್ವಾನಧಾನವೆಂದುಲಿಯಲಾ
ಶಿಸುಪಮಂತ್ರದ ಭಾವವರಿದು ಮದುವೆಯನುಳಿದು ರಾಮದಾಸಸ್ವಾಮಿಯು
ಒಸೆದಾತ್ಮಸಿದ್ಧಿಯಿಂ ತಪೆ ಲೋಕಸಂಗ್ರಹವ-
ನೆಸಗಿ ತಾತ್ವಿಕವಿಚಾರಗ್ರಂಥಮಂ ಬರೆದು
ಪೆಸರಾಂತು ಕಲಿಶಿವಾಜಿಗೆ ಮಹಾಗುರುವಾಗಿ ಪಡೆಯಲಿಲ್ಲವೆ ಶಾಂತಿಯ ॥ ೧೭ ॥

ನೀನೋರ್ವನಾ ಮದುವೆಯಾಗದೊಡೆ ಲೌಕಿಕಕೆ
ಹಾನಿಯೇ ಶಾಸ್ತ್ರಮೊಪ್ಪುವ ಗೃಹಸ್ಥಾಶ್ರಮಕೆ-
ನ್ಯೂನತೆಯೆ ಜಗವನಾಳುವ ಮಹಾದೇವಗಪಮಾನವೇ ನಿನಗಾಗಿಯೇ
ಮಾನಿನಿಯದಾವಾಕೆ ನೋಂಪಿಯಂ ನೋಂತಿಹಳು
ಸೂನುಗಳವರ್ಯರ್ವೋ ತ್ಸದ್ರಾಜ್ಯಪಟ್ಟಕ್ಕೆ
ಮೀನಕೇತನ ಸುಖದ ಸುಗ್ಗಿಯೊಳು ರಮಿಸಲೆಂಬೊಂದೆ ನಿನ್ನಾಶೆಯಲ್ತೇ ॥ ೧೮ ॥

ಭೋಗಲಾಲಸೆಯಿಂದ ಪಿಂದೆ ಶರಣರು ಮದುವೆ-
ಯಾಗಲಿಲ್ಲಂ ಮದುವೆಯಾದ ಸತಿಯರಿಗೆ ಶಿವ-
ಯೋಗಮಂ ಕಲಿಸಿ ತಮ್ಮಂತವರನುಂ ತಿದ್ದಿ ಶಿವಸುಖವನುಂಡರು ಗಡ
ಈಗಳಂತಹ ಪ್ರಸಂಗಮದಿಲ್ಲ ನಿನಗೆ ಬಹು-
ಭಾಗ ಪುಣ್ಯಪ್ರವೃತ್ತಿ-ಯೊಳಿರುವೆ ಮದುವೆಯಿಂ-
ದಾಗದು ಸೊಗಂ ಕೇಳು ಸರ್ವಥಾ ದುಃಖಮಂಕೊಡುವದದು ಬೇಡ ಮಗನೆ ॥ ೧೯ ॥

ಆರಿಗುಂ ಪಾಶವೀವೃತ್ತಿಯದು ಸರಿಯಲ್ಲ
ಧಾರುಣಿಯೊಳುರುಗೃಹಸ್ಥಾಶ್ರಮಿಗಳಾದೊಡಮ-
ನಾರತಂ ದಂಪತಿಗಳನ್ಯೋನ್ಯರಂ ಕಾಮವೃತ್ತಿಯಿಂದಂ ನೋಡದೆ
ಸಾರಗುಣಮಾಜೀವ ಹಿತಮಿತ್ರರೆಂದು ಮುದ-
ವೇರಿ ನೋಡುವವೆಂದು ಗಾರ್ಹಸ್ಥ್ಯಮುಳಿವುತಿರೆ
ಮಾರಸುಖಕಾಗಿ ಜಾಣರ್ಸ್ಪೃಹಿಸುವದಿದಚ್ಚರಿ ಶಮಿದಮಿಗಳ ಪಡೆನೀ ॥ ೨೦ ॥

ಇಂತೆಂದು ಪಲವುಬಗೆಯಿಂ ಪೇಳಲೀ ಮಹಿಮ-
ನಂತಸ್ಥಮಂ ತಿಳಿದು ಶಿವಶಿವಾ ಮದುವೆಯಂ
ಚಿಂತಿಪರಿಗನುಕೂಲಮಾಗುವ ಕುಮಾರೇಶನೆನಗೆ ಬೇಡೆಂದೊರೆವನು
ಭ್ರಾಂತಿಯಂ ಬಿಟ್ಟು ಸದ್ಧರ್ಮದಿಂ ಬಾಳ್ದು ಶಿವ
ಶಾಂತಿಯಂ ಪಡೆಯಲೆಂದೆನಗಾಗಿ ಬೋಧಿಪಂ
ಸಂತಸಮಿದೆನಗೀ ಮಹಾತ್ಮನೇ ಸದ್ಗುರುವರೇಣ್ಯನಿದು ಸತ್ಯವೆಂದು ॥ ೨೧ ॥

ಪುಳಕಾಂಕುರಂ ಮಿಸುಗೆ ಪಂಚಾಕ್ಷರಾಹ್ವಯಂ
ತಳುವದೇಕ್ಷ್ವತಿಭಕ್ತಿಯಿಂ ಗುರುವೆ ಮನ್ಮನದ
ಮಲಿನಮಿದು ನಿನ್ನ ಸುಖ ಬೋಧಾಮಲಾಂಬುವಿಂ ತೊಳೆದುಳಿಯದಳಿದುದೆನ್ನ
ಸಲಹಿದ್ಕೈ ಹಿಂದೆ ನಾನೆಸಗಿರ್ದಬಹುಜನ್ಮ-
ಗಳ ಪುಣ್ಯದಿಂದು ಕೈಗೂಡಿದುದು ಸಫಲತೆಯ
ತಳೆದುದೀ ಜನ್ಮವಿಂದಿಗೆ ಧನ್ಯನಾದೆನ್ಹೆ ಭಾರತೀಭಾಗಧೇಯ ॥ ೨೨ ॥

ನೀನೆಸಗಿದಾಜ್ಞೆಯಂತಾಚರಿಸುವೆನು ಪೇಳ್ವು-
ದಾವುದದನೆಂದು ಬಿನ್ನೈಸಲ್ಕೆ ಮಗುವೆ ನೀ-
ನಾವಗಂ ಬ್ರಹ್ಮಚರ್ಯಾಶ್ರಮದೊಳಿರು ಲಿಂಗಪೂಜೆಯಂ ಮಾಡು ಮುದಿಯಂ
ಭಾವದೊಳು ಬೇರೊಂದನಾಶಿಸದೆ ಸ್ವಸಮಾಜ
ಸೇವೆಯಂ ಮಾಡು ಕುಲಜಾತಿಪಂಥವನೆಣಿಸ-
ದೀ ವಿವಿಧವಾದ್ಯಂಗಳಂ ಗಾನಮಂ ಕಲಿಸು ಧರ್ಮಾರ್ಥವಾಗಿ ಬಿಡದೆ ॥ ೨೩ ॥

ಪೇಳು ಕೀರ್ತನಪುರಾಣಂಗಳಂ ಪದೆದು ನೀಂ
ಪೇಳಿಸು ಸುಧಾರಿಸಿದ ನಿನ್ನ ವಿದ್ಯಾರ್ಥಿಗಳ
ಜಾಲದಿಂ ದೇಶದೊಳು ಧರ್ಮಪ್ರಸಾರಮಂ ಮಾಡಿಸುತ್ತಿರು ನಿರುತವು
ಕಾಲುಕೈಕಣ್ಣಿಲ್ಲದ ಬಡವರಿಗೆ ನೀನು
ಕೂಳುಬಟ್ಟೆಯನಿತ್ತು ಸಂಗೀತಮಂ ಕಲಿಸಿ
ಲೋಲದಿಂ ಜೀವನಕೂಲಮಪ್ಪಂತೆ ಮಾಡು ಕಾರುಣ್ಯದಿಂದ ॥ ೨೪ ॥

ಗುರುವಿರಕ್ತಪ್ರಮಥರೊಳು ನಿನ್ನ ಪೂಜ್ಯಮತಿ-
ಯಿರಲಿ ಗುರುವಿರತರೊಳು ಸುಪ್ರೇಮದಿಂ ಬಾಳು
ಗುರುವಿರಕ್ತರ ಕಲಹಮೊಳಗೊಂದು ಪಕ್ಷಮಂ ಪೊತ್ತು ಹೋರಾಡಬೇಡ
ಪರಶಿವನ ಧರ್ಮಮಂ ಬೆಳೆಸು ಶಿವಯೋಗಮಂ-
ದಿರದ ಗೊಡವೆಗೆ ಹೋಗಬೇಡ ಬೇರಿಹರವರ
ಹಿರಿಯರ್ಕೆ ನಿನಗವರ ಸಂಬಂಧಮಿಲ್ಲ ನಿನ್ನೀ ಸಂಸ್ಥೆಯಂ ಸಾಗಿಸು ॥ ೨೫ ॥

ನಿನ್ನೀಮಹಾಸಂಸ್ಥೆಯೊಳು ಸರ್ವವಿದ್ಯೆಗಳು
ಸನ್ನಿಯೆನೆ ಸಾಗಿಮೊಡೆ ವಿಶ್ವವಿದ್ಯಾಲಯವಿ-
ದೆನ್ನಿಸದೆ ಪೋಪುದೇ ಯತ್ನಮಂ ಮಾಡು ಶಿವಕೃಪೆಯಿರ್ದೊಡಮಸಾಧ್ಯವೇ ?
ಸನ್ನುತ ಶ್ರೀವೀರಶೈವರೊಳ್ಧಾನಸಂ-
ಪನ್ನರಿಹರವರಲ್ಲಿ ಭಿಕ್ಷೆಯಂ ಬೇಡು ನಿನ-
ಗಿನ್ನು ನಾಣ್ಚೆದರಿಕೆಗಳೇಕೆ ನಿನ್ನುಪಜೀವನಾರ್ಥಮೆಸಗುತ್ತಿರ್ಪಿಯಾ || ೨೬ ||

ನಡಿಸು ಪೇಳ್ದೀವಿಷಯಗಳನು ಕೈಬಿಡಬೇಡ
ಕೊಡದಿರಂ ನಿನ್ನ ಕಾರ್ಯಕೆ ಜಯಮನೀಸರಂ
ಪಿಡಿಯಬೇಡಾತ್ಮದೊಳು ಕೀರ್ತಿಪುಣ್ಯಾದಿಫಲಕಾಂಕ್ಷೆಯಂ ಮದಿಸಬೇಡ
ಪೊಡವಿಯೊಳಿದೆನ್ನ ಕರ್ತವ್ಯವೆಂದರಿದು ನಡೆ
ಮುಡಿ ಮೂರುಕರಣಂಗಳಿಂದಿದೇ ಸನ್ಮಾಜ್ಞೆ
ಜಡಜೀವನದೊಳಿನಿಸು ಸ್ಫುರಿಸಲ್ಲಿ ಶಕ್ತಿವಂಚನೆ ಬೇಡವೆಂದೊರೆಯಲು || ೨೭ ||

ಆಗಲ್ಕೆ ಗುರುದೇವ ಮಾಡುವೆನು ನಿರ್ವಿಘ್ನ-
ವಾಗಿ ಕೊನೆಗಾಣಿಸುವಕೃಪೆ ನಿಮ್ಮದೆಂದಡಿಗೆ
ಬಾಗಿ ಪೊರಮಟ್ಟು ಧರ್ಮಾರ್ಥವೃತ್ತಿಯಿಂದೆಲ್ಲ ಕುಲದ ವಿದ್ಯಾರ್ಥಿಗಳಿಗೆ
ರಾಗದಿಂದಾಶ್ರಯವನಿತ್ತು ವಂಚನೆಯಿಲ್ಲ-
ದಾಗಳುಂ ಗಾನಮಂ ನಿಖಿಲನಾದವನನುಪ-
ಯೋಗಮೆನೆ ಕಲಿಸುತಿರ್ಪಂ ಕರುಣದಿಂ ತನ್ನಮುಕ್ಕಳಂತವರನಿಂದು || ೨೮ ||

ನೂರಾರುಮಂದಿ ನಿರ್ಗತಿಕ ವಿದ್ಯಾರ್ಥಿಗಳ-
ನಾರತಂ ಕಲಿಪವರವರೆಲ್ಲರಿಗೆ ಬಿಡದೆ ಘನ
ಕಾರುಣ್ಯದಿಂದೂಟಮಂ ಮಾಡಿಸುವನು ಮೇಣ್ಬರುಡ-ಕುಂಟರಿಗೆ ತನ್ನ
ಜೀರ್ಣವಿದ್ಯಾರ್ಥಿಗಳ ನೆರವುಗೊಡುವಂ ದುರಾ-
ಚಾರಕಿನಿಸೆಡೆಯಾಗದಂತಿರಿಸಿಕೊಂಬನುಪ
ಚಾರಪೂರ್ವಕಮೌಷಧಂ ಗೊಡಿಸುವಂ ಬೇನೆಬಂದೊಡವರಿಗೆ ವೈದ್ಯರಿಂ || ೨೯ ||

ಪೇಳುವಂ ಕೀರ್ತನಪುರಾಣಂಗಳಂ ಮತ್ತೆ
ಪೇಳಿಸುತ ನಿಜಶಿಷ್ಯರಿಂದೆಮ್ಮ ಧರ್ಮಮಂ
ಮೇಳಿಸೆ ಸುಧಾರಿಪಂ ದಿನದಿನಂ-ಪರಿಶುದ್ಧವಾಪಮಡಿಯಿಂ ತಪ್ಪದೆ
ಕಾಲದ್ವಯದೊಳು ಲಿಂಗಾರ್ಚನೆಯ ನೆಸಗುವಂ
ಪಾಲುಮೊದಲಾದ ಪಂಚಾಮೃತಗಳಿಂ ದಿವ್ಯ
ಶೀಲನೆಂದೆನಿಸಿ ಸುಪ್ರೇಮಿಯಾಗಿರುವನೀ ಗುರುವಿರಕ್ತರ ಸಭೆಯೊಳು ॥ ೨೦ ॥

ಇವನ ಗಾಯನಕಲಾಪ್ರೌಢಿಮೆಗೆ ಮೆಚ್ಚಿ ಕೆಲ-
ಯುವತಿಯರು ಮೇಲ್ವಾಯ್ದು ರತಿಚೇಷ್ಟೆಯಿಂ ಕರೆಯ-
ಲವರ ಮಾಯಾಮೋಹಜಾಲದೊಳು ಸಿಲುಕಲಿಲ್ಲಂ ಜವ್ವನದ ಭರದಲಿ
ಬವರಪೆಪೆಯನ ಬಿನದಕೊಳಗಾದ ಗುರುಚರಪ-
ದವನು ಪೂಜಿಸಲೊಡಂಬಡದಿರ್ದ್ದನಿದು ಮಹಾ-
ಶಿವಯೋಗಿವರ ಕುಮಾರೇಶ್ವರನ-ಪಾದಕರುಣಪ್ರಭಾವವೆ ತಿಳಿಯಲು ॥ ೨೧ ॥

ಗುರುಕುಮಾರೇಶನಂ ಪಳಿವವಂ ಘನಜಗ-
ದ್ಗುರುವಿರಲಿ ದೊರೆಯಿರಲಿ ವಿದ್ವಾಂಸಮೌಳಿಮಣಿ-
ಯಿರಲಿ ಭೂಮಿಯೊಳವಂ ಪಗೆಯಿವಂಗೀತಂ ಪ್ರಮುಖನಿಂದೆಯಂ ಕೇಳದೆ
ಗುರುವಿರಕ್ತರ ಸನ್ನಿಧಿಯೊಳು ಪ್ರಮಥರ್ಕಳಂ
ಪರುಷದಿಂ ಪಾಡುವಂ ಭಯವಿಲ್ಲನಾರದುಂ
ಪರಶಿವನ ಹಂಗಲ್ಲದೀತಗನ್ಯರದಿಲ್ಲ ಸರ್ವಾನುರಾಗಿಯಿಹನು ॥ ೨೨ ॥

ಈ ನಮ್ಮ ಕರ್ನಾಟಕದೊಳಿರುವ ಪೆಸರಾದ
ಗಾನಪಂಡಿತರೆಲ್ಲಿರುವರಿವನ ಶಿಷ್ಯರ್ಕಳೆನ-
ಲೇನೊಂದು ಸಂದೇಹವಿಲ್ಲ ಪುಟ್ಟಾರ್ಯನೆಂಬೋರ್ವ ಜಾತ್ಯಂಧಗವನು
ಸಾನುರಾಗದೆ ದಕ್ಷಿಣಾದಿ-ಹಿಂದುಸ್ತಾನ
ಗಾನ ಕುಶಲತೆಯನುಂ ಪೆಟ್ಟಿಗೆಯ ಜಾಣ್ಮೆಯಂ
ನಾನಾತರದ ವೀಣೆಮೊದಲಾದತಂತಿಗಳ ವಾದನಂಗಳನು ಕಲಿಸಿ ॥ ೨೩ ॥

ಬಳಿಕಂಧರಕ್ಷರವನೋದಲುಂ ಬರೆಯಲುಂ
ಕಲಿಯಲೆಸಗಿದನು ಸಂಸ್ಕೃತಸುಸಾಹಿತ್ಯ ಸ-
ತ್ಪಾಲೆಯನು ವ್ಯಾಕರಣತರ್ಕಗಳನುಂ ಕವನರೀತಿಯುಂ ಕೀರ್ತನವನು
ಸುಲಲಿತಾಧ್ಯಾತ್ಮಶಾಸ್ತ್ರವನು ವಿದಗ್ಧರಿಂ
ಕಲಿಯಲನುಕೂಲಿಸಿದನಿವನೊಳಾ ಪುಟ್ಟಾರ್ಯ
ನೊಲಿದತಿ ಹಿತೋಪದೇಶಗೈದನಿವನೆ ಮದ್ಗುರೂತ್ತಮನೆಂದು ಮನದೆ ನಂಬಿ ॥ ೩೪ ॥

ಶಕ್ತಿವಂಚಕನಲ್ಲ ವೃತ್ತಿವಂಚಕನಲ್ಲ
ಭಕ್ತಿವಂಚಕನಲ್ಲ ಶಿಷ್ಯೋಪಕಾರಮಂ
ವ್ಯಕ್ತಿಸಿಸೆ ನಾಡಿ ತನ್ನಯ ಕಾರ್ಯಗಳನು ಸಾಧಿಸಿಕೊಳ್ಳನಲ್ಲಮಿವನು
ಮುಕ್ತಿಪ್ರದಾಂಘ್ರಿ ಶಿವಾಜ್ಞಪ್ತಮುನ್ಮುಕ್ತಿಪ್ರಿಯಾ-
ಸಕ್ತಮೂರ್ತಿಯನೊಡಗೊಂಡಿರುವನೀ ದಯಾ-
ಯುಕ್ತಗುರುವರಪದಾನುಗ್ರಹಪ್ರಭೆಯಿಂದ ಪಂಚಾಕ್ಷರಾಖ್ಯನಿವನು ॥ ೩೫ ॥

ಅಲ್ಲಲ್ಲಿ ಗುರುಕುಲಾಶ್ರಮಗಳಿಗೆ ಸಂಸ್ಥೆಗಳಿ-
ಗೊಲ್ಲೆನೆನ್ನದೆ ತನ್ನ ಕೆಲಸ್ತೊಲಗಳಂ ಮಾರಿ
ಸಲ್ಲಿಸಿದನರ್ಥಮಂ ಪರಿಶುದ್ಧನಾದಭಾವದಿಂ ಗುರುಗಳಂ ಬೆಸಗೊಳ್ಳದೆ
ಕಲ್ಲಿದೆಯನಿವನ ಪಡೆವವರ-ಮೊಡಹುಟ್ಟಿದನ-
ಬಿಲ್ಲ ಶಿವಮತವೆನ್ನ ಬಳಗನೆಂದರಿದು ತಾ-
ನುಲ್ಲಾಸದಿಂ ಬಿಡದೆ ಸೇವಿಸುವನಿದುವೆ ಸದ್ಗುರುಸೇವೆಯೆಂದು ನಂಬಿ ॥ ೩೬ ॥

ನಾನೀ ಮಹಾಸಂಸ್ಥೆಯುಂ ನಡಿಸಲೆನ್ನಳವೆ
ತಾನೆ ಸಾಗಿಸುವನಾ ಗುರುಚರಣಾರೇಖನ-
ತ್ಯಾನಂದದಿಂ ಚಿಂತೆಯೇತಕೆನಗದರೇಳಿಳಿತಗಳುಂ ಕರ್ತವ್ಯಮುಂ
ಮಾನಾಪಮಾನಂಗಳಾ ಜಂಗಮನನಿಷ್ಟ-
ವಾನಪ್ಪನವನ ಪ್ರೇರಣೆಯಂತೆ ನಡೆವೆನೆನ
ನೇನೊಂದು ಕೊರತೆಗೊಡದಾಜೀವನಮೆನ್ನನುತೆ ಮಡಿಸಿಕೊಳ್ಳೆಂಬನಿವನು ॥ ೩೭ ॥

ಇಂತು ನೂರಾರುನಿರ್ಗತಿಕ ವಿದ್ಯಾರ್ಥಿಗಳ
ಸಂತತಿಗೆ ವಿದ್ಯಾನ್ನವಸನಗಳ ನೀವುತಂ
ಸಂತಸದೊಳಲ್ಲಲ್ಲಿ ಸಂಚರಿಸುತ್ತೈತಂದನೆಂದಿನಂದದೆ ಗದುಗೆಗೆ
ಶಾಂತಿಯಿಂದಲ್ಲಿ ಕೆಲದಿನವಿರ್ದು ರುಜೆಯಡಸಿ
ಕುಂತುಹರಸಮಗುರುಕುಮಾರನಂ ಧ್ಯಾನಿಸು-
ತ್ತಂತರಿಸಪ್ಪೆಕ್ಯನಾದಂ ಲಿಂಗದೊಳು ಮಹಾತ್ಮರ್ಗ್ಗಾಡಿ ನೋಡಿ ಪೊಗಳೆ ॥ ೩೭ ॥

ನಡಿಸುವ ಪುಟ್ಟಾದೈನೀ ಸಂಸ್ಥೆಯಂ ನಾಡೆ
ಕಡುಭಕ್ತಿಯಿಂದವನ ಗದ್ದುಗೆಯ ಪೂಜೆಯಂ-
ಬಿಡದೆ ತದ್ವಿದ್ಯಾರ್ಥಿಗಳ್ಮಿಂದು ಪ್ರತಿದಿನಂ ಬಹುವಾದ್ಯದೊಡನೆ ಪೋಗಿ
ನಡಿಸುವರು ನಿಖಿಲೋಪಚಾರಪೂರ್ವಕವಾಗಿ
ಪೊಡವಿಯೊಳು ಶಿವಯೋಗಿಗಳ ಕೃಪಾವೈಭವಂ
ಕೆಡದುತ್ತರೋತ್ತರಂ ಬೆಳೆವುತಿರ್ಪುದು ಲೋಕಹಿತವೆನಿಸಿ ಸೊಗಸುಗೂಡಿ ॥ ೩೮ ॥

ಅಂತು ಸಂಧಿ ೧೦ ಕ್ಕೆ ಪದಗಳು ೩೭೪

ಭದ್ರಂ ಭೂಯಾತ್



...॥ ಶ್ರೀ ಕುಮಾರೇಶಾಯ ನಮಃ ॥...



# ಹನ್ನೊಂದನೆಯ ಸಂಧಿ ಪ್ರಾರಂಭ



**ಸೂಚನೆ:—**

ಹೊಳೆಯೊಳಾಳ್ದಿಷ್ಟಲಿಂಗವನು ಹುಡುಕಿಸಿಕೊಟ್ಟು
ಚೆಲುವ ಪಟುವರನ ಪ್ರಾಣವ ಕಾಯ್ದು ಧರ್ಮವಂ
ಬೆಳೆಸಿ ಕಾರ್ಯದೊಳು ಮುಂಬರಿದು ಜಸಮಂ ಪಡೆದನೀ ಕುಮಾರಚರೇಂದ್ರನು ॥

ನೆಲಮೊಳ್ಪ್ರಯೋಜನದ ಹೊರತು ಮೂರ್ಖರು ಸಹಿತ
ಕೆಲಸಮಂ ಮಾಡರಿಂತಿರೆ ಶಾಸ್ತ್ರಪಂಡಿತರು
ಫಲವು ಭೋಗಂಗಳಂ ಬಯಸದ ವಿರಾಗಿಗಳು ನಿನ್ನನೇತಕೆ ಭಜಿಪರೋ
ಮಲಹರನೆ ನಿನ್ನೊಳಂತಹ ಸುಖವದೇನಿಹುದು?
ತಿಳಿಹದಿಹೆ ನಾನೆನಗದಂ ತಿಳಿಪವರ ಸಂಗ-
ದೊಳು ಬಾಳ್ವ ಮನವಿತ್ತು ನಿನ್ನ ನೆನವಿನೊಳಿರಿಸಿ ಕಾಪಾಡು ಚಂದ್ರಚೂಡ ॥೧॥

ಈಶಭಕ್ತರ್ಗೆ ಧರ್ಮೋಪದೇಶವ ಮಾಡು-
ವಾಶೆಯಿಂ ದೇಶಮಂ ಸಂಚರಿಸುತೊಮ್ಮೆ ಕೆಲ-
ದೇಶಿಗರನೊಡಗೊಂಡು ಹಂಪಸಾಗರನೆಂಬ ಗ್ರಾಮಕ್ಕೈತಂದು ಪದೆದು
ಲೇಸು ವಿಗೆ ಸಭೆಗರೆದು ಪ್ರತಿದಿಸಂ ತಕ್ಕ ಶಿವ
ಶಾಸನದ ಮರ್ಮಮಂ ಬೋಧಿಸುತ್ತಿರಲೊಂದು
ವಾಸರದೊಳೀ ಕುಮಾರೇಶ್ವರನ ಪರಿಜನಂ ಪಗಲು ಸ್ನಾನಾರ್ಥಮಾಗಿ ॥ ೨ ॥

ಪರಿತಂದುದಾಗ್ರಾಮದೊತ್ತಿನೊಳು ಸೊಬಗಿನಿಂ
ಪರಿವುತಿಹ ತುಂಗಭದ್ರಾತರಂಗಿಣಿಗದರ
ಸುರುಚಿರತೆಯಂ ಬಣ್ಣಿಸಲ್ಸಾಲ್ಗುಮೇ ಹರಿಹರಾದಿ ಕವಿಗಳಿಗಲ್ಲದೆ
ಇರುವೆಗಳು ಮುತ್ತುವಂತಹ ಸ್ವಾದಮುಳ್ಳಸುರ
ಪರಿಕರಂ ಬಯಸುವಂತಿರ್ಪ ನಿರ್ಮಲಶೀತ
ಪರಿಮಳಜಲಂಗಳಿಂ ಪರಿಶೋಭಿಸಿರ್ದತ್ತು ಪ್ರಾಣಿಗಳ್ಗಮೃತಮೆನಿಸಿ ॥ ೩ ॥

ಮನಕೆ ಬಂಪಲ್ಲಲ್ಲಿ ನಿಂದು ತತ್ಪರಿಜನಂ
ಮಿನಿವುತಂ ಪಂಜಿ ಪಾವುಡ ವಸನ ಕೌಪೀನ-
ವನು ತೊಳೆವುತಂ ದಂತಧಾವನಂ ಗೈವುತಂ ಸ್ನಾನಮಂತ್ರವ ಜಪಿಸುತ
ಬಿನದಿಸುತ ನಗುತ ಜಲದೊಳು ಮುಳುಗುತೇಳುತ್ತ
ಘನಸಂಭ್ರಮದೊಳಾಡುತಿರಲವರೊಳೋರ್ವ ಪಾ-
ವನವಟುವರಂ ಮಿಂದು ಮಡಿಯುಟ್ಟು ಲಿಂಗಾಂಬರವನೊಲಿದು ಕೊಳೆಯಲೆಳೆಸಿ॥ ೪ ॥

ಒಂದು ಪಿರಿಯ ಪ್ರವಾಹದೊತ್ತಿನೊಳು ಕುಳಿತು ಕೊರ-
ಳಿಂದ ವಸ್ತ್ರವ ತೆಗೆದು ಬಿಚ್ಚುತಿರೆ ಕೈತಪ್ಪಿ
ಸುಂದರ ನಿಜೇಷ್ಟಲಿಂಗಂ ಬೀಳ್ದುದಾನೀರ ಸೆಳವಿನೊಳು ತಟ್ಟನಿರದೆ
ಅಂದೋಹೊ ಮಜ್ಜಿಂಗವುದಕದೊಳ್ಕೆಡೆದುದಕ-
ಟೆಂದು ಹಾಹಾರಿ ನೀರೊಳು ಪೊಕ್ಕು ತಡಬಡಿಸು
ತೊಂದಿನಿಸು ಬಿಡದೆ ಪುಡಕಲು ದೊರೆಯದಿರಲಳುತ್ತಿರಚಿವಂ ಭೀತಿವಟ್ಟು ॥ ೫ ॥

ಸೆಂಗಡಿಗರಾ ಭಯಾರ್ತ ಸ್ವರಂಗೇಳ್ವೊಡನೆ
ಪಿಂಗದೋಡುತ್ತಲ್ಲಿಗೈತಂದು ತಿಳಿದು ತ-
ಲ್ಲಿಂಗಮಂ ಸರ್ವರುಂ ಮನಮುಟ್ಟಿ ವಿಶ್ವಪ್ರಯತ್ನದಿಂ ಪುಡುಕಿ ಸಿಗದೆ
ಕಂಗೆಟ್ಟು ಬಾಯಾರಿ ಶಿವಶಿವಾ ಪೂಜ್ಯ ವಟು-
ಪುಂಗವಗೆ ಗತಿಯೇನೆನುತಲ್ಲಿ ಹಲಬುತಿರೆ
ಜಂಗಮಾಗ್ರಣಿ ಕುಮಾರೇಶನೀ ವಾರ್ತೆಯಂ ಕೇಳ್ದು ಧೃತಿಗೆಟ್ಟು ನಿಲದೆ ॥ ೬ ॥

ಊರ ಪಿರಿಯರನೊಡಂಗೊಂಡಾಕ್ಷಣಂ ಪೊಳೆಗೆ
ಘೋರನೈತಂದು ತದ್ವಟುವನುಂ ಲಿಂಗಮದು
ನೀರಿನೊಳು ಕೆಡೆದಿರ್ದತಾಣಮುಂ ಕಂಡು ಕೂಡಿದ ಜನದೊಳಾಲೋಚಿಸಿ
ಜೇರಿ ದಾರಿಯನೀಪ್ರವಾಹಕ್ಕೆ ಕೊಟ್ಟೊಡದು
ತೋರದಿರದೆಂದುಸುರಲೊಡನವಂದಿರು ಸಾವಿ-
ರಾರು ಬರಿಜೀಲಮುಂ ತಂದು ಮಳಲಂ ತುಂಬಿ ಜಾಣ್ಮೆಯಿಂ ನಿಟ್ಟಂಗಟ್ಟಿ ॥ ೭ ॥

ಪೊರಳಿಸಿದರಾ ಪ್ರವಾಹವನು ಮತ್ತೊಂದೆಡೆಗೆ
ಪರಿದು ಪೋದುದು ಜಲಂ ಪೊದಲೆಡೆಯನುಳಿದಾಗ
ನೆರೆದೆಲ್ಲ ಶಿವಭಕ್ತರಲ್ಲಿ ಕಣ್ಣಿಟ್ಟು ಪುಡುಕಲು ದೊರೆದುದಾಲಿಂಗವು
ಹರಹರ ಮಹಾದೇವ ಜಯಜಯಃ ಪಾರ್ವತೀ-
ವರಯೆಂದು ಜಯನಿನಾದಂ ಗೈದುತುತ್ಸಾಹ
ವೆರಸಿ ಯತಿವರ ಕುಮಾರೇಶ್ವರನ ಹಸ್ತದೊಳು ಕೊಟ್ಟು ವಂದಿಸಿದರವರು ॥ ೮ ॥

ಒಳಗೀಶ್ವರ ಧ್ಯಾನದೊಳ್ಬೆರೆದು ಬಹಿರಂಗ
ದೊಳು ಲಿಂಗ ಶೋಧನದ ಕಾರ್ಯದೊಳು ತೊಡಗಿದೀ
ಜೆಲುವ ಶಿವಯೋಗಿಯಾ ಜಯನಿನಾದಂ ಗೇಳ್ದು ಕೊಡುವ ಲಿಂಗವನು ನೋಡಿ
ಪುಳಕಾಂಕುರಮದೇಳೆ ಮನದೊಳುತ್ಸಾಹಮುಂ
ತಳೆದವಂ ಕರಕಮಲದೊಳ್ಕೊಂಡು ನೆರೆ ತನ್ನ
ಬಳಸಿ ನಿಂದಿರ್ದಖಿಲ ಭಕ್ತರಂ ಕರುಣಾಕಟಾಕ್ಷದಿಂದೀಕ್ಷಿಸುತ್ತ ॥ ೯ ॥

ಪಗಲಿರುಳೆ ಹಂಪಸಾಗರದ ಮೇಣ್ಕೆಲದಪ-
ಳ್ಳಿಗಳ ಮತ್ತು ಪ್ರವಾಸದ ಸಕಲಪುರುಷರುಂ
ಮಿಗೆ ನಾರಿಯರ್ಕಳುಂ ಬಾಲರು ಪಸಿವು ನೀರಡಿಕೆ ನಿದ್ರೆಗಳ ಮರೆದು
ವಿರಮಿಸದೆ ಪರಿಪರಿಮಹಾಯತ್ನಮಂ ಮಾಡೆ
ದೊರೆದುದಿದು ಮೂದಿನದ ಮೇಲೆ ಶ್ರೀ ಪ್ರಭುವರಂ
ಕರುಣಿಸಿದನೀ ಭಕ್ತಸಂಚಯಕೆ ಭೋಗಮುಕ್ತಿಗಳೀಶನಿಂದಾಗಲಿ ॥ ೧೦ ॥

ಪ್ರಣುತ ಮಾಹೇಶದೀಕ್ಷಾವಂತನೆನಿಸಿದೀ
ಗಣಕುಮಾರಂ ಲಿಂಗಮಂ ಕಳೆದುಕೊಂಡ ಕಾ-
ರಣದಿಂ ಪ್ರಸಾದಮಿಲ್ಲದೆ ಸಾವನೆಂದು ಬಗೆದೆಮ್ಮೀ ಸಮಾಜವರು
ಕ್ಷಣವಾದಡುಂ ಬಿಡದೆ ನಿಜಧರ್ಮಕಾರ್ಯದೊಳು
ಪಣಿದರಾದರ್ಶಮೆನಲೀವಟೊತ್ತಮಗೆ ಧಾ-
ರಿಣಿಯೊಳ್ಪುನರ್ಜನ್ಮವಾದುದೆಮಗೊದಗಿದುದು. ಪರತರೋತ್ಸವಮಾದೊಡೆ ॥ ೧೧ ॥

ಲಿಂಗಮಂ ಕಳಕೊಂಡಿವಂ ಮಡಿವನೆಂದು ಕೆಲ-
ಲಿಂಗಿಗಳ್ಕರುಣದಿಂ ಜೇರೊಂದು ಲಿಂಗವನಿ-
ವಂಗಿವನ ಲಿಂಗವಿದು ದೊರೆದುದೆಂದೊರೆದು ಕೊಟ್ಟಿರಲಹುದೊ ಜೇರೋರ್ವನ
ಲಿಂಗವೀ ನದಿಯಲ್ಲಿ ಮೊದಲೆ ಬೀಳ್ದಿಂದಿವರ -
ಕಂಗಳಿಗೆ ಕಂಡುದೊರೆದಿಹುದೊ ತಪ್ಪಟುವರಂ
ಲಿಂಗವಿದು ನನ್ನದಹುದೆಂದು ಸುಮ್ಮನೆ ಪೇಳ್ದನೋ ಎಂಬ ಸಂದೇಹವು ॥ ೧೨ ॥

ಜನರ ಮನದೊಳು ಪುಟ್ಟಬಾರದೆಂದಾ ಲಿಂಗ-
ವನು ಕುಮಾರೇಶನಾತಗೆ ಕೊಡದೆ ತೋರಿಸದೆ
ಘನಲಿಂಗಿಗಳಿಗದರ ಗುರುತೆಲ್ಲಮಂ ತೋರಿ ಜೇರೆಂಟುಲಿಂಗಗಳನು
ಜನರಿಂದ ತತ್ಸೂತ್ರವಗಲದಂತೊಂದು ಭಾ-
ಜನದಲ್ಲಿ ಸಂಗ್ರಹಿಸಿ ತಲ್ಲಕ್ಷಣಂಗಳಂ
ಮನಮುಟ್ಟಿ ತೀವವುಗಳೊಳ್ಪಟುವಿನಿಷ್ಟ ಲಿಂಗವನಿಡದೆ ಸಕಲರರಿಯೆ ॥ ೧೩ ॥

ಕುವರ ಬಾ ವಟುವರ್ಯ ನಿನ್ನ ಲಿಂಗವದಾವು-
ದಿವುಗಳೊಳು ಪುಡುಕಿ ಪಿಡಿಯೆಂದಾತನಂ ಕರೆದು
ತವಕಮುಂ ಮಿಗೆ ಪ್ರೇಮದಿಂ ಬೆಸಸಲಾ ವಟೋತ್ತಮನ್ಯೆದೆ ನೋಡಿ ತನ್ನ
ಪ್ರವಿಮಲಮಹಾಲಿಂಗವಿವುಗಳೊಳಗಿಲ್ಲವೆಂ-
ದವನು ನಿಶ್ಶಂಕೆಯಿಂದೊರೆಯಲಾಲಿಸಿ ಕೂಡಿ-
ದವರೆಲ್ಲರವನತುಲಸತ್ಯವೃತ್ತಿಗೆ ನಲಿದು ತಲೆದೂಗಿದರು ಬಳಿಕ್ಕಾ ॥ ೧೪ ॥

ಆ ವಟೋತ್ತಮಗರಿಯದಂತವನ ಲಿಂಗಮಂ
ಶ್ರೀವಿರಾಟ್ಪುರಕುಮಾರೇಶನಾ ಸಕಲ ಲಿಂ-
ಗಾವಳಿಯೊಳಿರಿಸಿ ವಟುವರ್ಯ ನಿನ್ನಯ ಲಿಂಗವಾವುದಿಹುದಿವುಗಳಲ್ಲಿ
ಭಾವಿಸೆಂದೊರೆಯಲಾಕ್ಷಣವಿವನೆ ಮಲ್ಲಿಂಗ
ದೇವನಹುದೆಂದು ತೋರಿಸೆ ಮಹೋತ್ಸಾಹದಿಂ
ತೀವಿವತಿಭಕ್ತಿಯಿಂದೆರಗಿದರು ನೆರೆದವರು ಪರಿಸಿದರು ಚರವರನನು ॥ ೧೫ ॥

ಅರರೆ ಶರಧಿಯೊಳು ಮುಳುಗಿದ ತನ್ನ ಪೂಜೋಪ-
ಕರಣಗಳ ಸಲುವಾಗಿ ಕುಂಭಜಂ ಮುನಿದುತಾ
ಶರಧಿಯನು ಕುಡಿದ ದೇಂ ಪುಸಿಯೊ ದಿಟವೊ ಕಂಡರಾರೀ ಮಹಾಕಥೆಯನು
ಬರೆದ ಕವಿಮಾತ್ರವೀಂಟಿದುದು ದಿಟವೆನ್ನದಿರ
ರರಿದ ಜನರಾದೊಡೀ ಶ್ರೀಕುಮಾರೇಶ್ವರಂ
ತೊರೆಯೊಳಾಳ್ದಿಷ್ಟಲಿಂಗಮಂ ತೆಗೆಸಿದುದು ಸಟೆಯೆ ಬಹುಜನರು ನೋಡಿರುವರು ॥ ೧೬ ॥

ಅಂದಲ್ಲಿಯೇ ತದ್ವಟೋತ್ತಮಗೆ ಶಾಸ್ತ್ರವಿಧಿ
ಯಿಂದ ನಿಷ್ಕೃತಿಗೈದು ಲಿಂಗಮಂ ಕೊಟ್ಟು ನಲ
ವಿಂದುರೆ ಗಣಾರಾಧನೆಯನೆಸಗಿ ಪ್ರಭುಲಿಂಗನಂ ಭಜಿಸುತಂ ಮಠಕ್ಕೆ-
ಬಂದು ಸಭೆಗರೆದಿಷ್ಟಲಿಂಗಪ್ರಭಾವಮಂ
ಕುಂದಿಲ್ಲದಂತುಪನ್ಯಾಸಕರ ಸವಿನುಡಿಗ-
ಳಿಂದ ಪೇಳಿಸಿದರೀಶ್ವರಭಕ್ತರೆಲ್ಲರೆಚ್ಚರಿವಂತೆ ಸಂಭ್ರಮದೊಳು ॥ ೧೭ ॥

ವೀರಶೈವ ಮತಾಚರಣೆಯ ಪ್ರೇಮವದೆನಿತೊ
ಜೇರಾರಿಗುಂ ತಿಳಿಯದಂತೆ ನಿಜಲಿಂಗಮದು
ನೀರಿನೊಳು ಪೋದುದಕೆ ಸುಮ್ಮನೇ ಮತ್ತೊಂದು ಲಿಂಗವನು ಧರಿಸಿಕೊಳದೆ
ಸಾರತರಮಾದ ತನ್ನಸುವಳಿದೊಡುಂ ಶಿವಾ-
ಚಾರದಂತಾಚರಿಸಬೇಕದಕ್ಕಂತರಿಸ-
ಬಾರದೆಂದುಳಿದವರಿಗರುಪಿ ತಾನುಪವಾಸವಿರ್ದನಾ ವಟುವರ್ಯನು ॥ ೧೮ ॥

ಶಿವಧರ್ಮವೇ ಪ್ರಾಣವಾಗಿ ಸ್ವಸಮಾಜದೊಳು
ಶಿವಧರ್ಮಮಂ ಬೆಳೆಪಕಾರ್ಯಮಂ ಕೈಕೊಂಡ
ಶಿವಯೋಗಿ ತನ್ನನಾಶ್ರಯಿಸಿದ ವಟೂತ್ತಮನ ಲಿಂಗಮದು ಪೋದುದಕ್ಕೆ
ತವೆ ಮತಗ್ರಂಥಪ್ರಮಾಣಮಂ ಪುಡುಕಿ ತಾ-
ನವನಸುವನುಳಿಪುಪಾಯುವ ಪುಡುಕದಲ್ಲಿ ಲಿಂ-
ಗವನು ಶೋಧಿಸತೊಡಗಿದಂ ಮೊದಲು ತಾನೊಡಂಬಟ್ಟಿರ್ದ ಪವಣದಂತೆ ॥ ೧೯ ॥

ಪರಮಧರ್ಮಾನುಸಾರಂ ಪ್ರಾಣಮಂ ತೊರೆಯು-
ಲಿರುವ ಗಣಸುತನನುಪವಾಸದೊಳು ಕುಳ್ಳಿರಿಸಿ
ಚರಪುಂಗವಂ ತಾನದೆಂತು ಲಿಂಗಾರ್ಪಿತಕ್ಕೊಪ್ಪಿದನನೀ ಬಗೆಯನು
ಪರಶಿವಂ ತಿಳಿದು ತಾನೇ ಪೋದ ಲಿಂಗಮಂ
ದೊರೆಕೊಳಿಸಿದಂ ಮಿಕ್ಕಜನರಿಗಳವಲ್ಲಿದೆಂ-
ದರಿದು ಕೊಂಡಾಡಿದುದು ನಾಡನೆಲ್ಲಂ ಮಹಾಭಕ್ತಿಯಿಂದೊಪ್ಪಿ ನಲಿದು ॥ ೨೦ ॥

ಲಿಂಗವಿಲ್ಲದೆ ತಿರುಗುತಿರ್ದ ಶಿವಭಕ್ತರಿಗೆ
ಲಿಂಗಮಂ ಕಟ್ಟಿಸಿದನಾವಗಂ ಬಿಡದಂತೆ
ಲಿಂಗವಂತರಿಗಿದೇ ಪ್ರಾಣಮೆಂದುಪದೇಶಮಂ ಮಾಡಿಸಿದನು
ಇಂಗಿತವನರಿದ ವ್ಯಾಖ್ಯಾತರಂ ಶುದ್ಧಭಸಿ-
ತಂಗಳಂ ಶಿವದಾರಮಂ ಪಂಚಸೂತ್ರಯುತ
ಲಿಂಗಗಳನುಚಿತವೆನೆ ಬಡವರಿಗೆ ದೊರೆಯುಲೆಸಗಿದನೀ ಕುಮಾರೇಶನು ॥ ೨೧ ॥

ಕನಕ ರಜತ ಕರಂಡಕದೊಳು ಲಿಂಗವ ಧರಿಪು-
ದನುಚಿತವಿದೆಂದೊರೆದು ಬಿಡಿಸುತಿರ್ದಂ ಲಿಂಗ-
ವನು ನಾಭಿಗಿಂದ ಮೇಲಕೆ ಕಟ್ಟಸಿದನು ಕೆಳಗಿಳಿಯದಂತರುಪಿ ಜನಕೆ
ಎಣಿಸಲಿಪ್ಪತ್ತೇಳು ಮತ್ತೆ ಮೂವತ್ತಾರು
ಮನವೊಲಿವೊಲರುವತ್ತುಮೂರುಮೆಂಬತ್ತೊಂಮ
ಇನಿತೆಳೆಯ ಶಿವದಾರಗಳೊಳೊಂದನಾಂಪುದೆಂದುಸುರಿದಂ ಚರವರ್ಯನು ॥ ೨೩ ॥

ಪರತರಾಚಾರ ಪರರಾಗಬೇಕೆಂದು ಸುರು-
ಚಿರಲಿಂಗಮಂ ನಿಚ್ಚಮರ್ಚಿಸಲು ಬೇಕೆಂದು
ಗುರುಜಂಗಮರ ಸೇವೆಯಂ ಮಾಡಬೇಕೆಂದು ನೀತಿಗೆಡಬಾರದೆಂದು
ಮರೆಯದಲ್ಲಲ್ಲಿ ಸಭೆಗರೆದೊರೆದುಪನ್ಯಾಸ-
ಕರ ಕಳುಹಿ ಗಾಂಜಿತಂಬಾಕನಸ್ಯಾದಿಗಳ
ತೊರಸಿ ನಿರ್ವ್ಯಸನಿಗಳನೆಸಗಿದಂ ಕೆಟ್ಟ ಚಟವುಳ್ಳವರನೀ ಧರ್ಮಿಯು ॥ ೨೨ ॥

ಗುರುಜಂಗಮರ ಮಠಗಳವನತಿಯೊಳಿರ್ದಡವ
ನರಿದಾ ಸ್ಥಲದ ಪಿರಿಯರಂ ತನ್ನ ಸನ್ನಿಧಿಗೆ
ಬರಿಸಿಕೊಂಡಿಲ್ಲವೇ ತಾನಲ್ಲಿಗೈದಿ ಸರಿಯಾದುಪಾಯಂಗಳಿಂದ
ತರಲಾದನೂರ್ಜಿತಸ್ಥಿತಿಗೀ ಕುಮಾರಯತಿ
ವರನವಶ್ಯಪ್ರಸಂಗದೊಳು ಬೇರಾಚಾರ
ಪರಗಣಾಧಿಪನಿಗಾಮಠದೊಡೆತನವನಿತ್ತು ಮೆರೆಯಲೆಸಗುತ್ತಿರ್ದನು ॥ ೨೪ ॥

ನೀತಿಶಿಕ್ಷಣಕೆ ಮಹತಿಯನೀವುತಿರ್ದನಾ
ನೀತಿಯಿಲ್ಲದವನವನಿಪನಿರಲಿ ಗುರುವಿರಲಿ
ಭೂತಲೋತ್ತರ ನಿಪುಣನಿರಲಿ ಬಲುಶ್ರೀಮಂತನಿರಲಿ ವಿಖ್ಯಾತನಿರಲಿ
ಮಾತಾಡುವೊಂದಧಮಪಶುವೆಂದು ಮಾನಸದೊ
ಳಾತನಂ ತಿಳಿದುಪೇಕ್ಷಿಸುತಿರ್ಪನಲ್ಲದೆ ನೃ-
ಜಾತಿಯವನೆಂದಾದೊಡಂ ನಂಬುತಿರಲಿಲ್ಲಪೀ ಮಹಾಚರದೇವನು ॥ ೨೫ ॥

ದೀಕ್ಷೆಯಂ ಪೊಂದಬೇಕೆಮ್ಮ ಮತದವರೆಲ್ಲ
ದೀಕ್ಷೆಯಿಂದೆಚ್ಚರಿವದೆಮ್ಮಲಿಂಗಂ ಮತ್ತೆ-
ದೀಕ್ಷೆಯೊಳು ಮಂತ್ರೋಪದೇಶಮಪ್ಪುದು ದೀಕ್ಷೆವಡೆಯದವನಾಪುನಹುದೆ
ದೀಕ್ಷೆಯಿಲ್ಲದವರಭವಾರ್ಜನೆಗನರ್ಹರೀ
ದೀಕ್ಷೆಯೇ ಮೋಕ್ಷೈಕಮೂಲಪಥವದರಿಂದೆ
ದೀಕ್ಷೆಯಂ ಪೊಂದಲೇ ಬೇಕೆಮ್ಮ ಶ್ರೀವೀರಶೈವರೊಳು ಸ್ತ್ರೀಪುರುಷರು ॥ ೨೬ ॥

ಮಸುಳಿಸಿಹುದಿತ್ತೀಚೆಗಿದರ ಪದ್ಧತಿ ಧರ್ಮ-
ಕುಶಲಗುರುವರ್ಯರಿರಲಿಲ್ಲವದರಿಂ ಸುಧಾ-
ರಿಸುವ ಕಾಲ ಬಂದುದಿನ್ನುಮುಂದಕೆ ಬಾರದಿರುವದನುಚಿತವಲ್ಲವೇ
ಅಸಮ ಶಿವಧರ್ಮಸಾಧನದೊಡನೆ ದುಡಿವುತಿಂ
ಪೆಸೆವ ಭೋಗಾಮೃತಗಳಂ ಪಡೆದು ಬಾಳ್ವುದೇ
ವಸುಧೆಯೊಳು ಪುಟ್ಟಿ ಬಂದುದಕೆ ಫಲವೆಂದೊರೆದು ಭಕ್ತರಂ ತಿಳಿವೊಗಿಸಿ ॥ ೨೭ ॥

ಗುರುಗಳಿಂ ದೀಕ್ಷಿತರಾಗಿಸಿದನಲ್ಲಲ್ಲಿ
ಪುರುಷರಂ ನಾರಿಯರನೆಲ್ಲರಂ ಬಹುಭಕ್ತಿ-
ವೆರಸಿ ಮಡಿಮೈಲಿಗೆಗಳಿಂಗಿತವನರಿದು ನಿಜಲಿಂಗದರ್ಚನೆಯನೆಸಗಿ
ಪರಮ ತೀರ್ಥಪ್ರಸಾದವನು ಸೇವಿಸಗಲಿತ-
ರರಿದರ್ಸಮಾನಾಧಿಕಾರವುಂಟೆಮ್ಮ ಸ್ತ್ರೀ-
ಪುರುಷರಿಗೆ ಧರ್ಮದೊಳಗೆಂಬುದಂ ಮನಗಂಡರೀ ವೀರಶೈವರೊಪ್ಪಿ ॥ ೨೮ ॥

ಲಿಂಗಧಾರಕರಿಗಾ ಪಂಚಸೂತಕವಿಲ್ಲ
ಲಿಂಗಮಿದು ಕುಲದ ಕೇವಲಚಿನ್ಹಮಲ್ಲ ಶಿವ
ಲಿಂಗವೆಮ್ಮಯಂ ಮಸ್ತಕಾಂತಸ್ಥಚಿತ್ಕಲಾಪರವಸ್ತುವೆಂದು ನಂಬಿ
ಲಿಂಗಪೂಜಾಭಿರತಿಯೊಳ್ಬಾಳ್ದರೆಮ್ಮೀ ಜ-
ನಾಂಗದೊಳ್ಬಹುಜನಶ್ರೀಕುಮಾರೇಶ್ವರನ
ಮಂಗಲೋದಯಮಹಾಬೋಧಸ್ವಯತ್ನಕಾರುಣ್ಯಪ್ರಭಾವದಿಂದ ॥ ೨೯ ॥

ದಿನದಿನಂ ಬ್ರಾಹ್ಮೀಮುಹೂರ್ತದೊಳು ಲಿಂಗಚಿಂ-
ತನದಿನೇಳ್ದಿಲ್ಲ ವಟುವರ್ಯಪಂಡಿತ ಸುಕೀ-
ರ್ತನ ಪುರಾಣಿಕರೆ ಮೊದಲಾದ ಜನರೊಡನೆ ಶಿವತತ್ವ ಶಾಸ್ತ್ರಜ್ಞಾನದ
ಅನುಭವವ ಸಾಗಿಸುತ್ತಿರ್ಪನೆಂದೆಂದಿಗುಂ
ನೆನಹಿಗೈತಂದ ಕೆಲ ಸುವಿಚಾರವಿಷಯಗಳ-
ನನುವಿನಿಂ ಬರೆಸಿ ಸಂಗ್ರಹಿಸುತಿರ್ಪಂ ನಿಖಿಲಜನರಿಗುಪಯೋಗಿಪಂತೆ ॥ ೩೦ ॥

ನಿರತಿ ವಿತರಣಧೈರ್ಯ ದೃಢನಿಶ್ಚಯತ್ವ ಬಹು-
ನಿರಭಿಮಾನ ಪರೋಪಕಾರ ನಿಃಸ್ವಾರ್ಥ ಸು-
ಸ್ಥಿರಬುದ್ಧಿ ಶಾಂತಿ ದಾಂತಿ ಪ್ರೋಜ್ವಲಬ್ರಹ್ಮಚರ್ಯಾದಿ ಸದ್ಗುಣಗಳು
ನಿರುತಮೂರ್ಜಿತವಾಗಿ ಯೀತನೊಳ್ಬೆಳೆದು ಬಾ-
ಳ್ದಿರುತಿರ್ಪವೀ ದಿವ್ಯಶಕ್ತಿಪ್ರಭಾವಮಾ-
ತುರದಿಂದ ಧರ್ಮದೊಳು ಬಹುವೀರಶೈವರಂ ತಂದುದತಿಸುಲಭಮಾಗಿ ॥ ೩೧ ॥

ಹಲವು ಮಾತೇನು ಧರ್ಮವಿಡಂಬನಂ ಮುಸುಕಿ
ಸುಳಿವೀ ವಿನೋದಕಾಲದೊಳೀತನಿಲ್ಲದೊಡೆ
ಮುಳುಗುತಿರ್ದತ್ತು ಧರ್ಮಂ ಪೇಳಪೆಸರಿಲ್ಲದಂತೆ ನಮ್ಮೀ ಮತದೊಳು
ಮಲಹರನ ಕರುಣದಿಂದಿಂತಹ ಮಹಾತ್ಮರಿಳೆ-
ಗಿಳಿಯಬೇಕಿನ್ನು ಮುಂದಾಡಿ ಬೇಡುತ್ತಿರುವ-
ರಲಘು ಧರ್ಮಾಭಿಮಾನಿಗಳೀ ಮತೌನ್ನತ್ಯವಾಂಛೆಯಿಂ ಪ್ರತಿದಿನದೊಳು ॥ ೩೨ ॥

ಅಂತು ಸಂಧಿ ೧೧ ಕ್ಕೆ ಪದಗಳು ೪೦೭

ಶ್ರೀರಸ್ತು

✻ ಶ್ರೀ ಶಾಂತಾಯ ನಮಃ ✻



# ಹನ್ನೆರಡನೆಯ ಸಂಧಿ ಪ್ರಾರಂಭ

---



**ಸೂಚನೆ:—**

ವರವೀರಶೈವ ಧರ್ಮೋದ್ಧಾರಕರಾದ
ಗುರುವಿರಕ್ತರ ಸುಧಾರಣೆಗೆ ಶಿವಯೋಗಮಂ-
ದಿರವೆಂಬ ಶಿಕ್ಷಣಾಲಯಮಂ ಪ್ರತಿಷ್ಠಿಸಿದನೀ ಸದಾಶಿವಯೋಗಿಯು ||

ಧರೆಯ ಪರಮಾಣುಗಳ ಪರಮಾಣುಗಳು ಮಿಸುಗು-
ತಿರುವ ಮಹಾಶಕ್ತಿಯೇ ದೇವತೆಂದಾಧುನಿಕ
ಪರಿಶೋಧಕಪ್ರವೀಣರ್ಕಂಡು ಹಿಡಿದೊಪ್ಪುತಿಹರು ನಿನ್ನಸ್ತಿತ್ವವ
ಪರವೇದಶಾಸ್ತ್ರಾಗಮಂಗಳೊರೆವಂ ಜಗ-
ದ್ಭರಿತನೆಂದುಂ ಪ್ರವೀಕ್ಷಿಸಿ ಮಹಾಯೋಗಿಗಳು
ಕಳನೆ ತುಂಬಿರುವನೆಲ್ಲೆಡೆಯೊಳೆಂದೊರೆದರವರಿಂ ನಂಬಿದೆನು ಪೊರೆ ಶಿವಾ ||೧||

ಗುರುವಿರಕ್ತಸ್ವಾಮಿಗಳ್ಸುಧಾರಕರಿರ್ದೊ-
ಡುರೆ ಸುಧಾರಣೆಯಪ್ಪುದೆಮ್ಮ ಮತವದರಿಂದ
ಗುರುವಿರಕ್ತಸ್ವಾಮಿಗಳು ತಿದ್ದುಪಡೆಯಾಗಲೊಂದು ಶಿಕ್ಷಣಶಾಲೆಯು
ಇರುವಂತೆ ಮಾಳ್ಪುದುತ್ತಮವೆಂದು ವೈರಾಗ್ಯ
ಪರಮಲ್ಲಿಣಾರ್ಯರೊಡನೆಂದು ತಾನೆಸಗಿರ್ದ
ಪರತರಾಲೋಚನೆಯನೀ ಕುಮಾರೇಶ್ವರಂ ಪ್ರಮುಖಜನರಿಗೆ ಸೂಚಿಸಿ ॥ ೨ ॥

ಚೆಲುವಬಾಗಲಕೋಟೆಯೊಳು ನೆರೆದ ನಾಲ್ಕನೆಯ
ವಿಲಸಿತಮಹಾಸಭೆಯು ಮುಗಿದ ಮರುದಿನವಲ್ಲಿ
ಸಲೆಸೊನ್ನಲಿಗೆಯ ವಾರದಮಲ್ಲಿಣಾರ್ಯರಧ್ಯಕ್ಷತೆಯ ಕೆಳಗೆ ಸಭೆಯ
ಕಲಸಿ ಗುರುಚರಪಟ್ಟದಾರ್ಯರಂ ನಿಪುಣರಂ
ಪಲವು ಶ್ರೀಮಂತರಂ ಪದವೀಧರರ್ಕಳಂ
ತಿಳಿದೆಲ್ಲಸಿರಿಯರಂ ಕೇಳ್ದವರಭಿಪ್ರಾಯಮಂತೆ ವಿವರಿಸಿ ಚರ್ಚಿಸಿ ॥ ೩ ॥

ಪರಮಶಿವಯೋಗಬೋಧಾನುಕೂಲತೆಯಿಲ್ಲ-
ದಿರುವದರಿನೆಮ್ಮ ಧರ್ಮಭ್ರಷ್ಟತೆಯುಗಾಗಿ
ಕೊರವೆನಿಸುಮೀ ವೀರಶೈವಜನಸಂಖ್ಯೆಯಿಳಿಯುತ್ತಿರುವದಿರೆಯಿರುತ್ತ
ಹಠಯೋಗಬೋಧೆಗಂ ಧರ್ಮದೇಳಿಗೆಗೊಂದು
ಪಿರಿದಾದ ಸಂಸ್ಥೆಯುಂ ಮಾಳ್ಪುದೇ ಶಿವಮತೀ-
ಯರ ಮುಖ್ಯಕರ್ತವ್ಯವದರಿಂ ಮತೋತ್ಕರ್ಷಮಪ್ಪುದಿದು ನಿಹಿತರೀತಿ ॥ ೪ ॥

ಈ ಮತವನಾದಿಸಂಸಿದ್ಧಮಾಗಿಹುದು ವೇ-
ಣಾಮಹಿತವೇದಾಗಮಂಗಳಿಂದುಕ್ತಮಹ-
ದೀ ಮಹಾಮಂತ್ರ ಲಯ ಹಠ ರಾಜಯೋಗಗಳನೊಳಕೊಂಡ ಶಿವಯೋಗದ
ನೇಮಕೊಳಗಾಗಿಹುದು ಶಿವಯೋಗಮಂ ಹಿಂದೆ
ಶ್ರೀಮಲ್ಲಿಕಾರ್ಜುನಕ್ಷೇತ್ರದೆ ಸದಾನಂದ-
ನಾಮ ಶಿವಯೋಗಿಯೊರೆದುದ್ಧರಿಸಿದಂ ಶ್ವೇತಪಿಂಗಳಾದ್ಯಾಶ್ರಿತರನು ॥ ೫ ॥

ಮಲಯಾಚಲಾದಿ ದಿವ್ಯಸ್ಥಾನಗಳೊಳುಮು-
ಜ್ವಲಿಪ ಶಿವಯೋಗಮಂಟಪಗಳೊಳು ಕುಳಿತುಕೊಂ-
ಡೊಲಿದಗಸ್ತ್ಯಾದಿ ಮುನಿಗಳಿಗೆ ಷಟ್ಸ್ಥಲಮಹಾಸಿದ್ಧಾಂತಮಂ ಬೋಧಿಸಿ
ಸಲಹಿದರು ರೇಣುಕಾದ್ಯಾಚಾರ್ಯಪುಂಗವರು
ವಿಲಸದಭವಾನುಭವಮಂಟಪದೊಳಾ ಪ್ರಮಥ-
ಕುಲಕೆ ಪ್ರಭುದೇವನುಪದೇಶಿಸಿದನನುಭವಮನಿಂತು ಬಂದಿಹುದಾದೊಡೆ || ೬ ||

ವರವೀರಶೈವಮತಕಿಂದಿಗೊದಗಿರುವ ದು-
ರ್ಧರಮಾದನಾಚಾರಮಂ ತೊಲಗಿಸುವಡೆ ಭಾ-
ಸುರ ವಿರತ ಗುರುಗಳೊಳಗುಳ್ಳ ಧರ್ಮಗ್ಲಾನಿಯಂ ಕಳೆಯಬೇಕು ಮೊದಲು
ತರುಮೂಲಕೆರೆದಂಬು ಶಾಖೋಪಶಾಖೆಯಂ
ನೆರೆ ಚಿಗುರಿಪಂತೆಲ್ಲ ಶಿಷ್ಯಭಕ್ತರ್ಕಳಂ
ಪರಿಶುದ್ಧರಪ್ಪರದರಿಂ ಗುರುಸುಧಾರಣೆಯೆ ಮುಖ್ಯಂ ಮತೋನ್ನತ್ಯಕೆ || ೭ ||

ಗುರುವಿರಕ್ತರ ಶಿಕ್ಷಣಾಲಯಮವಶ್ಯಮದ-
ನುರುತರೇಶಕ್ಷೇತ್ರತೀರ್ಥದೆಡೆಯೊಳು ರಚಿಸಿ
ಕರೆಯಬೇಕದಕೆ ಶಿವಯೋಗಮಂದಿರಮೆಂಬ ಪೆಸರನಾ ಸಾಲೆಯಲ್ಲಿ
ಗುರುವಿರಕ್ತಾಧಿಕಾರವನು ಪೊಂದಿದರನುಂ
ನೆರೆ ಪೊಂದುವಮಲಮಾಹೇಶ ವಟುಗಳನವರ
ಪರಿಶುದ್ಧವರ್ತನಾದಿಗಳ ಪರಿಕಿಸಿಕೊಳ್ಳಬೇಕು ತಕ್ಕವರಿರ್ದೊಡೆ || ೮ ||

ಆ ಸಾಲೆಯೊಳು ಸಾಧಕರಿಗುಚಿತಮೆನಿಸಿಪ ಯೋ-
ಗಾಸನಗಳಂ ಧರ್ಮವೃತ್ತಿಯಂ ಮಹಮಹ-
ನ್ಯಾಸಮಿಷಯಂಗಳಂ ಸಂಸ್ಕೃತಮನರ್ಜನಾನುಭವಂಗಳಂ ಕಲಿಪುದು
ಆ ಸಾಧಕರಿಗೆ ಜಡಮಾದಶನಮಂ ಕೊಡದೆ
ಲೇಸುಮಿಗೆ ಬಸಿಯ ಸತ್ವಾನ್ನದಿಂ ಭೋಜನಂ
ಗೈಸುವದು ತಂಗುಳವ ಜೋಳ-ಪುಳಿ-ಯುಪ್ಪೆಣ್ಣೆ-ಕಾರಂಗಳಂ ಬಿಡುಟ್ಟು || ೯ ||



ಪರಮ ತಪಸ್ವಿ

ಲಿಂ. ಶ್ರೀ ಷ. ಬ್ರ. ಮಹಾಂತಸ್ವಾಮಿಗಳು

ಇಲಕಲ್ಲ

ಅವರುಣ್ಣಲಾಗದಬಲೆಯುರಿಸಗಿವಡಿಗೆಯುಂ
ಯುವತಿಯರನಾಗಳುಂ ನೋಡಬಾರದು ಮತ್ತೆ
ವಿವಿಧಸೀಮಂತಿನೀ ಶೃಂಗಾರಮಯಕಾವ್ಯಗಳ ನೋಡಲಾಗದೊಪ್ಪಿ
ಸುವಿಚಾರಪರವಾದ ಗ್ರಂಥಗಳ ವಚನಗಳ
ಪ್ರವಚನಂ ಪ್ರತಿದಿನಂ ನಡೆವುತಿರಬೇಕಲ್ಲಿ
ತವೆ ಸಮಸ್ತಗ್ರಂಥಭಾಂಡಾರವಿರಬೇಕು ಜನರಿಗನುಕೂಲವಾಗಿ ॥ ೧೦ ॥

ನೀರಿನವರಡಿಗೆಯವರಾಳ್ಗಳಧ್ಯಾಪಕರು
ಸಾರಗುಣವಂತರಿರಬೇಕಲ್ಲಿ ವೇಣದಕೆ
ಪೂರಯಿಸುವನಿತೊಂದು ಧನರಾಶಿಯೆಮ್ಮೀ ಸಮಾಜದಿಂದಾಗಬೇಕು
ಚಾರುಚರಚಕ್ರೇಶನಾದೀ ವಿರಾಟ್ಪುರಕು-
ಮಾರೇಶನೀ ಶಿಕ್ಷಣಾಲಯದ ಪುದಿವೆಲ್ಲ
ಭಾರಮಂ ಪೊತ್ತು ಸಾಗಿಪುದು ಮಿರ್ಕರ್ಮ್ಯಾಡಲಸಮರ್ಥರೀ ಕಾರ್ಯವ ॥ ೧೧ ॥

ಇಂತು ನಿರ್ಣಯಿಸಿ ಶಿವಯೋಗಮಂದಿರವೆಮ್ಮ
ಪ್ರಾಂತದೊಳಗಾಗಬೇಕೆಂದು ವಾರದವರೀ
ಮುಂತಾದ ಹಿರಿಯರೆಮ್ಮಲ್ಲಿ ತಮ್ಮಲ್ಲಿ ಸ್ಥಾಪಿಸುವದೆಂದಾಗ್ರಹಿಸಲು
ಎಂತು ಮಾಡುವದೆಂದು ಮತ್ತಮಾಲೋಚಿಸುತ-
ನಂತಸಾಧಕಬಾಧಕಂಗಳ ವಿಚಾರದಿಂ-
ದಂತರಿಸದೋರ್ವ ಮಹಿಮರು ತೋರಿದೆಡೆಯೊಳದು ನೆಲಸಬೇಕೆಂದು ಬಗೆದು ॥ ೧೨ ॥

ಶಿವಯೋಗಮಂದಿರವ ಚಿತ್ರಗೆಮಹಾಂತೇಶ
ಶಿವಯೋಗಿಯೊಪ್ಪಿದೆಡೆಯೊಳು ಸ್ಥಾಪಿಸುವದೆಂದು
ಸುವಿಚಾರಪೂರ್ವಕಂ ಸರ್ವಾನುಮತಿಯಿಂದ ಸಭಿಕರುರೆ ನಿರ್ಣಯಿಸಲು
ಶಿವಧರ್ಮವೇಳ್ಗೆಗನುಕೂಲಸಾಧನವಿದೆಂ-
ದವಘಟಿತಜನರತಿಶಯಾನಂದದಿಂ ಮಹೋ-
ತ್ಸವವಾಂತರಿದು ಸುರಕ್ಷಿತವಾಗಿ ಸಾಗದಿರದೆಂದೊಲಿದು ತಲೆದೂಗುತ ॥ ೧೩ ॥

ಇದೆ ನಮ್ಮ ಮಠಸೇವೆಯೆಂಬೊಡಂಬಟ್ಟು ಸ-
ಮ್ಮುದವಾಂತು ಶ್ರೀವಿರಾಟ್ಪುರಚರಾಧೀಶ್ವರಂ
ಮೊದಲೊಂದು ತಾಣಮಂ ಪುಡುಕಿ ಚಿತ್ರಿಗೆ ಮಹಾಂತೇಶನೊಪ್ಪಿದೊಡಲ್ಲಿಯೆ
ಚದುರಿಂದ ಶಿವಯೋಗಮಂದಿರವ ರಚಿಪುದೆಂ-
ದೊದಗಿದ ಪ್ರಬುದ್ಧರಿಂ ಕೂಡಿ ಗಿರಿನದಿ ಪಂಪೆ
ಮೊದಲಾದ ಸುಕ್ಷೇತ್ರತೀರ್ಥಂಗಳಂ ನೋಡಿ ಸರಿಗಾಣದೆಣಿಸಿ ಬಂದು ॥ ೧೪ ॥

ಅವಧರಿಸು ಮಹನೀಯ ಶಿವಯೋಗಮಂದಿರಕೆ
ಪ್ರವಿಮಲಸ್ಥಲಮೊಂದು ದೊರೆದಿಲ್ಲವಿನ್ನು ಪುಡು-
ಕುವವೆಲ್ಲಿ ತಮ್ಮಪ್ಪಣೆಯದಾವುದಿದಕೆಂದು ಶ್ರೀಮಹಾಂತೇಶನಲ್ಲಿ
ಸುವಿನಯಪ್ರಾರ್ಥನೆಯನೆಸಗಲಾ ಶಿವಯೋಗಿ
ಸವಿನುಡಿಯೊಳಿಲೆ ದೇವ ಚಿಂತೆಯಿದಕೇಕೆ ನೋ-
ಡುವಬನ್ನಿ ನೀವೆಂದು ಕರೆಕೊಂಡುಬಂದನ್ನೆ ಹೊಳೆಗೆ ಪಟ್ಟದಕಲ್ಲಿಗೆ ॥ ೧೫ ॥

ಅಲ್ಲಿ ಚೆಲುವೆತ್ತ ಪೂರ್ವದಶಿಲಾಮಂಟಪವ
ನೆಲ್ಲಮಂ ತಿರುಗಾಡಿ ನೋಡಿ ಮನವೊಪ್ಪದಂ-
ತಲ್ಲಿಂದ ಮುಂದಕ್ಕೆ ಶೋಧಿಸುತಬಂದು ಗಡಮಾಗಡದ ಹತ್ತಿರಕ್ಕೆ
ಸಲ್ಲುವಮಲಾಪಹಾರೀತರಂಗಿಣಿಯ ತಟ-
ದಲ್ಲಿ ನಿಂದಾ ಪ್ರದೇಶದೊಳು ಗುಂಪಾಗಿರುವ
ಜೆಲ್ಲವತ್ತದ ಸಣ್ಣಗಿಡಗಳಂ ಕಂಡು ಪರಮೋತ್ಸಾಹಮೊಳ್ಗೊಂಡು ॥ ೧೬ ॥

ಶಿವಪೂಜೆಯಂ ಮಾಡಬನ್ನಿ ಶಿವಯೋಗಿಗಳಿ
ತವಕದಿಂ ಬನ್ನಿ ನೀವೆಂದು ನಿಮ್ಮಂ ಕರೆವ-
ವಿವು ಬನ್ನಿ ಸುತ್ತಲುಂ ನೋಡಿರೈ ಹತ್ತರವೆಡೆವುತ್ತಮದನಿಮ್ಮಗೆ
ಶಿವಗೊತ್ತಿ ಸಬುದಮಂ ಕೊಡುವುವಾ ಪಬವಜೆಯು
ಕವಿದಗಿಡಗುಲ್ಮಂಗಳಂ ಕೂಡಿದದ್ರಿಗಳು
ಪವಮಾನಸಮ್ಮಿಲಿತವಾಗಿ ಕಂಗೊಳಿಸುವತಿಸೌಂದರ್ಯಮೇಳ್ಗೆಯಿಂದ ॥ ೧೭ ॥

ಬಹುವನೌಷಧಿಗಳುಂಟೀ ಪ್ರದೇಶದೊಳು ಸ-
ನ್ನಿಹಿತಮಿರ್ಪ್ಪಂ ಮಹಾಕೂಟಸುಕ್ಷೇತ್ರಮುಂ
ಮಹಿಯ ಸೊಬಗೇಳ್ದು ಕಾಣುವದಿಲ್ಲಿ ಕಡುಮನೋಹರವಾಗಿ ನೋಳ್ಪವರಿಗೆ
ವಿಹಗಗಳ್ಮಂಜುಳನಿನಾದಮಂ ಮಾಡುತ್ತ
ವಿಹರಿಕುಂ ಚೆಲುಮಿಗಗಳೆಡೆಯಾಟಮುಂಟು ಮೇ-
ಣ್ಮಹಿಳೆಯರ ಸುಳುವಿಲ್ಲನಿಂದು ನಿಮ್ಮ ಶಿವಯೋಗಮಂದಿರಕೆ ಯೋಗ್ಯಮಿಹದು
॥ ೧೮ ॥

ಚೆಲುವಪಟ್ಟದಕಲ್ಲು ನಾಗನಾಥಾಲಯಂ
ವಿಲಸಿತವಿಶಾಲ ಸಿದ್ಧೇಶ್ವರಕ್ಷೇತ್ರಮ-
ಗಳ ಮಹಾಕೂಟ ಬದಾಮಿ ಬನಶಂಕರೀ ವಿಖ್ಯಾತತೀರ್ಥಂಗಳು
ಬಳಿಯೊಳಗೆ ಬಳಸಿರ್ಪವಿದೆ ಪುಣ್ಯಭೂಮಿಯಾ
ಪುಲಿಕೇಶಿಯೀ ಪ್ರದೇಶದೊಳುದಿಸಿ ರಾಜ್ಯಮಂ
ನಲಿದಾಳ್ದನತುಲವಿಕ್ರಮನೆನಿಸಿ ಪರಮೇಶನೆಂಬ ಬಿರುದುವನು ಹೊತ್ತು ॥ ೧೯ ॥

ಹೊಳೆಯ ತಟದೊಳು ಲತಾಮಂಟಪಗಳುಂಟು ನೇ-
ರಳೆಮೊದಲಾದ ಕೋಮಲತರುಗಳುಂಟು ಪರಿ-
ಮಳಿಪ ಸುಮಗುಲ್ಮಂಗಳುಂಟು ಮೇಣಲ್ಲಲ್ಲಿ ಬೆಟ್ಟದಾವರೆಗಳುಂಟು
ನೆಳಲುಂಟು ಜಲಮುಂಟು ಸಂಚಾರಕಿಂಬಾದ
ನೆಲಮುಂಟು ವಿಶ್ರಮಿಸಲತಿಮನೋಹರಮೆನಿಪ
ಶಿಲೆಯುಂಟು ಸುಣ್ಮರಳಸೊಂಪಿನೆಡೆಯುಂಟು ಸಾಧಕರಿಗನುಕೂಲಮುಂಟು ॥ ೨೦ ॥

ಈ ಪವಿತ್ರಸ್ಥಲವೆ ಶಿವಯೋಗಮಂದಿರ
ಸ್ಥಾಪನಕೆ ಸರಿಯಾದ ತಾಣಮಿನ್ನಿದರೊಳಾ-
ಕ್ಷೇಪಣಂ ಬೇಡ ನೀವಿಲ್ಲಿಯೇ ಮಾಳ್ಪುದೆಂದೊರೆಯಲಾ ಶಿವಯೋಗಿಯ
ಶ್ರೀಪಾದಸನ್ನಿಧಿಯೊಳೀನೊಂದು ನುಡಿಯದಾ-
ಜ್ಞಾಪಾಲನಂ ಗೈಯಲೊಪ್ಪಿ ಪ್ರಭುಲಿಂಗನಂ
ತಾಪಸೋತ್ತಮ ಕುಮಾರೇಶ್ವರಂ ನೆನೆದನಾನಂದಾಬ್ಧಿಯುಕ್ಕೆ ಪರಿಯೆ ॥ ೨೧ ॥

ಹಾನಗಲ್ಲ ಕುಮಾರಶಿವಯೋಗಿವರ್ಯರುಂ
ಶ್ರೀನಿರಂಜನಮಹಾಂತೇಶ್ವರ ಯತೀಂದ್ರರುಂ
ಸ್ಥಾನಮಂ ಶಿವಯೋಗಮಂದಿರಸ್ಥಾಪನಾರ್ಥಂ ನೋಡಬಂದರೆಂದು
ಆ ನೆರೆಯ ಹಳ್ಳಿಯವರನಿತರೊಳು ನೆರೆದಿರ್ದ-
ರಾ ನಿಮಿಲರೀ ಮಹೋತ್ಸವವನೀಕ್ಷಿಸಿ ಜಯ-
ಧ್ವಾನಮಂ ನಲಿವು ಕೈಮರೆಗುಟ್ಟುತೆಸಗಿವರು ಗುಡಿಗಟ್ಟಿ ತೋಷಂಗಳು ॥ ೨೨ ॥

ಆ ಮಂದಿಯಂ ಕೇಳ್ದನೀ ಮಹಾಂತೇಶನೀ
ಭೂಮಿಯಾವೂರ ಸೀಮೆಯೊಳಿರುವದೆಂವದ-
ಕ್ಕೋ ಮಹಾಪ್ರಭುವೆ ಗೋವನಕಿಯಂಬೂರಿದೇ ತಾಣದೊಳು ಮೊದಲಿರ್ದುದು
ಗ್ರಾಮನಿದು ಹಾಳಾದುದಾವಬಗೆಯಿಂದಲೋ
ಗ್ರಾಮಸ್ಥರೀ ಬಳಿಯ ಹಳ್ಳಿಯೊಳಗಿಹರೆಂದು
ಕೈಮುಗಿದುಕೊಂಡವರೊಳೋರ್ವ ಮುದುಕಂ ಮುಂದೆ ಬಂದು ವಿಜ್ಞಾಪಿಸಿದನು ॥ ೨೩ ॥

ಕೆಲದೊಳಿಹಕಟ್ಟೆಯಂ ಕಂಡಿದೇನೆಂದು ಜೆಸ-
ಗೊಳಲವಂ ಮಹಸೀಯ ಕೊಟ್ರಬಸವೇಶ್ವರಂ
ನೆಲಸಿರುವ ಕಟ್ಟೆಯಿದು ಪ್ರತಿದಿನಂ ಪೂಜೆಯಾಗುತ್ತಿರ್ಪ್ಪುದೀ ದೇವರ
ನೆಲಿಗಿಯೊಳು ಮನೆಮಾಡಿಕೊಂಡಿರುವರರ್ಚಕರು
ಹೊಲವುಂಟು ದೇವರಿಗದಂ ಮಾಡಿಕೊಳ್ವರೆಂ-
ದುಲಿಯಲೋಹೋ ಕೊಟ್ರಬಸವಣ್ಣನೇನೀತ ಭಾಪುರೆ ಲೇಸಾದುದು ॥ ೨೪ ॥

ಕೊಟ್ಟರೂ ಬಸವ ಕೊಡದಿದ್ದರೂ ಬಸವನಿವ
ಕಟ್ಟೆಯಂ ಪಿಡಿದು ಶಿವಯೋಗಿಗಳ ಮಾರ್ಗವಂ
ನಿಟ್ಟಿಸುತ್ತಿಹನೀತನೊಂದು ಜೆಂಬಲವಿರ್ದ್ದೊಡಿದು ಸಾಲವೇನಿವರಿಗೆ
ನೆಟ್ಟನಿಲ್ಲಿಯೆ ಭವ್ಯಶಿವಯೋಗಮಂದಿರವ
ಕಟ್ಟಿದೊಡೆ ಪ್ರಭುವರಂ ಕಾರುಣ್ಯವಿವರ ಮೇ-
ಲಿಟ್ಟು ಕಾಪಾಡದಿಹನೇನಸಾ ಮುದುಕ ಶಿವಭಕ್ತ ಹೇಳೋ ಹೇಳಮು ॥ ೨೫ ॥

ಅಹುದು ಚರದೇವ ನಿಮ್ಮಾಜ್ಞೆಗೀ ಯತಿಪರೊ-
ಪ್ಪಿಹರವರಿಗಾನಂದಮುದಿಸಿರ್ಪುದೆಮಗೆಲ್ಲ
ಬಹುಸಮಾಧಾನಮಾಪುದು ನಮ್ಮ ಪುಣ್ಯಮೀ ಸಂಸ್ಥೆಯಿಂದನವರತವು
ಮಹಿಮರಡಿದಾವರೆಯ ದರ್ಶನಂ ಸ್ಪರ್ಶನಂ
ವಿಹಿತ ಶಿವಧರ್ಮೋಪದೇಶಮುಂ ದಾಸ್ಯಮುಂ
ಮಹದನುಗ್ರಹಮೆಮಗೆ ದೊರೆವವೆಂದೆರಗಿದರು ಮತ್ತಮನುರಾಗದಿಂದ ॥ ೨೬ ॥

ಏನಿದೆತ್ತಂ ನೋಡಲೊತ್ತಿಬೆಳೆದಿರ್ಪುದೀ
ಕಾನನದೊಳೀ ಡಬ್ಬುಗಳ್ಳಿಕಾಲಿಡದಂತೆ
ನಾನಾವಿಧಶ್ವಾಪದಗಳು ತಿರುಗಾಡುತಿಹವಿಲ್ಲಿ ಪಗಲ್ಪೈದಿ ಬಡಿದು
ಮಾನವರ ಮುರಿದೊಡಾರ್ಕೇಳ್ವರೀ ಭೀಷಣ-
ಸ್ಥಾನದೊಳದೆಂತು ಬಾಲಕರು ಸುಖದಿಂದನು-
ಷ್ಠಾನಮಂ ಮಾಳ್ಪುದು ? ಸಮೀಪದೊಳದಾವಾವಹಳ್ಳಿಯೂರುಗಳಿಲ್ಲವು ॥ ೨೭ ॥

ದಾರಿಗರನಿಲ್ಲಿ ತುಡುಗರು ಪಗಲೆ ಸುಲಿವರೀ-
ದಾರಿಯೊಳಗಂಜಿಲ್ಲದೊಬ್ಬಿಬ್ಬರಡ್ಡಾಡ-
ಲಾರರೆಂದೀ ನೆರೆದವರು ಪೇಳ್ವರಿಲ್ಲಿ ಶಿವಯೋಗಮಂದಿರಮಪ್ಪುದು
ಆರ ಬಗೆಗುಂ ಬಾರದೆಂದೋರ್ವ ಪ್ರಮುಖನೀ-
ನಿರಂಜನ ಶ್ರೀಕುಮಾರಯತಿರಾಜನೊಡ-
ನೋರೆಗಂ ನಿಂದುನುಡಿದಂ ಮೆಲ್ಲನಿದನು ಪೊರಳ್ದೀಕ್ಷಿಸಿ ಮಹಾಂತೇಶನು ॥ ೨೮ ॥

ಸ್ವಾಮಿಗಳೆ ನಿಮ್ಮ ಮಾತಾವುದದು ? ತಿಳಿದುದೆಮ-
ಗೀ ಮಿಸುಪತಾಣವೆಮ್ಮಯ ಮನಕೆ ಬಂದಿಹುದು
ಭೂಮಿಯಿದು ನಿಮ್ಮ ಮನಸಿಗೆ ಬಾರದೊಡೆ ಶಂಭುಯೋಗಮಂದಿರಕೆ ಬೇರೆ
ಕ್ಷೇಮಕರಮಾದೆಡೆಯ ನೋಡಿಕೊಳ್ಳಿರಿ ನಮ್ಮ-
ಗ್ರಾಮಕಾವೀಗ ಪೋಗುವೆವೆಂದು ಚಿತ್ರಿಗೆಯ
ಶ್ರೀಮಹಾಂತೇಶ್ವರಂ ನುಡಿಯಲದಕೀ ಕುಮಾರೇಶ ಶಿವಯೋಗೀಂದ್ರನು ॥ ೨೯ ॥

ಶಿವಯೋಗಮಂದಿರವ ಚಿತ್ರಿಗೆ ಮಹಾಂತೇಶ
ಶಿವಯೋಗಿ ತೋರಿದೆಡೆಯೊಳೆ ಮಾಡಬೇಕೆಂದು
ಸುವಿಚಾರಿಗಳು ಮೊದಲೆ ಸಭೆಯಲ್ಲಿ ನಿಷ್ಕರ್ಷವೆಸಗಿದಂತೀ ಯತಿಗಳು
ಸವೆಯದೊಲವಿಂ ತೋರಿದೀ ಸ್ಥಲಂ ನಿಮ್ಮಮನ-
ಕವಿಹಿತಂ ಕಂಡೊಡಿದನುಳಿದು ಬೇರೆಡೆಯಲ್ಲಿ
ಶಿವಯೋಗಮಂದಿರವನೆಸಗಿರೈ ಪ್ರಮುಖರೇ ನಾವಿದೇ ಮುಳ್ಗಾಗಡೊಳು ॥ ೩೦ ॥

ಎಲೆವನೆಯ ಮಾಡಿಕೊಂಡದರೊಳಗನುಷ್ಠಾನ-
ಫಲಸುಖವನಾವೋರ್ವರೇ ಸಾಧಿಸುವೆವಿಲ್ಲಿ
ಸ್ಥಲವಿದೆಮಗುಚಿತವೈ ವರ್ಗಣಿಯರೂಪದಿಂ ಶಿವಯೋಗನಿಲಯಕಾಗಿ
ಸಲಿಕೊಡಿಸಿರುವ ಪದಿನಾಲ್ಕುಸಾವಿರರೌಪ್ಯ-
ಗಳ ನೀವೆವವುಗಳಿಂ ಸ್ಥಾಪಿಸಿರಿ ಶಿವಯೋಗ-
ನಿಲಯಮಂ ನೀವೆಂದು ನುಡಿಯೆ ನೆರೆದವರೆಲ್ಲ ಜೇರೊಂದು ಮಾತಾಡದೆ ॥ ೩೧ ॥

ಅರರೆ ಶಿವಯೋಗಿಗಳು ತೋರಿದ್ದೀ ತಾಣಮಂ
ತೊರೆವುದಿದು ಸರಿಯಲ್ಲ ಶಿವಯೋಗಮಂದಿರಂ
ಸ್ಥಿರಮಪ್ಪುದಿಲ್ಲಿಯೇ ಜೇರೆಡೆಯಶಾಶ್ವತಂ ಕೇಡಿಗೀಡಾಗದಿರದು
ಹರಹರಾ ತಪ್ಪಾದುದೆಮ್ಮ ತಿಳುವಿಕೆಯಿದೇ
ಪರಿಶುದ್ಧಭೂಮಿಯೊಳು ನೆಲೆಗೊಳಿಪುದೆಂದು ತ-
ಚ್ಚರಣಸನ್ನಿಧಿಯಲ್ಲಿ ಸಾಷ್ಟಾಂಗವೆರಗಿದರು ಪ್ರಮುಖಾದಿಗಳ್ಮುದದೊಳು ॥ ೩೨ ॥

ಬಳಿಕೆಲ್ಲರೊಪ್ಪಿ ಕೊಟ್ಟೂರ ಬಸವೇಶಗು-
ಜ್ವಲಿಪ ಕರ್ಪೂರದೀಪವನು ಪೊತ್ತಿಸಿ ಸುಮಂ-
ಗಲಗೀತಮಂ ಪಾಡುತುತ್ಸಾಹದಿಂ ಬೆಳಗಿದರು ಮಹಾಂತೇಶನಾಗ
ಅಲಸದೇಕಿಂಪೂರ್ಗೆ ಪೋಗಿ ರಥಸಪ್ತಮಿಗೆ
ನಿಲದೆ ಮಗುಳ್ದಿಲ್ಲಿಗೈತದುವೆನಾಪೆಂಟುದಿನ-
ದೊಳಗಾಗಿ ಬರ್ಪುದಾ ತಿಥಿಯಲ್ಲಿ ಪರ್ಯಂತವಿಲ್ಲಿ ನೀವಿರ್ಪುದೆಂದು ॥ ೩೩ ॥

ಹೊಲದಾತನಿಂದೀ ಹೊಲವನು ತಕ್ಕ ಹಣಕ್ಕೆ
ಬಿಲಿತುಕೊಳ್ಳಿರಿ ಕೊಡುವನವನೊಲ್ಲೆನೆನ್ನನೆಂ-
ನೊಲಿದೀ ಕುಮಾರಚರವರಗೊರೆದು ತಳರ್ದನಶ್ವಾರೂಢನಾಗಿ ಭರದೆ
ನೆಲಸಿದು ಶಿವಕ್ಷೇತ್ರದೊಳಗೆ ಮಲಭೇದಿನಿಯ-
ಹೊಳೆಯ ತಟದಲ್ಲಿ ನಾಲ್ಕದ್ರಿಗಳ ನಡುವಿಂಪು-
ದಳೆದಿರುವದತಿಪವಿತ್ರಸ್ಥಾನವೆಂದೆಲ್ಲರಾನಂದ ಭರಿತರಾಗಿ ॥ ೨೪ ॥

ಮುನಿಪರೆಲ್ಲರು ಸಣ್ಣಸಣ್ಣಗಿಡಗಂಟೆಯಂ
ಕರಗಳಿಂದಾಸ್ಥಲವನುಡುಗಿದರು ಸ್ವಚ್ಛವೆನ-
ಲೊರೆಗಿದರು ಪುಲಿಕರಡಿಗಳ ಭೀತಿಯಿಂದ ತನ್ನಿಶಿಯೊಳಭವನ ಭಜಿಸುತ
ಅರುಣೋದಯದೊಳೇಳ್ದು ನಿತ್ಯಕರ್ಮಗಳನಾ-
ಚರಿಸಿ ತತ್ರಮುಖರಿಂ ಕೂಡಿ ನದಿಯಂ ದಾಂಟಿ
ನೆರೆಯೊಳಿಹ ಮಂಗಳೂರೆನಿಪಪಳ್ಳಿಗೆ ಪೋಗಿ ಹೊಲದ ಪಿರಿಯನನು ಕಂಡು ॥ ೨೫ ॥

ಹೊಲವೆಮಗೆ ಬೇಕಿದಂ ಬೆಲೆಗೆ ಕೊಡು ನೀನೆಂದು
ತಿಳಿಸಿ ಬೆಸಗೊಳಲವಂ ಡಬ್ಬುಗಳ್ಳಿಯು ತುಂಬಿ-
ಬೆಳೆದು ಪ್ರತಿವರ್ಷಮುಂ ಕೈಯಿಂದ ತೆರಿಗೆಯಂ ತೆತ್ತಿ ತೆತ್ತುತ್ತಿರ್ದ್ದೊಡುಂ
ಬೆಳೆಗಿವರು ಬೇಡಬಂದಿಹರೆಂದು ಬಿಗಿದು ಬಲು-
ಬೆಲೆಗೇಳುತೆರಡುನೂರೈವತ್ತು ರೂಪಾಯಿ-
ಗಳಿಗೀಯಲೊಪ್ಪಲಾ ಹಣವಿತ್ತು ಸಾರುಗೊಂಡದರಲ್ಲಿ ಮುಚ್ಚಿ ಬೆಳೆದ ॥ ೨೬ ॥

ಗಿಡಗಂಟಿಯಂ ಡಬ್ಬುಗಳ್ಳಿಯದನಾಳ್ಗಳಿಂ
ಕಡಿಸಿ ನಾಲ್ಕೊಳ್ಗಡಿಸಲುಗಳನು ಮಾಡಿಸಲಲ್ಲಿ-
ಗೊಡನೆ ದಯಮಾಡಿಸಿದನಾ ಮಹಾಂತೇಶ್ವರಂ ಪೇಳಿದಂದದೆ ಮರೆಯದೆ
ಸಡಗರಿಸುತದನೆಲ್ಲಮಂ ನೋಡಿ ಸಂತಸಂ-
ಬಡೆದೆಮಗಿದೊಂದೆ ಸಾಲದು ಪೊಲಂ ಬಿಡದೆ ಮುಂ-
ಗಡೆಯೊಳಿಹ ಮತ್ತೊಂದು ಪೊಲವಕೊಡಿಸಿ ಲಿಂಗಮುದ್ರೆಯಂ ನಿಲಿಪುದೆನಲು ॥ ೨೭ ॥

ಪೊಲವದೊರ್ಳ್ವ ಮಹೀಸುರನಡವಂ ಕೊಡದೊಡದ-
ಕಳತೆಗಿಂ ಮೀರಿಬೆಲೆಯಂ ಪೇಳ್ದೊಡೀಗ್ಯೈವು-
ದೊಳಿತಲ್ಲ ಮೊದಲದಂ ಮಾರುಗೊಂಡದಕೆ ಲಿಂಗಸ್ಥಾಪನೆಯ ಮಾಳ್ಪುದು
ನೆಲೆಗೊಳಿಸಬಾರದೀಗಳೆ ಮುದ್ರೆಗಳನೆಂದು
ಬಳಿಯೊಳಿರ್ದೋರ್ಪ ಭಕ್ತಂ ಪೇಳಲದಕೆ ನೀ-
ಪಳುಕಬೇಡಿರಿ ಶಿವನಕಾರ್ಯವಿದು ತಾನೆ ದೊರೆದಪುದಿದೆಂದೊರೆದು ಪಡೆಸು ॥ ೩೮ ॥

ಮರುದಿನಂ ರಥಸಪ್ತಮಿಯ ಸನ್ಮುಹೂರ್ತದೊಳು
ಚರವರ್ಯರುಂ ಪಟ್ಟದಾರ್ಯರುಂ ಪಿರಿಯರುಂ
ನೆರೆದು ಪರಮೋತ್ಸಾಹಮುಂ ಮಿಸುಗೆ ಮುಂಗಡೆಯ ಪಾರ್ಶ್ವದ ಪೊಲಂಗೂಡಿಸಿ
ವರಲಿಂಗಮುದ್ರೆಯಂ ನೆಲೆಗೊಳಿಸಿ ಶಂಕುವಂ
ಸರಿಯಾಗಿ ವಿಧಿಪೂರ್ವಕಂ ಮಹಾಂತೇಶ್ವರಂ
ಕರಸರೋರುಹಗಳಿಂ ಜಯನಿನಾದಮದುಣ್ಮೆ ನಿಲಿಸಿದಂ ಕರುಣದಿಂದ ॥ ೩೯ ॥

ಮೂರನೆಯ ದಿನಮಾ ಮಹೀಸುರನ ಪೊಲವದಂ
ಮಾರತೊಡಗಿದರು ಬಾಗಲಕೋಟೆಯಲ್ಲಿ ಸರ-
ಕಾರದವರಾವುದೋ ನೆವದಿಂದದಂ ತಿಳಿದು ಕೆಲವು ಶಿವಭಕ್ತರದನು
ಮೂರುನೂರೇ ರೌಪ್ಯಕಂಗಳಂ ನಲಿದಿತ್ತು
ಮಾರುಗೊಂಡರು ಬಿಡದೆ ಶಿವಯೋಗಮಂದಿರಕೆ
ಚಾರುಚರಚಕ್ರೇಶನಾದ ವಿಜಯಮಹಾಂತನಂ ಪೊಗಳ್ದರೆಲ್ಲರಂದು ॥ ೪೦ ॥

ಘನತಪೋನಿಷ್ಠರ್ಜಿತೇಂದ್ರಿಯರ್ನಿರಪಾಯ-
ರನುಭವಿಗಳೂರ್ಜಿತ ಕೃಪಾಪಾಂಗರಾಮ್ನಾಯ
ವಿನುತಶೀಲರೆನಿಪ್ಪ ಶ್ರೀಮಹಾಂತೇಶ್ವರಸ್ವಾಮಿಗಳು ತೋರಿವೆಡೆಯು
ಜನದೊಳು ಸುಶೋಭಿತಾನಂದಕರಮಾಗದಿರ-
ದನುದಿನಂ ಶಿವಯೋಗಸಾಧಕರಿಗನುವಾದು-
ದೆನುತೆಲ್ಲ ಪ್ರಮುಖರುತ್ಸಾಹದಿಂ ನಲಿದಾಡಿದರಕ್ಕೋಳಿ ನೋಡಿ ತಾವೆ ॥ ೪೧ ॥

ಪದಿನೆಂಟುನೂರಮೂವತ್ತನೆಯ ಕೀಲಕಾ-
ಬ್ದದ ಮಾಘಶುಕ್ಲಸಪ್ತಮಿಯ ಸುಮೂಹರ್ತದೊಳು
ಸದಯಾಂತರಂಗ ವಿಜಯಮಹಾಂತಶಿವಯೋಗಿ ಶಿವಯೋಗಮಂದಿರವನು
ಪದುಳದಿಂ ಸ್ಥಾಪಿಸಿದನಖಿಳ ಮಹನೀಯರ-
ಭ್ಯುದಯಮಂ ಪೊಂದಲಿದರಿಂದೆಮ್ಮ ಧರ್ಮವೆಂ-
ದೊದಗಿದಾನಂದಮಯ ಭಾವದಿಂ ಪರಸಿದರ್ಪ್ರಭುದೇವನಂ ನೆನೆವುತ || ೪೨ ||

ಇವನರಿದನೇಕಗುರುಚರ ಮಠಾಧಿಪರಿಲ್ಲಿ-
ಗದಿರದಾನಂದದಿಂ ನಿಜವಟುಗಳಂ ಕಳಿಸ-
ಲೊದಗಿದರು ಕಟ್ಟಡಗಳಾರಂಭಿಸಿದವಿಲ್ಲಿ ಗೋವುಗಳು ಬರಲಾದವು
ಮೊದಲೋರ್ವ ಪ್ರಾಥಮಿಕಶಿಕ್ಷಕನನುಂ ಶಾಸ್ತ್ರ-
ವಿದುಗಳಿರ್ರ್ವರನುಮಾವಟುಗಳಿಗೆ ವಿದ್ಯೆಗಲಿ-
ಪುದಕೆ ನಿಯಮಿಸಿದನೀ ಶ್ರೀಕುಮಾರೇಶ್ವರಂ ತಕ್ಕಸಂಬಳವನಿತ್ತು || ೪೩ ||

ಅರಿಯೆ ಕಿತ್ತೂರ ರೇವಣಸಿದ್ಧನಾಮ ಭೂ-
ವರಮಹಾಪದವೀಧರರ್ಕಳಬ್ಬಿಗೇರಿ-
ಪುರದ ಸಂಗನಗೌಡರುಂ ಪಾಲಕೆರೆಯ ಬಸವಣ್ಣಗೌಡರುಂ ಸಾಲೆಯ
ಗುರುವಾದ ಲಿಂಗಪ್ಪ ಮೊದಲಾದ ಪ್ರಮುಖಸ-
ತ್ಪುರುಷರೀ ಸಂಸ್ಥೆಯನು ಸ್ಥಾಪಿಸುವಕಾರ್ಯದೊಳು
ಪಿರಿದಾದ ಸಾಹಸಂ ಗೈದರೀ ಶ್ರೀಮತ್ಕುಮಾರೇಶನನುಮತಿಯೊಳು || ೪೪ ||

ಶಿವಯೋಗಮಂದಿರವನೀ ಕುಮಾರೇಶ್ವರಂ
ತವೆ ನಿರ್ಮಿಸಿದುದನೇ ಮೊದಲೆ ಪ್ರಾಚೀನದೊಳು
ಶಿವಶರಣ ಘಟ್ಟಿವಾಳಪ್ಪನೆಂಬವರು ತಮ್ಮ ಸಮಕಾಲಜ್ಞಾನದೆ
ವಿವರಿಸಿರ್ಪರದೋಲೆಗರಿಯ ಹೊತ್ತಿಗೆಯೊಳೊ-
ಪ್ಪುವದದಿತ್ತೀಚೆಗೋಮಮಸುಶೋಧಕ ಶರಣ-
ರವಲೋಕನಕ್ಕೆ ಬಂದುದು ಕಾಲಕರ್ಮಕನುಸರಿಸಿ ಬಲು ಸೋಜಿಗಮೆನೆ || ೪೫ ||

ಅದನು ಚಿತ್ರಿಗೆಯು ವಿಜಯಮಹಾಂತಶಿವಯೋಗಿ
ಸದುಗುಣಗಳಿಂ ಪ್ರಸಂಗಾನುಸಾರಂ ಕೇಳ್ದು
ಪದೆದು ಬಾಗಲಕೋಟೆಯಲ್ಲಿ ತೆಂಗಿನಮಠಸೋಳೆನ್ನಿಂದ ತರಿಸಿಕೊಂಡು
ಕ್ಷದಲಷ್ಟೈದಾರುತಾಸನಕ ತಾವೋರ್ವರೇ
ಹೃದಯಪೂರ್ವಕವಾಗಿ ನೋಡಿ ಬಳಿಕಾಪಟ್ಟ-
ಣದ ಪ್ರಮುಖರಂ ಕರಸಿಕೊಂಡೆದಿರೊಳಿಹ ಕುಮಾರೇಶನಂ ಪದೆದುನೋಡಿ ॥ ೪೬ ॥

ಗಿಡಮಾಗಡಿಯ ಪುರದ ಮಲಪುರಿಯ ದಂಡೆಯೊಳು
ನೃಪರೂಪಜಂಗಮನು ಬಂದಾನು ಭಿಕ್ಷೆಯುಂ
ಬಿಡದೆಬೇಡ್ಯಾನು ನೀಡಿಸಿಕೊಂಡು ನಿಂತಾನು ಹುಚ್ಚನೆನಿಸ್ಯಾನು ಮತ್ತೆ
ಕಡೆಗೆ ತಾನಲ್ಲಿಯೇ ಹುಗಿಸಿಕೊಂಡಾನೆಂದು
ಒಡೆದು ಕಾಣ್ಬಂದದಿಂದದರಲ್ಲಿ ಬರೆದಿರುವ
ಸಡಗರದ ವಚನದರ್ಥವನೊರೆಯತೊಡಗಿದಂ ತನ್ಮಹಾಂತನದೆಂತೆನೆ ॥ ೪೭ ॥

ಹಳೆಮಹಾಕೂಟವೇ ಗಿಡಮಾಗಡಿಯಪುರಂ
ಮಲಭೇದಿನೀನದಿಗೆ ಮಲಪುರಿಯೆನಿಪ್ಪರೀ-
ಹೊಳೆಯದಂಡೆಯೊಳೀಗಳಾಗಿರುವ ಶಿವಯೋಗಮಂದಿರಂ ಬೇರಲ್ಲವು
ತಿಳಿಯ ಜಂಗಮದೇವನಾವಾತನೆಂದಡು-
ಜ್ಜ್ವಲಮೂರ್ತಿ ಅಕ್ಕಕ್ಕ ಈತನೇ ನೋಡೆಂದು
ಚಲುಸೊಗಸಿನಿಂ ಬೆರಳುಮಾಡಿ ತೋರಿಸಿದನೀ ವಠಕುಮಾರೇಶ್ವರನನು ॥ ೪೮ ॥

ಜನರತಿಶಯಾನಂದಮಂ ಪೊಂದಿದರು ಕುಮಾ-
ರನದಕ್ಕೆ ಬುದ್ಧಿ ತಾವಿಂತಪ್ಪಣೆಯ ನೊಲವಿ-
ನೆನಗಾಗಿ ಮಾಳ್ಪರೇ ಸಲ್ಲೆನಾನಿದಕೆ ಮತ್ತಾರಾದಡುಂ ಮಹಿಮರು
ಅನುರಾಗದಿಂದಲ್ಲಿಗೈತರುತ್ತಿರಲಹುದು
ನೆನೆಯಲಿಪರೊಳಗಾಗಿ ಬಂದಲ್ಲಿ ಸಲ್ಲೀಲೆ-
ಯನು ಮಾಡಿ ಲಿಂಗೈಕ್ಯರಾಗಿರಲು ಬಹುದು ನಾನಲ್ಲವೆಂದೀತನೆನಲು ॥ ೪೯ ॥

ನೀನಲ್ಲವೇ ಯೋಗಿ ? ಹಾಗಾದರಿಂತಲಿ ಬಿಡು
ನೀನೋರ್ವ ತಿರುಕನೆಂಬೆನು ತಿರುಕನಹುದು ಬಿಡು
ನೀನು ತಿರುಕಂ ತಿರುಕನೆಂಬೆನಿದಕೊಪ್ಪಿಗೆಯೆನಿಮಗೆಂದು ಕೇಳುತ್ತಿರುವ
ಮಾನಿಗಳನಗಿಸಿ ಬಿನದಿಸಿ ತಾನು ನಸುನಗು-
ತ್ತಾನಂದದಿಂದಾ ಮಹಾಯೋಗಿಯೀತನಹು-
ದೇನು ಸಂಶಯಮಿಲ್ಲವೆಂದಾ ಮಹಾಂತನದರರ್ಥಮಂ ಪೇಳ್ದನೊಪ್ಪಿ ॥ ೫೦ ॥

ಇದಕ್ಕೆ ಮೊದಲೀ ಮಹಾಂತೇಶನೊಮ್ಮೆ ಮಂದಿ-
ರದ ಜಾತ್ರೆಗೈತಂದ ಸಮಯದೊಳು ಭರದೆ ಜರು-
ಗಿದಮಠದ ಕಟ್ಟಡವ ನೋಡಿ ಸರಿಯಿಲ್ಲೆಂದು ಸಭೆಯಲ್ಲಿ ನುಡಿಯಲ್ಕೊಡನೆ
ಸದಮಲ ಮಹಾಪ್ರಭುವರೇಣ್ಯನೀವೇ ನಿಮ್ಮ
ಹೃದಯಕೊಪ್ಪುವತೆರದೊಳಿದನಾಗಿಸುವದೆಂದು
ಪದುಳದಿಂದೀ ಕುಮಾರೇಶ್ವರಾದಿ ಪ್ರಮುಖರ್ಕೈದೆ ಬಿನ್ನಯಿಸಲಾಗ ॥ ೫೧ ॥

ನಾವೆ ಮಾಡಿಸುವೆವಾದೊಡೆ ಹಾಗೆಹೀಗೆಂದು
ನೀವಾರುಮೆಮಗೆ ಪೇಳಲು ಬಾರದೇನುವಂ
ಭಾವವೊಪ್ಪಿದೊಡೊಪ್ಪಿಸಿರಿ ನಮಗೆ ನಡುವೆಬರಬಾರದೇನೊಂದು ತೊಡಕು
ನಾವಿದರೊಳೊಂದು ದಮ್ಮಡಿಯನುಂ ತಿನ್ನದಿಹೆ
ವಾವಸಂದೆಗಮಿಲ್ಲ ಸುಳ್ಳಲ್ಲವೆಂದಾಡ-
ಲಾ ವಿರಾಟ್ಪುರದೊಡೆಯನೋ ಮಹಿಮ ನಿಮ್ಮತದಲ್ಲವೆ ಮಹಾಮತವಿದೆನಲು ॥ ೫೨ ॥

ಇಲ್ಲಿಲ್ಲ ಸುಳ್ಳಿಲ್ಲ ನಾವೇನುಮಂ ಕೊಳ್ಳ-
ದಿಲ್ಲ ದಿಟಮಂ ಪೇಳ್ವೆನಾದಡುಂ ಬಲ್ಲವರ
ನೆಲ್ಲರಂ ಕೇಳಿರಾವೆಂತಹವರೆಂಬುದಂ ಪೇಳುವರು ನೋಡಿರೆಂದು
ನಿಲ್ಲದೀ ಕಟ್ಟಡಂ ಪೊಳ್ಳಾಗುತಿಹುದು ನಾ-
ವೊಳ್ಳೆಬಿಗಿಯಪ್ಪಂತೆ ಕಟ್ಟಿಸಲು ಬೇಕೆಂಬೆ
ವಲ್ಲದಿನ್ನೊಂದಿಲ್ಲವೆಂದಾಡಲೆಲ್ಲರುಂ ನಕ್ಕರುತ್ಸಾಹದಿಂದೆ ॥ ೫೩ ॥

ಈ ಮಹಾತ್ಮನ ಸರಳಮನಕೆ ಪಾವನ ವೃತ್ತಿ-
ಗೀ ಮನೋಹರಲೀಲೆಗಾಶ್ಚರ್ಯ ಭೀತಿವಡೆ-
ದೀ ಮಹಾಂತೇಶನೊಡನಾಟಮುಂ ಪುಲಿಯಗೆಳೆತನಮುದೊಂದೇ ಎನುತ್ತ
ಶ್ರೀಮತ್ಕುಮಾರೇಶನಿವನಧೀನತೆಯಿಂದ
ಪ್ರೇಮಮುಂ ಪಿಂಗೆ ಬಾಳ್ಪನಾವಗಂ ಗೆದ್ದಲಿಡಿ-
ದಾ ಮಠಂ ಪೊಳ್ಳಾಗಿ ಜೊಳ್ಳಾಗಿ ಸರಿಗೊಳಿಸಿಗೊಳ್ಪುದಾಗಾಗ ಬಿಡವೆ ॥ ೫೪ ॥

ಅಂತು ಸಂಧಿ ೧೨ ಕ್ಕೆ ಪದಗಳು ೫೬೦

ಓಂ



* ॥ ಶ್ರೀ ಶಿವಗಣೇಭ್ಯೋ ನಮಃ ॥ *



## ಹದಿನೂರನೆಯ ಸಂಧಿ ಪ್ರಾರಂಭ



**ಸೂಚನೆ:—**

ಶಿವಯೋಗಮಂದಿರೋದ್ದೇಶಾದಿಗಳನೆಲ್ಲ
ಸುವಿಚಾರಯತ್ನಂಗಳಿಂ ಕಾರ್ಯಸೃಷ್ಟಿಯೊಳು
ತವಕಮುಂ ಮಿಗೆಮುಡಿದು ಬರಮಾಡಿದಂ ಶ್ರೀಕುಮಾರಶಿವಯೋಗೀಂದ್ರನು ॥

ಮರಣವೆಂಬ ತಿಥಿಯೆನ್ನೆಡೆಗೆ ಬಂದೊಡೆ ನಾನು
ಕರಣಪಂಚಪ್ರಾಣಗಳನವಂಗಿತ್ತು ಸ-
ತ್ಕರಿಪೆನಾದೊಡೆ ನಿನ್ನ ಚರಣಮಂ ನೆನೆಯಲಿಲ್ಲೆಂಬ ವಾಸನೆಯೆನ್ನೊಳು
ಪಿರಿದಾಗಿ ಭವಭವಗಳೊಳ್ಪೆಳೆವುತಿಹಲೆಂದು
ಸೆರಗೊಡ್ಡಿ ಬೇಡುವೆನು ಕರುಣಿಸೆನಗಿದನೆ ನಾ-
ಶರಣಪದಕರ್ಹನಲ್ಲಮೊಡಿನಿತಕಾದಡುಂ ಸಲ್ಲದಿರ್ಪ್ಪೆನೆ? ಮಹೇಶ ॥ ೧ ॥

ಪನ್ನೆರಡು ವರ್ಷದೊಳಗಿರುವರಿಗೆ ವಟುಗಳೆಂ-
ದುಂ ನೆರೆತವರ್ಗೆ ಸಾಧಕರೆಂದೆರಳ್ಭಾಗ-
ಮಂ ನಿರ್ಮಿಸಿದನು ವಟುಗಳ್ಸಾಧಕರು ವ್ಯವಸ್ಥಾಪಕರುಮನುಭವಿಗಳು
ಸನ್ನುತಾಧ್ಯಾಪಕರು ಗ್ರಂಥಶೋಧಕರು ಬಹು-
ಮನ್ನಣೆಯ ಸೇವಕವ್ರಾತಮೆಂಬೇಳ್ವರ್ಗ-
ಮಂ ನಿಯಮಿಸಿದನು ತೊಡಕಾಗದಂತೀ ಕುಮಾರೇಶನೀ ಸಂಸ್ಥೆಯಲ್ಲಿ || ೨ ||

ಗುರುಚರವರೇಣ್ಯರ್ಸದಾಚಾರ ಸುಜ್ಞಾನ
ನಿರುಪಮವಿರಕ್ತಿ ಸದ್ಭಕ್ತಿಷಟ್ಸ್ಥಲಶಾಸ್ತ್ರ-
ಪರಿಣತಿ ಸುಭಾಷಣ ದ್ವೈತಾದಿಸಿದ್ಧಾಂತಸುವಿಚಾರ ಯೋಗನೀತಿ
ಕರುಣಾದಿ ಸದ್ಗುಣಗಳಿಂದ ಶಿವವ್ರತವನು-
ದ್ಧರಿಪಂತೆ ತಿದ್ದುಪಡಿಯಪ್ಪ ಶಿವಯೋಗಮಂ-
ದಿರವ ಮಹಿತೋದ್ದೇಶಸಫಲಕೀ ಮಹಿಮನೆಸಗಿವನುಪಾಯವನೆಂತೆನೆ || ೩ ||

ಪರಿಶುದ್ಧವಹ ಗುರುಸ್ಥಲಮಠಾಧಿಪರ ಪ-
ನ್ನೆರಡುವರ್ಷದ ವಟುಗಳಂ ಬಿಡದೆ ಕೊಂಡಿಲ್ಲಿ
ಸರಿಯಾಗಿ ನ್ಯಾಯಮಂ ವ್ಯಾಕರಣಮಂ ಮತ್ತೆ ವೇದಾಂತಶಾಸ್ತ್ರಂಗಳ
ಪರಿಚಯವ ಮಾಡಿಕೊಟ್ಟೆಮ್ಮ ಧರ್ಮಗ್ರಂಥ
ಪರಿಕರವನಾಗಮಾಮ್ನಾಯೋಪನಿಷದಖಿಲ
ಪರಮಸ್ಮೃತೀತಿಹಾಸ ಪುರಾಣಗಳನಾದಿ ಶರಣವಚನವನೋದಿಸಿ || ೪ ||

ಲಿಂಗಾಂಗಸಾಮರಸ್ಯಜ್ಞಾನಮಂ ಮಾಡಿ-
ಯಂಗನಾದರ್ಶನಮದಿಲ್ಲದಿಪ್ಪತ್ತೈದು
ಪೊಂಗ ಮೂವತ್ತೈದು ನಾಲ್ವತ್ತೈದಬ್ದ ವಯವಾಗುವನಕಲ್ಲಿಯಿರ್ದು
ಪಿಂಗದೀ ಬ್ರಹ್ಮಚರ್ಯಾದಿ ಸದ್ಗುಣವೃತ್ತಿ-
ಯಂ ಗಳಿಸಿ ಶಿವಯೋಗಿಯಾಗಿ ಗುರುಜಂಗಮರ
ಮಂಗಲದ ಪೀಠಕಧಿಕರ್ತರಾಗುವದೊಂದುಪಾಯಮೀ ಘನಸಂಸ್ಥೆಯ || ೫ ||

ಅಲ್ಲಲ್ಲಿ ಶಿವಯೋಗಮಂದಿರದ ಶಾಖೆಗಳು
ಸಲ್ಲಲಿತ ಶೋಭನಾಶ್ರಮವಾಗಿ ನೆಲಿಸಬೇ-
ಕಲ್ಲಿ ಸರ್ವರಿಗೀ ಶಿವಾನುಭವಬೋಧೆಯಪ್ಪಂತೆಸಗಬೇಕಿದೊಂದು
ಇಲ್ಲಿಗೈತಂದವರಿಗೋದಲನುಕೂಲಮಾ-
ದೆಲ್ಲ ಗ್ರಂಥಗಳುಳ್ಳಸದ್ವಾಚನಾಲಯವ
ಬಲ್ಲವರಮನವೊಪ್ಪುವಂತೆ ನಿರ್ಮಿಸಬೇಕಿದೊಂದವಶ್ಯೋಪಾಯವು ॥ ೬ ॥

ಮತಸುಧಾರಣೆಗವಶ್ಯಮೆನಿಪ್ಪ ಸದ್ವಿಷಯ
ತತಿಯನೊಳಕೊಂಡ ಕೀರ್ತನಗಳಂ ರಚಿಸಿ ವಿ-
ಶ್ರುತಕಥಿಕರಂ ಪುರಾಣಿಕರನುಂ ಬಲುಪೆರ್ಚಿಸುವದೊಂದುಪಾಯಮಿನ್ನು
ನುತಧಾರ್ಮಿಕ ವ್ಯಾವಹಾರಿಕ ಮಹಾಶಾಸ್ತ್ರ-
ಮತಿಯುಳ್ಳ ಬೋಧಕರನೆಲ್ಲ ಕಡೆಯೊಳು ಕಳುಪಿ
ಸತತಮುಪದೇಶದಿಂ ಜನರನೆಚ್ಚರಿಪಂತೆ ಮಾಳ್ಪ ಸದುಪಾಯಮೊಂದು ॥ ೭ ॥

ಆವುಗಳನೀ ಮಹಾಶಿವಯೋಗಮಂದಿರದೊ-
ಳೋವಿ ಗೋವ್ರಯದಿಂದ ಶಾಸ್ತ್ರವಿಧಿಗನುಸರಿಸಿ
ಪಾವನವಿಭೂತಿಯಂ ಮಾಡಬೇಕದರ ರೀತಿಯನೆಲ್ಲಕಡೆಯಜನಕೆ
ಭಾವವೊಡಬಡುವಂತೆ ಕಲಿಸಬೇಕದನಖಿಲ-
ರಾವಗಂ ಬಳಿಸಲನುಕೂಲಮಪ್ಪಂದದಿಂ
ಭೂವಲಯದೊಳ್ಪ್ರಸಾರಂಗೈಯಬೇಕೆಂಬುದೊಂದುಪಾಯಂ ತಿಳಿಯಲು ॥ ೮ ॥

ಶಿವಮತೀಯರ್ಗೆ ಸುಪ್ರಾಯಮಾದಿಷ್ಟಲಿಂ-
ಗವಿದ್ದೈದು ಸೂತ್ರಂಗಳಿಂದೊಪ್ಪಬೇಕದಂ
ಹವಣವರಿಯದ ಮೂಢರಾ ಸೂತ್ರಕಂತರಿಸಿ ಮೂಡಿ ಮಾರುತ್ತಿರ್ಪರು
ಶಿವಶಿವಾ ತಪ್ಪಿದೆಂದರಿದು ಶಾಸ್ತ್ರೋಕ್ತಮೀ
ಶಿವಯೋಗಮಂದಿರದೊಳುರುಲಿಂಗಮಂ ಮಾಳ್ಪ
ಸುವಿಚಾರಮಯಮಾದ ಸಾಲೆಯಿರಬೇಕೆಂಬುದೊಂದುಪಾಯಮಿದಾದುದು ॥ ೯ ॥

ಬಿಡದೆ ವರ್ಷಕ್ಕೊಂದುತಿಂಗಳಂತೊಡೆಯರಿಂ
ಬಿಡದೆ ಪಡೆದೆಲ್ಲಶಿವಮತದ ಶಿಕ್ಷಕರೈದಿ
ಸಡಗರದ ಶಿವಯೋಗಮಂದಿರದೊಳೆಮ್ಮ ಮತತತ್ವಗಳನರಿದು ಪೋಗಿ
ಎಡಬಲದ ಪಳ್ಳಿಯೊಳು ತಾವಿರುವ ಗ್ರಾಮದೊಳು
ನಡೆನುಡಿಗಳಂ ಕಲಿಸಬೇಕು ಕಿರಿಹೊತ್ತಿಗೆಯ-
ನೊಡರಿಚಿ ಮತೀಯರೊಳು ಪಸರಿಸಲು ಬೇಕೆಂಬುದೊಂದುಪಾಯಮಿದು ಮತ್ತೆ ॥ ೧೦ ॥

ಮದುಕರಾದೀ ಮತದ ಭಕ್ತಮಾಹೇಶರುಂ
ಸದುಗತಿಯನೇಸುವ ಮುಮುಕ್ಷುಗಳ ಗಡಣಮುಂ
ಸದರಮೆನಿಸೀ ಮಂದಿರಕ್ಕೆ ಬಂದಭವಾನುಭವ ಶಾಸ್ತ್ರವರಿದು ತಮ್ಮ
ಪರಿಚಿತರೊಳಾಪ್ತರೊಳು ಬಂಧುಬಳಗಗಳಲ್ಲಿ
ತರುಣಿಯರೊಳೊಡೆದು ಧರ್ಮವನರುಪಿ ಸಾಧಕೋ-
ತ್ಕರಕೆ ತಕ್ಕಾಶ್ರಯಂಗೊಡುವಂತೆ ಮಾಡಬೇಕೆಂಬೊಂದುಪಾಯಮಿಹುದು ॥ ೧೧ ॥

ಅನುಕೂಲಕಾಲದೊಳು ಕೃಷಿಕಾದಿಕಾಯಕದ
ಜನರು ಶಿವಯೋಗಮಂದಿರಕ್ಕೈದಿ ಸಾಧ್ಯಮಾ-
ದನಿತು ಧರ್ಮಜ್ಞಾನಮಂ ಮಾಡಿಕೊಂಡು ಪೋಪಂತೆಸಪುದೊಂದುಪಾಯಂ
ವಿನುತ ಧರ್ಮಪ್ರಸಾರಕೆ ಯೋಗ್ಯವಾದ ಕೀ-
ರ್ತನ ಭಜನೆ ಶಿವಪುರಾಣಂಗಳಿಗೆ ಮಧುರಸಾ-
ಧನವಾದ ಸಂಗೀತವಿಲ್ಲಿ ದೊರೆವಂತೆ ಮಾಡುವದೊಂದುಪಾಯಮಿದರ ॥ ೧೨ ॥

ಒಡಲಾಸೆಗಾಗಿ ನಿಜಕರ್ತವ್ಯಮಂ ಮರೆದು
ಜಡಭಾವದಿಂ ತಿರಿವ ಕಾಯಕದ ಗಣವರರ
ಗಡಣಮಂ ಬರಮಾಡಿಕೊಂಡಾ ಪುರಾತನರ ಕಾಯಕದ ರೀತಿಗಲಿಸಿ
ದೃಢಧರ್ಮತತ್ವಪ್ರಸಾರಮಂ ಮಾಳ್ಪಂತೆ
ನಡೆನುಡಿಗಳಂ ಸುಧಾರಿಸಿ ಸ್ವಮತಸೇವೆಯೊಳು
ತೊಡಗಿಪುದಿದೊಂದು ಶಿವಯೋಗಮಂದಿರವ ಸದುಪಾಯಮೊಂದಾಗಿರ್ಪುದು ॥ ೧೩

ಲಿಂಗಧಾರಣ ಲಿಂಗಪೂಜೆ ಪರಶಿವದೀಕ್ಷೆ
ಮಂಗಲೋದ್ವಾಹಾದಿ ಧರ್ಮಕಾರ್ಯಂಗಳಂ
ಪಿಂಗದಾಗಮ ವಿಧಿವಿಧಾನಾನುಗುಣವಾಗಿ ಪೊಳ್ದ ಮಂತ್ರಕ್ರಮವನು
ಪೊಂಗಿ ಪರತರಗುರುಸ್ಥಲದ ಮಾಹೇಶರಿಗೆ
ಸಾಂಗಮೆನೆ ಕಲಿಸಬೇಕೆಂದು ನಿರ್ಧರಿಸಿಹುದು
ಕಂಗೊಳಿಪ ಶಿವಯೋಗಮಂದಿರವಿದೊಂದದರುಪಾಯಂ ಪ್ರಸಿದ್ಧಮಾಗೆ ॥ ೧೪ ॥

ವೀರಶೈವರ ಧರ್ಮಶಾಸ್ತ್ರಪ್ರಮಾಣಗಳು
ತೋರುತಿಹವೆಲ್ಲ ಸಂಸ್ಕೃತಭಾಷೆಯೊಳಗವಂ
ಧೀರರಿಂ ಪರಿವರ್ತನಂಗೊಳಿಸಿ ಕನ್ನಡದೊಳೆಲ್ಲರೊಲಿದೋದಿ ಮತದ
ಸಾರಮಂ ತಿಳಿವಂದದಿಂ ಮುದ್ರಣವ ಮಾಡಿ
ಮಾರಿಸುವದಲ್ಪಕ್ರಯಕ್ಕೆಂಬುದೊಂದತಿಸು-
ಧಾರಣೋಪಾಯಮೆನೆಮಾಡಿದಂ ಪರಮಧರ್ಮೋದ್ಧಾರಕಾರ್ಯರಮನು ॥ ೧೫ ॥

ಮತಶಾಸ್ತ್ರಗಳನಾಂಗ್ಲವಿದ್ಯೆಯಂ ಕಲಿತ ಪಂ-
ಡಿತರನೀ ಸಂಸ್ಥೆಗೊಂದಿಸಿಕೊಂಡು ವೀರಶಿವ-
ಮತಧರ್ಮಶಾಸ್ತ್ರಗಳನಾಂಗ್ಲಭಾಷೆಯೊಳು ಬರಿಯಿಸಿ ಮತ್ತಮವರಿಂದಲೇ
ಹಿತಮಾದುಪನ್ಯಾಸಗಳನು ಜನಸಾಮಾನ್ಯ-
ಕತುಲವಿದ್ಯಾರ್ಥಿಗಳನಲ್ಲಲ್ಲಿ ಮಾಡಿಸುತ
ಕ್ಷಿತಿಯೊಳಿಹ ಸಕಲಸಂಸ್ಥೆಗಳನರಿವುತ ಧರ್ಮರಕ್ಷಣದ ವಿಷಯವಾಗಿ ॥ ೧೬ ॥

ಸರಕಾರದೊಡನೆ ಪತ್ರಗಳ ವ್ಯವಹಾರಮಂ
ಜರುಗಿಸುವದೊಂದುಪಾಯಂ ವೀರಶೈವಮತ-
ಪರವಾದಭಾಷ್ಯಾಗಮೋಪನಿಷದಾಳಿಯಂ ಮತ್ತೆ ಪೂರ್ವದ ಜಾಣರು
ನೆರೆ ಶೋಧದೃಷ್ಟಿಯಿಂ ಸಂಗ್ರಹಿಸಿ ಬರೆದೋಲೆ-
ಗರಿಯಹೊತ್ತಿಗೆಯೆಲ್ಲಮಂ ಪುಡುಕಿ ಸರಿಯಾಗೆ
ಪರಿಶುದ್ಧಮುದ್ರಣಂಗೊಳಿಸಿ ಪಸರಿಸುವಂತೆ ಮಾಳ್ಪದೊಂದಿದರುಪಾಯಂ ॥ ೧೭ ॥

ಬರಿಯಸಂಸಾರದೊಳು ತಾವಿರ್ದಡೇನಾಯ್ತು
ಸಿರಿದೆನಿಪ ಬ್ರಹ್ಮಚರ್ಯವ ಕಾಯ್ದುಕೊಂಡು ಭಾ-
ಸುರವಾದ ಶಿವಯೋಗಮಂದಿರಕ್ಕೈತಂದು ಭಕ್ತಮಾಹೇಶರ್ಕಳು
ನೆರೆತಮಗೆ ಸಾಧ್ಯವಾದನಿತು ಶಿವಮತತತ್ವ-
ದಿರವನಭ್ಯಾಸಿಸಲ್ತಕ್ಕಾನುಕೂಲ್ಯಮಂ
ದೊರೆಕೊಳಿಸುತಿರ್ಪುದೀ ಶಿವಯೋಗಮಂದಿರದಿದೊಂದುಪಾಯಂ ಭಾವಿಸೆ ॥ ೧೮ ॥

ಸ್ವಮತಧರ್ಮಗ್ರಂಥನಿಚಯದಭ್ಯಾಸ ಸು-
ಕ್ರಮಮಂ ಪ್ರಚಾರದೊಳು ತರಲೆಂಬಭಾವದಿಂ
ವಿಮಲಧರ್ಮಗ್ರಂಥಗಳ ಪರೀಕ್ಷೆಯನಿಟ್ಟು ಶಿವಯೋಗಮಂದಿರದೊಳು
ಭ್ರಮಿಸದುತ್ತೀರ್ಣರಾದಭ್ಯಾಸಿಗಳಿಗೊಪ್ಪಿ
ಪ್ರಮುಖಸಭೆಯೊಳು ತಕ್ಕಬಹುಮಾನಮಂ ಮಹಾ
ಸುಮನಸರ ಹಸ್ತದಿಂ ಕೊಡಿಸುವೊಂದಿದರುಪಾಯಂ ಬಹುಶ್ಲಾಘ್ಯಮಾಗೆ ॥ ೧೯ ॥

ಜರುಗುತಿಹ ಶ್ರೀ ಮಹಾಶಿವರಾತ್ರಿಯಾತ್ರೆಯೊಳು
ನೆರೆದೆಲ್ಲ ಜನಗಳಾಲಿಸಿ ತಿಳಿದು ಮತದೊಳೆ-
ಚ್ಚರಿಸಂತೆ ಪಂಡಿತರ ವ್ಯಾಖ್ಯಾನ ಕೀರ್ತನ ಪುರಾಣ ಪ್ರವಚನಂಗಳು
ಗುರುಚರೇಶ್ವರ ಭಜನೆಗಳು ಧರ್ಮನೀತಿಪರ
ಸರಸಗೀತಾದಿಗಳು ಸಾಗಬೇಕಿದುವೊಂದು
ಸಿರಿದಾದುಪಾಯಮೀ ತೆರದೆ ಹತ್ತೊಂಬತ್ತುಪಾಯನಿರ್ಣಯಮಾದುದು ॥ ೨೦ ॥

ಶಿವಯೋಗಮಂದಿರವಿದೆನ್ನ ಪ್ರಾಣಂ ಮಾನ-
ಮವಿಕಲಸುಖಂ ಪೇರ್ಮೆ ಸರ್ವಸ್ವಮಿದರೇಳ್ಗೆ-
ಯವನತಿಗಳತ್ಯಂತವೃದ್ಧಿಹಾನಿಗಳಿದೇ ಮೋಕ್ಷಸಾಮ್ರಾಜ್ಯವೆಂದು
ಸವೆಯದುತ್ಸಾಹದಿಂ ತಮ್ಮ ಮತವಂ ಮರೆದು
ಸವೆಯಲಾದರ್ಶನುಮಃನೋಮತಿವಿಚಾರಗಳ-
ನವಿರತಂ ಶಿವಯೋಗಸಂಪದವಿದೆಂದರಿದು ವಿಘ್ನಂಗಳಿಗೆ ಜೆದರದೆ ॥ ೨೧ ॥

ಸೇರಿದೀ ಗುರುವರ್ಗದವ.ಲಮಾಹೇಶ್ವರ ಕು-
ಮಾರರಂ ಪೆತ್ತವರಿಗಿಂದ ಬಲುಪೆರ್ಚ್ಚಾಗಿ
ಕಾರುಣ್ಯದಿಂದ ಕಾಪಾಡಿ ಕನ್ನಡಸಂಸ್ಕೃತಂಗಳಂ ಕಾವ್ಯಗಳನು
ಪಾರಮಾರ್ಥವಿಚಾರಶಾಸ್ತ್ರಂಗಳಂ ಸದಾ-
ಚಾರಮಂ ನಿಖಿಲಾಸನಂಗಳಂ ಷಟ್ಕರ್ಮ
ಸಾರಮಂ ಕಲಿಸಿ ಗುರುಚರಸೀಠಕಧಿಕೃತರನಾಗಿಸಿಪನೀ ಯತಿಪನು ॥ ೩೨ ॥

ಹರಮತಾಚಾರವಲ್ಲಲ್ಲಿ ಪಸರಿಸಲೆಂದು
ಹಿರಿಯರಾಶ್ರಯದಿಂದ ಸಿಡಗುಂದಿಕೊಪ್ಪದೊಳು
ಹಿರಿಯಹಾಳೊಳು ಕಪನಹಳ್ಳಿಯೊಳು ಬಾದಾಮಿಮೊದಲಾದ ಗ್ರಾಮಗಳೊಳು
ಪಾಮಶಾಖಾಮಂದಿರಗಳನೇರ್ಪಡಿಸಿದಂ
ಮೆರೆವವೀಗಳ್ಮನೋಹರ ಶಿವಾಶ್ರಮವೆನಿಸಿ
ವರದಶಿವಯೋಗಿಗಳನುಷ್ಠಾನಮಂ ಮಾಳ್ಪರಾತಾಣಗಳೊಳಾಗಳು ॥ ೩೩ ॥

ಒಸೆದು ರೇವಣಸಿದ್ಧವಾಚನಾಲಯವೆಂಬ
ಪೆಸರಿನುದ್ಗ್ರಂಥಭಾಂಡಾರವಂ ಮಂದಿರದೊ-
ಳೆಸಗಿಹಂ ಕರ್ನಾಟಕಾಂಗ್ಲಸಂಸ್ಕೃತ ಮಹಾರಾಷ್ಟ್ರಹಿಂದೀಗ್ರಂಥದ
ವಿಸರದಿಂ ಮಾಸಪ್ರೆಸಿಕವಾರಪತ್ರದಿಂ
ಮಿಸುಪೋಲೆಗರಿಯ ಹೊತ್ತಿಗೆಗಳಿಂ ಮತ್ತೆ ಮು-
ದ್ರಿಸಿದಕೆಲಹಳೆಯಗ್ರಂಥಂಗಳಿಂ ವಚನಶಾಸ್ತ್ರಂಗಳಿಂ ತುಂಬಿಹುವದು ॥ ೩೪ ॥

ವರಶಿವಾದ್ವೈತಭಾಷ್ಯಾಗಮಾದ್ಯುಪಯುಕ್ತ
ಹರಮತ ಗ್ರಂಥಶೋಧನಕೆಲ್ಲಕಡೆಗಳೊಳು
ಪರಿಶೋಧಕರನಟ್ಟಿ ತರಿಸಿದನು ದೊರೆದನಿತು ಕೆಲಕೆಲವು ಗ್ರಂಥಗಳನು
ಮೆರೆವಾ ಸಿಕಂದರಾಬಾದದೊಳಗಾರಾಧ್ಯ-
ರಿರುವರವರಲ್ಲಿ ಮುದ್ರಣವಾಗದಿರ್ದ ಹಳೆ-
ಹಿರಿಯವಿಷಯಗ್ರಂಥಗಳನು ಬರೆಸುವ ವಿಚಾರದೊಳಿರ್ಪನೀ ಮಹಿಮನು ॥ ೩೫ ॥

ಪರದೇಶಗಳೊಳು ದೊರೆಯುವ ಸ್ವಮತಪರಮತದ
ಪರಮಧರ್ಮಗಳ ಗ್ರಂಥವ ತಂದು ಕನ್ನಡದೆ
ಪರಿವರ್ತನಂಗೊಳಿಸಿ ಮತ್ತೆ ಮದ್ರಾಸಾದಿನಗರಗಳೊಳುಪ್ಪುತಿರುವ
ಸರಕಾರದಖಿಲಪುಸ್ತಕ ನಿಧಿಯೊಳಿರ್ಪೋಲೆ-
ಗರಿಯ ಕೈಬರಹದುತ್ತಮಧರ್ಮಪುಸ್ತಕೋ-
ತ್ಕರವನಿಲ್ಲಿಗೆ ತರಿಸಿ ಶಿವಯೋಗನಿಲಯದೊಳು ಸಂಗ್ರಹಿಸಬೇಕು ಬಳಿಕ ॥ ೨೬ ॥

ಅವುಗಳೊಳಗಚ್ಚಾಗದಿರ್ದ ಗ್ರಂಥಂಗಳಂ
ತವೆ ಮುದ್ರಣಂಗೊಳಿಸಬೇಕು ಮುದ್ರಾಲಯಂ
ಶಿವಯೋಗಮಂದಿರದೊಳಾಗಬೇಕೆಂದು ನಿಶ್ಚಯಿಸಿ ಯತ್ನದೊಳಿರ್ದನು
ತವಕದಿಂ ಕರ್ನಾಟಕಾಂಗ್ಲಸಂಸ್ಕೃತವನೋ-
ದುವರಿಗನ್ನಾರ್ಥವಸನಗಳನನುಕೂಲಿಸಿದ-
ನವಿರತಂ ಕಾರುಣ್ಯಭಾವದಿಂದಲ್ಲಲ್ಲಿ ಪ್ರೋತ್ಸಾಹವಡಗದಂತೆ ॥ ೨೭ ॥

ಶಿವಪೂಜೆಯೆಡೆಯ ಷಟ್ಸಮ್ಮಾರ್ಜನಕ್ಕಾಗಿ
ಶಿವಲಿಂಗಪಂಚಾಮೃತಾಭಿಷೇಕಕ್ಕಾಗಿ
ಶಿವನನ್ನೈವೇದ್ಯಶುಭದೀಪಗಳಿಗಾಗಿ ಶಿವಯೋಗಸಾಧಕರಿಗಾಗಿ
ಸುವಿಭೂತಿಗಾಗಿ ಗೋವುಗಳು ಬೇಕೆಂದು ಗೋ-
ನಿವಹಮಂ ಸಂಗ್ರಹಿಸತೊಡಗಿದಂ ಚರವರಂ
ಶಿವಭಕ್ತರರಿದು ಗೋವುಗಳನಿತ್ತರು ದಾನಮಾಗಿ ಪದೆದೀಸಂಸ್ಥೆಗೆ ॥ ೨೮ ॥

ಗೋಸಂಖ್ಯೆ ಪೆರ್ಚಿದುದು ಮೂರುನೂರರ ವರೆಗೆ
ಗೋಸೇವೆಗಾಗಿ ನಿಯಮಿಸಿದನಾಳ್ಗಳನು ತ-
ದ್ಗೋಸುಧಾದಿಗಳಿಂದ ಯೋಗಸಾಧಕರ ನಿರ್ವಾಹವಾಗುತ್ತಿರ್ಪುದು
ಭಾಸುರಮಹಾಗೋಷ್ಠಮುಂಟಲ್ಲಿ ಗೋಗಣಕೆ
ಘಾಸವಂ ಸಂಗ್ರಹಿತಿರುವಾಳ್ಬಳಗಮುಂಟು
ಗೋಸಮೂಹಂ ಮೇಯಲನುಕೂಲಮೆನಿಸಿ ಬಿತ್ತರಮಾಗಿ ಹತ್ತರದೊಳು ॥ ೨೯ ॥

ಮಳೆಯಿಲ್ಲವೊಂದುವರ್ಷಂ ಗುಡ್ಡದೊಳು ಹುಲ್ಲು
ಬೆಳೆಯದುದರಿಂದಾವುಗಳ ಹಾಲು ತಮ್ಮ ಕರು-
ಗಳಿಗಾಗದಿರ್ಪುದಂ ತಿಳಿದೀ ಮಹಾತ್ಮನಾವತ್ಸಗಳ ಬಾಯುಬಡಿದು
ಎಳಸಿನಾಪ್ಪಕೆಡುಂಬುದೇ ಮಹಾಪಾಪವೆಂ-
ದಳುಕಿ ನಾವೆಲ್ಲರುಂ ಪಾಲುಣ್ಣದೇಬಿಟ್ಟು
ಕರುಗಳನೆ ಕರುಣದಿಂ ಪೋಷಿಪಂತೆಸಗಿದಂ ವನಗಾವಜನಕೆ ಹೇಳಿ ॥ ೩೦ ॥

ತಾಯಮೊಲೆಯೊಳಗಿದ್ದ ಹಾಲು ಕರುವುಂಡುಳಿದೊ
ಡಾಯತಂ ನಿಗೆಕರೆದು ಕಾಸಿ ನಿಜಲಿಂಗಗಳಿ
ಗೀಯಬೇಕುಣ್ಣಬೇಕಲ್ಲದೀ ಕರುವನೆದುರೊಳು ಕಟ್ಟಿ ದಯೆಯಿಲ್ಲದೆ
ಪೀಯೂಷಮಂ ಕರೆದುಕೊಂಡುಂಬ ನರಗಪ್ಪ
ಪಾಯಮೆಂತಿಹುದೊ ಯೋಚಿಸುವದೇಕೀಗಳೀ
ತಾಯಿಕರುಗಳ ಕಷ್ಟಮಂ ನೋಡಿ ಸೈರಿಸುವದೆಂತು ಸುಜನಂ ಧರೆಯೊಳು ॥ ೩೧ ॥

ಪಾಲಿಳಿಸಲೆಂದು ಕರುವಂ ಮೊದಲು ಬಿಡುವರಾ
ಹಾಲನುಣಲೆಂದು ಕನಿಕರದಿಂದ ಬಿಡರು ಕಟ
ಚಾಳಿಯಿರ್ದೊಡೆ ದಾಳಿಯನು ಹಾಕುವರು ಕೋಲುಗುದಿಗೆಯಿಂ ಪೊಯ್ಯುತಿಹರು
ಹಾಲುಕೊಡದೊಡೆ ಬರಡುಬಿದ್ದೊಡುಂ ಮುಪ್ಪಾದ
ಪಾಳಿಗೊಂಡದನು ಕೊಲೆಗಡಿಕರಿಗೆ ಮಾರುವರು
ಹೇಳಬೇಕೇನೀ ದುರಂತಮಾತೃದ್ರೋಹಿಗಳಿಗೆ ಗೋಗಣಭಕ್ತಿಯು ॥ ೩೨ ॥

ಗೋಮೆಂದೊಡಿಮ್ಮೀ ಯತೀಂದ್ರಂಗೆ ಪ್ರೇಮಕರ
ಪಾವನಸುವಸ್ತುವಾಗಿರ್ದುದಾ ಗೋವುಗಳ
ಸೇವಕರ್ಗಾಶ್ರಯಂಗೊಂಡುತಿರ್ದನೊಮ್ಮೆ ಮೈಸೂರರಸರಾವುಗಳನು
ತೀವಿದುತ್ಸಾಹದಿಂ ನೋಡಲೆಂದವುಗಳಿಹ
ತಾವಿಂಗೆ ಪೋಗಿ ವನಗಾವಂಗೆ ತಿಳಿಸಲವ
ನಾವುಗಳನೆಲ್ಲ ಕರೆದಂ ಕಂಬಳಿಯಬೀಸಿ ಸನ್ನೆದನಿಗೈದು ಕೂಗಿ. ॥ ೩೩ ॥

ಚೆಲ್ಲನರಿವಲ್ಲಲ್ಲಿ ದೂರದೊಳು ಮೇಯುತಿ
ರ್ಪೆಲ್ಲ ಗೋವುಗಳೋಡಿ ಬಂದವನಬಳಸಿ ನಿಲ
ಲುಲ್ಲಾಸದಿಂದವಂ ಪೇಳ್ದಸವುಗಳ ಗುಣಕ್ರಿಯೆಗಳಂ ಜಾತಿಗಳಸು
ಮೆಲ್ಲಮೆಲ್ಲನೆ ಕೇಳಿ ಕಣ್ದುಂಬನೋಡಿ ತಾ
ನೊಳ್ಳಿಸಂತೋಷದಿಂ ಪಶರೌಷ್ಯಕವನವಗೆ
ನಿಲ್ಲದಿತ್ತ್ಯೈದಿದಂ ತದ್ಧೇನುಸುಖಸಂಭ್ರಮವನು ಪೇಳುತಿರ್ದನು ॥ ೩೪ ॥

ನೋಡುತಿರ್ಪಂ ಪ್ರತಿದಿನಂ ಪೋಗಿ ಗೋಗಣವ
ಮಾಡುತಿರ್ದಂ ಪ್ರೇಮಮಂ, ಬದಿಗೆ ನಿಂದು, ಕೈ
ಯಾಡಿಸುತ್ತಿರ್ದನಾಧೇನುವತ್ಸಗಳ ಮೆ-ಯ್ಮೇಲೆ ಪುಲ್ಮಣಿಕೆಗಳನು
ನೀಡಿಸುತ್ತಿರ್ದನವು ಸೊರಗಿಪೊಡೆ ಮನಮರುಗಿ
ಬಾಡುತಿರ್ಪಂ ಕಾಡಿದೊಡುಮವುಗಳಂ ಬಡಿಯ
ಬೇಡಿಮೆಂದಾಳುಗಳಿಗೊರೆವಂ ಕುಮಾರನೀ ಶಿವಯೋಗಮಂದಿರದೊಳು ॥ ೩೫ ॥

ಹಳಿಯಬೇಯಿಸಿದ ಬೂದಿಯನೊಲೆಯ ಬೂದಿಯಂ
ಪಲವುಮಂತ್ರಗಳ ಬೂದಿಯನು ಕಣಿಯೊಳು ಪೊರಟ
ಬಿಳಿಯಮಣ್ಣಂ ತಂದುನಾಯ್ನರಿಗಳಡ್ಡಾಡುತಿರುವೆಡೆಗಳಲ್ಲಿ ಮಡುಗಿ
ಬಳಿಕೆಯಿಲ್ಲದ ಹಳವಿಯೊಳು ಭವಿಗಳಂದವಂ
ನಿಲದೆ ಶೋಧಿಸಿ ವಿಭೂತಿಯ ಮಾಡಿ ಮಾರುವರು
ಕೆಲಬರುದರನಿಮಿತ್ತಮಾಗಿ ಪಾಪಾತ್ಮರೀ ವೀರಶೈವಸಮಾಜದೆ ॥ ೩೬ ॥

ಹೊಟ್ಟೆಯಂ ನೋಡಿಕೊಳ್ಳುವರೆಮ್ಮ ಧರ್ಮಮಂ
ನಿಟ್ಟಿಸರು ಮರ್ಣಡವ್ಯಾಪಾರಿಗಳು ಮತ್ತೆ
ನೆಟ್ಟನಿವರರಿವನರಿಯದ ಮೂಢರತಿಸುಲಭಮೆಂದದನೆ ಧರಿಸತಿಹರು
ಗುಟ್ಟರಿಯಲೀ ಭಸಿತವಷ್ಟಾವರ್ಣದೊಳಳ
ಪಟ್ಟಿರ್ಪುದೆಂಬುದಂ ಬಹುಜನರು ಮರೆದಿಹರು
ಕೆಟ್ಟುಹೋಗಿಹವಿಂತು ಧರ್ಮನೀತಿಗಳೆಲ್ಲ ಪೇಳುವವರಿಲ್ಲದೀಗ ॥ ೩೭ ॥

ಶಿವನ ವೈವೆಳಗಾದ ಶ್ರೀಭಸಿತವಿದು ನಮ್ಮ
ಶಿವಭಕ್ತ್ರಗಂಗವಾಗಿಹುದಿದಂ ನಿಕರಿಸಿದೊ -
ಡವರಿಗಂಟುವದು ಶಿವಧರ್ಮಹತ್ಯೋಗ್ರಪಾತಕವದೀ ದುರ್ಭಸಿತವ
ಭುವನದೊಳು ಧರಿಪಾತಗುಕ್ತಫಲಮಿಲ್ಲೆಂದು
ಶಿವಧರ್ಮಶಾಸ್ತ್ರಗಳು ಪೇಳುತಿಹವವರಿಂದ
ಪ್ರನಿಮಲವಿಭೂತಿಯಂ ಮಾಡಿ ಪಸರಿಸುವವಶ್ಯಮಿದೆಂದು ಮನದೆ ನೆನೆದು ॥ ೩೮ ॥

ಶಿವಯೋಗಮಂದಿರದೊಳ್ ಭಸಿತಕಾರ್ಯಾಲ
ಯವನು ನಿರ್ಮಿಸಿ ಬಲ್ಲವನೋರ್ವನಂ ಕರಿಸಿ
ನವಘಟಗಳಂ ತರಿಸಿ ಪರಿಶುದ್ಧಭೂಮಿಯೊಳು ಪುಗಿಸಿ ಲಿಂಗಿಗಳನೆರಸಿ
ತಪೆಮಂದಿರದ ಗೋಗಣದ ಗೋಮಯವಪಿಡಿಸಿ
ಸುವಿಧಾನದಿಂ ದಹಿಸಿ ಬೂದಿಯಂ ಸಂಗ್ರಹಿಸಿ
ಭಸಿಮಂಟ್ಟಿದಂತೆ ಕುಟ್ಟಿಸಿ ಮಡಿಯ ನೀರಿನೊಳು ಕಲಸಿ ಸರಿಯಾಗಿ ಸೋಸಿ ॥ ೩೯ ॥

ಮಾತಾಡುವಾಗ ತುಂತುರು ಸಿಡಿಯಬಹುದೆಂದು
ಸಾತಿಶಯಮೆನೆ ಬಾಯ್ಗೆ ವಸ್ತ್ರಮಂ ಬಿಗಿದುಕೊಂ -
ಡೋತು ಭಸಿತವನೆಸಗುತಿರ್ದರಾಳ್ಗಳ್ವಿಭೂತಿಯ ಬೂದಿಯಂ ತುಳಿಯದೆ
ಓತೂಂದುರುಗಳ ತುಳಿದಾಟಕೆಡೆಗೊಡದೆ ಪರಿ
ಪೂತಮಪ್ಪುದು ಶುಭ್ರಸುಂದರ ಘುಟಿಕೆಯಂ ನೆಗಳ್ದು
ಖ್ಯಾತಿಮಿಗೆ ಪಸರಿಸಿದರೆಲ್ಲ ಕಡೆಯೊಳು ಘುಟಿಕೆಗಳನು ಬಾಯಿಂದೂದದೆ ॥ ೪೦ ॥

ಕಲಿಯುಳ್ಕೈತಂದವರಿಗೊಲಿದು ಕಲಿಸಿದರಿಲ್ಲಿ
ಕಲಿತವರು ಮಾಡಿ ಮಾರುತ್ತಿರ್ಪರಲ್ಲಲ್ಲಿ
ಹಲಬರಿಂತಹ ಶುದ್ಧಭಸಿತಮಂ ಬೇಡುತಿಹರೆಲ್ಲೆಡೆಗಳಲ್ಲಿ ನೋಡಿ
ತಿಳಿದ ಶಿವಪೂಜಕರು ಭಕ್ತಿವಿಶ್ವಾಸದಿಂ
ಬಿಲಿತು ಶಿವಯೋಗಮಂದಿರದ ಭಸ್ಮವ ಧರಿಪ -
ರ್ಕೆಳಸಿ ನಿಚ್ಚಂ ಭಸಿತರಚನೆಯೊಗಳ್ನಿರಾತಂಕಮೆನೆ ನಡೆದಿರ್ಪುದು ॥ ೪೧ ॥

ಮತ್ತಮಾಶಿವಯೋಗಿವರನಖಿಳಶಾಸ್ತ್ರಗಳ
ನೊತ್ತದೊಳು ಕಂಡಧಾತ್ರಿಶ್ರೀವಿಭೂತಿಯಂ
ಬಿತ್ತರಂ ಮಿಗೆ ಮಾಡಬೇಕೆಂದು ಬಗೆದು ಶಿವಯೋಗಮಂದಿರಮೊಳೊಪ್ಪಿ
ಉತ್ತಮವೆನಿಪ್ಪೈದು ಬಣ್ಣಗಳ ಗೋವುಗಳ
ನೊತ್ತಟ್ಟಗಿರಿಸಿ ನಿಚ್ಚದೊಳು ಮೈದೊಳೆದು ಭವಿ
ಯೆತ್ತಣಿಂದಂ ಮುಟ್ಟದಂತೆ ಲಿಂಗಿಗಳೆ ಮಡಿಯಿಂ ಮೆಯಿಸಿ ನೀರ್ಗುಡಿಸುತ ॥ ೪೩ ॥

ಬಳಿಯೊಳಿರ್ದೀಕ್ಷಿಸುತ ಬೀಳ್ವ ಗೋಮಯುವನೇ
ನೆಲಕೆ ಬೀಳದಹಾಗೆ ನಡುವೆ ಪಿಡಿದದನೊಂದು
ತೊಳೆದೆತ್ತಿಮೇಲಕ್ಕೆ ಕಟ್ಟಿರ್ದತಗಡಿನೊಳು ಮಂತ್ರಪೂರ್ವಕವಾಗಿಯೇ
ಸಲುವ ವಿಧಿಯಿಂದ ಪಿಂಡಗಳ ಮಾಡಿಟ್ಟಲ್ಲಿ
ಸಲೆಯೊಣಂಗಿಸಿ ನೇಮದಿಂದಲ್ಲಿಯೇ ದಹಿಸಿ
ನೆಲದಮೇಲಿಡದಂತೆ ಮೇಲೆ ಭಸಿತಂಗೈಸಿ ಮೇಲಿಡಿಸಿ ಕಾಯ್ದಿರ್ದನು ॥ ೪೩ ॥

ಕೊನೆಗೀ ಕುಮಾರನ ಸಮಾಧಿಯೊಳು ಕೊರಳುದ್ದ
ಘನಶುದ್ಧಭಸಿತವನಿವನ ಸುತ್ತಲುಂ ತುಂಬಿ
ವಿನುತತದಧಾತ್ರಿಭಸಿತವನು ಕೊರಳಿಂ ಮಸ್ತಕಂ ಮುಚ್ಚಿ ತುಂಬಿ ಬಳಿಕ
ಅನುಪಮಸಮಾಧಿಯಂ ಮುಗಿಸಿದರು ಪಿರಿಯರಾ
ಮಿನುಪಧಾತ್ರಿವಿಭೂತಿಹುದಿನ್ನುಮೀ ನಿಕೇ-
ತನದೊಳ್ಮಹಾವಿಭೂತಿಗಳವಂ ಧರಿಸುವರು ಬಯಸಿ ಬಂದವ್ಹರಿಂದ ॥ ೪೪ ॥

ಶಿವಶಾಸ್ತ್ರಗಳ್ಪೇಳ್ವ ಧರ್ಮವಸ್ತುಕ್ರಿಯಾ
ನಿವಹಮೆಂತಹಕಷ್ಟಸಾಧ್ಯಮಿರ್ದೊಡುಮದಂ
ಸವೆಯದತ್ಯಂತಸಾಹಸದಿಂದ ಮನಮುಟ್ಟಿ ಮಾಡಿ ಮುಗಿಸುತ್ತಿರ್ದನು
ಶಿವಮತಾಚಾರದಂತೀಗಣೆಮ್ಮಯ ಸಮಯ
ದವರೊಳ್ಕೆಲರ್ಕಂಡಕಂಡ ಕುಲದವರೊಡನೆ
ತವೆಭುಂಜಿಸುವದನರಿದಾತನುಂ ತನ್ನೊಡನೆ ಬೆರಸಿಕೊಳದಂತೀತನು ॥ ೪೫ ॥

ಪಿಡಿದನತ್ಯಸಮಶೀಲಾಚಾರಮಂ ಬಿಡದೆ
ಸಡಿಸುತಾನೋರ್ವನಿರ್ದಿಂ ಧರ್ಮಮಾರ್ಗಮಂ
ಕೆಡಿಸಿಕೊಳ್ಳುವದುಚಿತವಲ್ಲ ಧರ್ಮೋದ್ಧಾರಕಾಲಮೊದಗದೆ ಮಾಣದು
ಪೊಡವಿಯೊಳು ಧರ್ಮಾತ್ಮರಿಂಪಿಂದೆ ಬಹುಜನದು
ಪಡೆದರಲ್ಲದೆ ಸುಖವ ಜನಗಳಿಂ ಧರ್ಮಗಳು
ಪಡೆಯಲಿಲ್ಲಾ ಸುಖವನೆಂದೀ ಕುಮಾರನಖಿಲರಿಗೆ ಬೋಧಿಸುತಿರ್ದನು ॥ ೪೬ ॥

ಕೆಲಬರ್ಗುರೂತ್ತಮರು ಚರವರ್ಯಮುಖ್ಯರಸ-
ಫಳವಿರ್ಪಡುಂ ಮಾಳ್ಪೆವೆಂದು ಶೀಲಾಚಾರ
ಕೊಲಿದವರ ಬಳಗಮಂ ಬೆಳಸಿರ್ಪನಲ್ಲಲ್ಲಿ ಸಾಗಿರ್ಪುದಚ್ಚಳಿಯದೆ
ಮಲಹರನ ಧರ್ಮರಾಜ್ಯದೊಳುದಿಸಿ ಬೆಳೆದು ಜನ
ಗಳನು ಧರ್ಮದೊಳಿರಿಸಿ ಕಾವುದೇ ಧರ್ಮಿಗಳ
ಕೆಲಸವಲ್ಲನೆ ಧರ್ಮದವನತಿಗವರ್ಸಹಿಸದಿರ್ಪರೀ ವಸುಮತಿಯೊಳು ॥ ೪೭ ॥

ಶಿವಕೀರ್ತನವವರಿರಲಿಲ್ಲ ಮೊದಲೆಮ್ಮಮತ
ದವರೊಳೀ ದೇಶದೊಳು ಶ್ರೀಕುಮಾರೇಶ್ವರಂ
ಶಿವಯೋಗಮಂದಿರಕೆ ಹತ್ತೆಂಟುಜನ ಪಂಡಿತರನು ಬರಮಾಡಿಕೊಂಡು
ಶಿವಕಥೆಗಳನು ಸರಸಮಾಗಿ ಸಂಗ್ರಹಗೊಳಿಸಿ
ವಿವಿಧವಿಷಯಂಗಳಿಂ ಬಹುರಮ್ಯವೆನಿಪಂತೆ
ಶಿವಕೀರ್ತನಂಗಳಂ ಕಲಿಯಲೆಸಗಿದನೀಜೆಗವರಿಂದೆ ಕಲಿತು ಕೇಳಿ ॥ ೪೮ ॥

ಎಣಿಸಲರಿದನಿತುಕೀರ್ತನಕಾರರಾಗಿ ಧಾ
ರಿಣಿಯಲ್ಲಿ ಶಿವಕಥೆಯಹೇಳುತ್ತ ಜೀವನವ
ನಣಿಯರಂ ಮಾಡಿ ಶಿವಧರ್ಮಜಾಗ್ರತೆಗೈದರೊಳು ಪೆಸರುವಡೆದು
ಪ್ರಣಿತಶಿವಕೀರ್ತನವೆನಿಪ್ಪಶಬ್ದವಿದು ಮ
ನ್ನಣೆದಳೆದ ಕರ್ನಾಟವಾಙ್ಮಯದೊಳೀ ಚರಾ
ಗ್ರಣಿಯಿಂದ ಪೊಸದಾಗಿ ಸೇರಿರುವದೆಂದು ನಲಿದಾಡದಿಹ ಜಾಣರಾರು? ॥ ೪೯ ॥

ಮತ್ತಮಾಶಿವಯೋಗಿವರನಖಿಳಶಾಸ್ತ್ರಗಳ
ಮೊತ್ತದೊಳು ಕಂಡಧಾತ್ರಿಶ್ರೀವಿಭೂತಿಯಂ
ಬಿತ್ತರಂ ಮಿಗೆ ಮಾಡಬೇಕೆಂದು ಬಗೆದು ಶಿವಯೋಗಮಂದಿರಪೊಳೊಮ್ಮೆ
ಉತ್ತಮವೆನಿಸ್ಪೈದು ಬಣ್ಣಗಳ ಗೋವುಗಳ
ನೊತ್ತಟ್ಟಗಿರಿಸಿ ನಿಚ್ಚದೊಳು ಮೈದೊಳೆದು ಭವಿ
ಯೆತ್ತಣಿಂದಂ ಮುಟ್ಟದಂತೆ ಲಿಂಗಿಗಳೆ ಮಡಿಯಿಂ ಮೆಯಿಸಿ ನೀರ್ಗುಡಿಸುತ ‖ ೪೩ ‖

ಬಳಿಯೊಳಿರ್ದೀಕ್ಷಿಸುತ ಬೀಳ್ವ ಗೋಮಯುವನೇ
ನೆಲಕೆ ಬೀಳದಹಾಗೆ ನಡುವೆ ಪಿಡಿದದನೊಂದು
ತೊಳೆದೆತ್ತಿಮೇಲಕ್ಕೆ ಕಟ್ಟಿರ್ದತಗಡಿನೊಳು ಮಂತ್ರಪೂರ್ವಕಮಾಗಿಯೇ
ಸಲುವ ವಿಧಿಯಿಂದ ಪಿಂಡಗಳ ಮಾಡಿಟ್ಟಲ್ಲಿ
ಸಲೆಯೊಣಂಗಿಸಿ ನೇಮದಿಂದಲ್ಲಿಯೇ ದಹಿಸಿ
ನೆಲದಮೇಲಿಡದಂತೆ ಮೇಲೆ ಭಸಿತಂಗೈಸಿ ಮೇಲಿಡಿಸಿ ಕಾಯ್ದಿರ್ದನು ‖ ೪೩ ‖

ಕೊನೆಗೀ ಕುಮಾರನ ಸಮಾಧಿಯೊಳು ಕೊರಳುದ್ದ
ಘನಶುದ್ಧಭಸಿತವನಿವನ ಸುತ್ತಲುಂ ತುಂಬಿ
ವಿನುತತದಧಾತ್ರಿಭಸಿತವನು ಕೊರಳಿಂ ಮಸ್ತಕಂ ಮುಚ್ಚಿ ತುಂಬಿ ಬಳಿಕ
ಅನುಪಮಸಮಾಧಿಯಂ ಮುಗಿಸಿದರು ಪಿರಿಯರಾ
ಮಿನುಪಧಾತ್ರಿವಿಭೂತಿಹುದಿನ್ನುಮೀ ನಿಕೇ -
ತನದೊಳ್ಮಹಾವಿಭೂತಿಗಳದಂ ಧರಿಸುವರು ಬಯಸಿ ಬಂದವಳ್ಗರಿಂದ ‖ ೪೪ ‖

ಶಿವಶಾಸ್ತ್ರಗಳ್ಪೇಳ್ವ ಧರ್ಮವಸ್ತುಕ್ರಿಯಾ
ಸಿವಹಮೆಂತಹಕಷ್ಟಸಾಧ್ಯಮಿರ್ದೊಡುಮದಂ
ಸವೆಯದತ್ಯಂತಸಾಹಸದಿಂದ ಮನಮುಟ್ಟಿ ಮಾಡಿ ಮುಗಿಸುತ್ತಿರ್ದನು
ಶಿವಮತಾಚಾರದಂತೀಗಣೆಮ್ಮಯ ಸಮಯ
ದವರೊಳ್ಕಿಲರ್ಕಂಡಕಂಡ ಕುಲದವರೊಡನೆ
ತವೆಭುಂಜಿಸುವದನರಿದಾತನುಂ ತನ್ನೊಡನೆ ಬೆರಸಿಕೊಳದಂತೀತನು ‖ ೪೫ ‖

ಪಿಡಿದನತ್ಯಸಮಶೀಲಾಚಾರಮಂ ಬಿಡದೆ
ನಡಿಸುತಾನೋರ್ವನಿರ್ಪಿಂ ಧರ್ಮಮಾರ್ಗಮಂ
ಕೆಡಿಸಿಕೊಳ್ಳುವದುಚಿತವಲ್ಲ ಧರ್ಮೋದ್ಧಾರಕಾಲವೊದಗದೆ ಮಾಣದು
ಪೊಡವಿಯೊಳು ಧರ್ಮಾತ್ಮರಿಂಪಿಂದೆ ಬಹುಜನರು
ಪಡೆದರಲ್ಲದೆ ಸುಖವ ಜನಗಳಿಂ ಧರ್ಮಗಳು
ಪಡೆಯಲಿಲ್ಲಾ ಸುಖವನೆಂದೀ ಕುಮಾರನಖಿಲರಿಗೆ ಬೋಧಿಸುತಿರ್ದನು ॥ ೪೬ ॥

ಕೆಲಬರ್ಗುರೂತ್ತಮರು ಚರವರ್ಯಮುಖ್ಯರಸ-
ದಳವಿರ್ಪಡುಂ ಮಾಳ್ಪೆನೆಂದು ಶೀಲಾಚಾರ
ಕ್ಕೊಲಿಪವರ ಬಳಗಮುಂ ಬೆಳಸಿರ್ಪನಲ್ಲಲ್ಲಿ ಸಾಗಿರ್ಪುದಚ್ಚಳಿಯದೆ
ಮಲಹರನ ಧರ್ಮರಾಜ್ಯದೊಳುದಿಸಿ ಬೆಳೆದು ಜನ
ಗಳನು ಧರ್ಮದೊಳಿರಿಸಿ ಕಾವುದೇ ಧರ್ಮಿಗಳ
ಕೆಲಸವಲ್ಲನೆ ಧರ್ಮದವನತಿಗವರ್ಸಹಿಸವಿರ್ಪರೀ ವಸುಮತಿಯೊಳು ॥ ೪೭ ॥

ಶಿವಕೀರ್ತನದವರಿರಲಿಲ್ಲ ಮೊದಲೆಮ್ಮಮತ
ದವರೊಳೀ ದೇಶದೊಳು ಶ್ರೀಕುಮಾರೇಶ್ವರಂ
ಶಿವಯೋಗಮಂದಿರಕೆ ಹತ್ತೆಂಟುಜನ ಪಂಡಿತರನು ಬರಮಾಡಿಕೊಂಡು
ಶಿವಕಥೆಗಳನು ಸರಸವಾಗಿ ಸಂಗ್ರಹಗೊಳಿಸಿ
ವಿವಿಧವಿಷಯಂಗಳಿಂ ಬಹುರಮ್ಯನೆನಿಸಂತೆ
ಶಿವಕೀರ್ತನಂಗಳಂ ಕಲಿಯಲೆಸಗಿದನೀಚೆಗವರಿಂದೆ ಕಲಿತು ಕೇಳಿ ॥ ೪೮ ॥

ಎಣಿಸಲರಿದನಿತುಕೀರ್ತನಕಾರರಾಗಿ ಧಾ
ರಿಣಿಯಲ್ಲಿ ಶಿವಕಥೆಯಹೇಳುತ್ತ ಜೀವನವ
ನಣಿಯರಂ ಮಾಡಿ ಶಿವಧರ್ಮಜಾಗ್ರತೆಗೈದರೊಳು ಪೆಸರುವಡೆದು
ಪ್ರಣಿತಶಿವಕೀರ್ತನವೆನಿಪ್ಪಶಬ್ದವಿದು ಮ
ನ್ನಣೆದಳೆದ ಕರ್ನಾಟವಾಙ್ಮಯದೊಳೀ ಚಿರಾ
ಗ್ರಣಿಯಿಂದ ಪೊಸದಾಗಿ ಸೇರಿರುವದೆಂದು ನಲಿದಾಡದಿಹ ಜಾಣರಾರು? ॥ ೪೯ ॥

ದ್ಯಾವಾಪುರದ ಬಸವಲಿಂಗಶಾಸ್ತ್ರಿಯೆನಿಪ್ಪ
ಕೋವಿದಂ ದುರ್ವ್ಯಸನಿಯಾಗಿ ನೀತಿಯನುಳಿದು
ಜೀವಿಸುತ್ತೀ ಮಹಾತ್ಮನ ಪಾದಸನ್ನಿಧಿಯನಾಶ್ರಯಿಸಲವನಿರವನು
ಭಾವದೊಳು ತಿಳಿದು ಲೌಕಿಕಶಾಸ್ತ್ರವಿಹಿತವಿಷ-
ಯಾವಳಿಯನೊರೆದವನ ಕೀರ್ತನೋದ್ಯೋಗಕ್ಕೆ -
ಶೀವಶಕ್ತಿಸ್ಫೂರ್ತಿಗಳನನುಗ್ರಹಿಸಿದಂ ಪ್ರಖ್ಯಾತನಾಗವಂತೆ ॥ ೫೦ ॥

ಅವನ ಶಿಥಿಲಾಚಾರವಳಿದು ಸಿಜನೈಷ್ಠಿಕದ
ಶಿವಲಿಂಗಪೂಜೆಯದು ಬೆಳೆದು ಹಾವೇರಿಯುರು
ಶಿವಬಸವಯತಿವರೇಣ್ಯನನುಗ್ರಹಂಬಡೆದು ಸತ್ಕ್ರಿಯಾಶೀಲನೆನಿಸಿ
ಭುವನಸನ್ನುತ ಕೀರ್ತಿಯೆಸೆಯೆ ಶಿವಕೀರ್ತನೋ
ತ್ಸವದಿಂದ ಧರ್ಮಪ್ರಸಾರವೆಸಗಿದನವಂ
ಭವಹರಕುಮಾರನಂ ನುತಿಸಿದರ್ಪತಿತಪಾವನಶಕ್ತನೆಂದಖಿಲರು ॥ ೫೧ ॥

ಗತಿಗೆಟ್ಟನೇಕಶಾಸ್ತ್ರಿಗಳಿಗೆ ಪುರಾಣ ಪ-
ದ್ಧತಿಯನುಂ ಕೀರ್ತನರಹಸ್ಯಮಂ ವ್ಯಾಖ್ಯಾನ
ದತಿರಸಾಲುತ್ವಮಂ ತಿಳುಪಿ ಪೇಳ್ದಿಂತು ಬಲುಪೆಸರಾಗುವಂತೆ ಮಾಡಿ
ಮತಸೇವೆಯಲ್ಲಿ ತೊಡಗಿಸಿದನವನೆಲ್ಲರಂ
ಮತಿಗೊಟ್ಟು ವ್ರತಶೀಲರಂ ಮಾಡಿದಂ ಬಹುಲ
ಯತಿಗಳಂ ಗುರುಗಳಂ ಬ್ರಹ್ಮಚಾರಿಗಳಂ ಗೃಹಸ್ಥರಂ ಚರವರ್ಯನು ॥ ೫೨ ॥

ಶಿವಯೋಗಮಂದಿರದೆ ಪರಮತೀಯರು ಸಹಿತ
ತವೆಯೋಗಮಂ ಕಲಿಯಲನುಕೂಲಮಿರ್ದತ್ತು
ಸುವಿಚಾರಿಯಾದ ನಾರಾಯಣ ಸಂಗಮನೆಂಬ ವಿಪ್ರನಿದನರಿದು ಬರಲು
ಶಿವಯೋಗಿವರ ಕುಮಾರೇಶನಾತಂಗೆ ಯೋ -
ಗವ ಕಲಿಸಿ ವೇತನವಕೊಟ್ಟು ಶಿವಮಂದಿರದೊ -
ಳವನಿಚ್ಛೆಯಂತೆ ಸೇವೆಯೊಳಿರಿಸಿಕೊಂಡನೀರೆರಡುವರ್ಷಗಳತನಕ ॥ ೫೩ ॥

ಬಳಿಕವನನಲ್ಲಿಂಪ ಮನಶಾಂತಿಗಾಗಿ ತಾಂ
ಕಳಿಸಿದಂ ಪೇಳ್ದು ಶಾಂತಿನಿಕೇತನವಿದೆಂಬ
ವಿಲಸಿತಬ್ರಹ್ಮಸುಖಸಂಘಕತ್ಯಾನಂದದಿಂದಲ್ಲಿ ವಾಸಿಸಿದನು
ಕಲಯೋಗಸಾಧಕರು ನೋಡಬೇಕೆಂದಿಲ್ಲಿ
ಗೆಳಸಿ ಬಂದೀ ಚರಾಧೀಶನಿಂ ಯೋಗವಂ
ತಿಳಿದು ಪೋಗುತ್ತಿರ್ಪರತಿಪೂಜ್ಯಭಾವದಿಂದೆಲ್ಲೆಲ್ಲಿಯವರೊ ಕೇಳಿ ॥ ೫೪ ॥

ರಾಮಸಾಗರವೆಂಬ ಗ್ರಾಮದೋರ್ವಂ ಕೃಷ್ಣ
ನಾಮನ್ವೈಶ್ಯಂ ಯೋಗವಂ ಮಾಡಬೇಕೆಂದು
ಪ್ರೇಮದಿಂ ಪುಸ್ತಕವ ನೋಡಿ ತನ್ನಯ ಮನೆಯೊಳಾಸನವ ಹಾಕುತಿರಲು
ನೇಮವದು ತಪ್ಪಿ ಕೈಕಾಲುಗಳು ಗಂಟಿಕ್ಕಿ
ಪ್ರೈಮುದುರಿ ಪರತಂತ್ರನಾಗಿ ಬಂದೀ ಮಹಾ
ಸ್ವಾಮಿಯಂ ಕಂಡು ಶಿವಯೋಗಮಂದಿರದಲ್ಲಿ ಬಿನ್ನಯಿಸಿದಂ ವಂದಿಸಿ ॥ ೫೫ ॥

ಆಸನಕ್ರಮದಪ್ಪಿ ಕಾಯಕರಣಗಳು ವ್ಯ-
ತ್ಯಾಸವಾಗಿಹವೆಂದು ತಿಳಿದದಕೆ ಸರಿಯೆನಿಪ
ಲೇಸಾದ ಸಾಧನವ ಪೇಳ್ದು ಕೆಲದಿನವಿರಿಸಿಕೊಂಡು ಚೆನ್ನೆಸಗಿ ಮುಂದೆ
ಆಸನಾಭ್ಯಾಸ ಕ್ರಮವ ತೋರಿ ಶಿವಯೋಗ
ವಾಸದಿಂ ಮುಗುಳ್ದವನನವನೂರ್ಗೆ ಕಳಿಸಿದಂ
ಭೂಸುರಕುಮಾರೇಶ್ವರಂ ನೋಡಿ ಕೇಳಿದವರೊಪ್ಪಿ ಕೊಂಡಾಡುವಂತೆ ॥ ೫೬ ॥

ಆ ರಾಷ್ಟ್ರಧರ್ಮವಾಗಲು ತಕ್ಕುದೆಮ್ಮತುಲ
ವೀರಶೈವರ ಧರ್ಮವಿದನು ಪರದೇಶದೊಳು
ಬೀರಿಸುವದುಚಿತವೆಂದೆಣಿಸಿ ಬಹುಯತ್ನದಿಂದೋರ್ವಾಂಗ್ಲವಿದ್ಯೆಗಲಿತ
ವೀರಬಸವಶ್ರೇಷ್ಠಿಯೆಂಬಾತನಂ ತಂದು
ಸಾರತರ ಸಕಲಶಾಸ್ತ್ರಗಳೊಡಂಬಡೆ ಶುಭ ವಿ-
ಚಾರಪೂರಿತ ಭಾಷಣವನು ಮಾಡಿಸತೊಡಗಿದಂ ಧರ್ಮದೇಳ್ಗೆಗಾಗಿ ॥ ೫೭ ॥

ಅಂಗದೊಳು ಲಿಂಗವುಂಟದನು ಕೃಪೆಯಿಂದ ಗುರು
ಪುಗಂವಂ ಮುಟ್ಟಿ ನೆನೆದೊರೆದು ಭಾವಕೆ ಮನಕೆ
ಕಂಗಳಿಗೆ ತಂದಿಂತು ಕರಕೆಕೊಡುತಿಹನೆಂದುಹಲಗಿಯೊಳು ತೋರುವಂತೆ
ಲಿಂಗಾಂಗರೂಪಗಳನೆಲ್ಲ ಚಿತ್ರಿಸಿ ಬಹುಜ
ನಂಗಳೊಪ್ಪುವ ತೆರದುಪನ್ಯಾಸಮಂ ಮಾಡಿ
ತುಂಗಧರ್ಮಪ್ರಸಾರಗೈವುತಿರ್ದನಾ ಶ್ರೇಷ್ಠಿಯೆಮ್ಮೀ ನಾಡೊಳು ॥ ೫೮ ॥

ಕೆಲಕಾರಣಂಗಂಳಿಂದವನನನ್ಯದ್ವೀಪ
ಗಳಿಗಟ್ಟಲನುಕೂಲಿಸದೆ ಪೋದುದೇವೇಳ್ವೆ
ದುಳಿದುದೊಂದೀ ಕುಮಾರೇಶನಮನೋರಥಂ ಮಾಳ್ಪುದೇಂ ಬಹವಿಘ್ನಕೆ
ಪಲವವಶ್ಯಕ್ರಿಯೆಗಳೊಬ್ಬಾತನಿಂ ಜರಗ-
ಲೊಳವೆ ತನ್ನಿಂದಪ್ಪ ಕಾರ್ಯಮಂ ಮಾಳ್ಪದತಿ
ಸುಲಭಮನ್ಯರ್ಕಳಿಂ ಮಾಡಿಸುವದಾತಂಕಕಷ್ಟಮುಯಮಾಗಿರ್ಪುದು ॥ ೫೯ ॥

ಭಸಿತಕಾರ್ಯಾಲಯದೊಳೈದುಸೂತ್ರಂಗಳಿಂ
ದೆಸೆವ ಬಂಧುರಲಿಂಗಗಳನು ಸರಿಯೆನೆ ರಚಿಸಿ
ಪಸರಿಪಂತೆಸಗಿದಂ ಬಂದಿಲ್ಲಿ ಕಲಿತು ಬಹುಜನಗಳಲ್ಲಲ್ಲಿ ಮಾಡಿ
ಹೆಸರುವಡೆದಲ್ಪಕ್ರಯಕ್ಕೆ ವಿಕ್ರಯಿಸಿ ಜೀ-
ವಿಸುತಿರ್ಪರಪ್ರಮಾಣದ ಲಿಂಗವಡಗಿರುವ-
ವಸಮಶಿವಯೋಗೀಂದ್ರನೆಮ್ಮ ಮತಕೆಸಗಿದುಪಕಾರಮಂ ಪೇಳಲಳವೇ ॥ ೬೦ ॥

ಕೆಲವೂರ ಸಾಲೆಗಳ ಶಿಕ್ಷಕರು ಶಿವಯೋಗ-
ನಿಲಯಕೈತಂದು ಶಿವಮತಧರ್ಮತತ್ವಮಂ
ತಿಳಿದು ತಾವಾಚರಿಸಿ ಬಿಡುವುದಿನದೊಳು ಸಮೀಪದ ಹಳ್ಳಿಗಳಿಗೆ ಹೋಗಿ
ಹಲಕೆಲಬರಂ ನೆರಪಿ ಸದ್ಧರ್ಮಬೋಧೆಯಂ
ಸುಲಭವಚನಂಗಳಿಂ ಮಾಡತೊಡಗಿಸರೆಮ್ಮ
ಕಲಶಂ ಕುಮಾರೇಶನೆಂದೀತಗನುಕೂಲವೃತ್ತಿಯಿಂದಿರ್ದರೊಪ್ಪಿ ॥ ೬೧ ॥

ಗುರುವೆಂಬ ಲಿಂಗವೆಂಬಿನ್ನು ಹಲಕೆಲ ಧರ್ಮ-
ಪರ ಪುಸ್ತಕಂಗಳಂ ಪುರುಳವೇದಾಂತಿಗಳ
ನಿರಸನವನುಂ ಬಸವಭಾಷೆಯಂ ಬಸವರಾಜಸ್ತವಕ್ಕುರುಟೀಕೆಯ
ವರಜಂಗಮಾಧಿಕ್ಯಮುಂ ನೀತಿಸಂಗ್ರಹವ
ಚರಣತೀರ್ಥಪ್ರಭಾದಿ ಗ್ರಂಥನಿಚಯಮಂ
ಸರಳಮೆನೆ ಬರಿಸಿ ಪ್ರಕಟಿಸಲು ಪ್ರೋತ್ಸಾಹಿಸಿದನೀ ಸದಾಶಿವಯೋಗಿಯು || ೬೨ ||

ಅನುಕೂಲಕಾಲದೊಳು ಶಿವಯೋಗಮಂದಿರ-
ಕ್ಕನುರಾಗದಿಂ ಭಕ್ತಮಾಹೇಶರ್ಬೆತಂದು
ಘನಶಿವಾಚಾರತತ್ವಂಗಳಂ ತಿಳಿದುಳಿದ ಜನರಿಗರುಪುತ್ತಿರ್ಪರು
ದಿನದಿನಂ ಶ್ರಾವಣದೊಳಖಿಳ ವಿಷಯ ವಿಚಾರ
ವಿನಿಮಯಂ ಜರುಗುತಿರ್ಪತ್ತಾಗಳೆಲ್ಲೆಡೆಯ
ಜನಗಳುತ್ಸಾಹದಿಂ ಬಂದು ಶಾಸ್ತ್ರಾರ್ಥಮಂ ಕೇಳಿ ತಿಳಿಯುತ್ತಿರ್ಪರು || ೬೩ ||

ಪರಜಗದ್ಗುರುವಪ್ಯರಾದ ಹುಬ್ಬಳ್ಳಿಯುರು
ಗುರುಸಿದ್ಧರಾಜಯೋಗೀಶರುಂ ಡಂಬಳದ
ಪರತರಜಗದ್ಗುರು ಶ್ರೀತೋಂಟದಾರ್ಯರುಂ ಘನಚಿತ್ರದುರ್ಗಮಠದ
ವರದ ಪರಮಜಗದ್ಗುರುವರೇಣ್ಯ ಜಯದೇವ
ಮುರುಘರಾಜೇಂದ್ರಶಿವಯೋಗೀಶರುಂ ಬಂದು
ಮೆರೆವ ಶಿವಯೋಗಮಂದಿರವನೀಕ್ಷಿಸಿ ಹರಸಿದರು ಬೆಳೆಮ ಬಾಳಲೆಂದು || ೬೪ ||

ಶ್ರಾವಣದೊಳಿಲ್ಲಿ ಕೂಡುವನೇಕ ವಿಖ್ಯಾತ
ಕೋವಿದರ ವ್ಯಾಖ್ಯಾನಕೀರ್ತನ ಪುರಾಣ ವಚ-
ನಾವಳಿಗಳತ್ಯಂತಸುಶ್ರಾವ್ಯಮಾಗಿ ಸಾಗುತ್ತಿರ್ಪವೆಲ್ಲಜನಕೆ
ಭಾವಸಂತಾಪಮಂ ಕಳೆದು ನಿರ್ಮಲಸುಖವ-
ನೀವುತಿರ್ಪವವಶ್ಯಸುಪ್ರಸಂಗದೊಳು ಚರ.
ದೇವನಾದೀ ಕುಮಾರೇಶ್ವರಂ ಬೋಧಿಸುತ್ತಿರ್ಪನಾತುರದೊಳರಿಯೆ || ೬೫ ||

ವೀರಶೈವ-ಕ್ರಿಯಾವಿಧಿ ವಿಧಾನಂಗಳಂ
ಶ್ರೀರುದ್ರಮಂ ನಿಖಿಲಮಂತ್ರಂಗಳಂ ಸದಾ-
ಚಾರಮಂ ಶುದ್ಧಮೆನೆ ಪೇಳಿಸಿವನೆಲ್ಲವಟುಗಳಿಗೆ ಯೋಗಾಲಯದೊಳು
ಸಾರಧರ್ಮಜ್ಞಾನಮಂ ಪಡೆವುತಿರ್ದರಾ
ವೀರಮಾಹೇಶಭಕ್ತರು ಬ್ರಹ್ಮಚರ್ಯದೊಳು
ಕಾರುಣ್ಯನಿಧಿ ಕುಮಾರೇಶ್ವರನ ನಿಯಮದಂತಿಲ್ಲಿಗೈತಂದು ಕಲಿತು ॥ ೬೬ ॥

ಶಿವಯೋಗಮಂದಿರದ ತತ್ವಮಂ ಕೇಳ್ದೀಕ್ಷಿ-
ಸಿಪ ಮಹಾಪೇಕ್ಷೆಯಿಂ ರಾಮಗಡ್ಡಿಯ ಮಠದ
ಶಿವಯೋಗಿವರ್ಯನೈತಂದು ಪರಿಕಿಸುತರಿದು ಮನವೊಪ್ಪಿ ಹರುಷವಾಂತು
ತವಕದಿಂದೀ ಕುಮಾರೇಶನಂ ಸಾಧಕರ
ನಿವಹಮಂ ಕರೆದೊಯ್ದು ತಮ್ಮ ಮಠದೊಳು ಮಹೋ-
ತ್ಸವದಿಂದ ಗಣತೃಪ್ತಿಪೂರ್ವಕಂ ಸಭೆಗರೆದು ಧರ್ಮವಿಷಯವ ಪೇಳಿಸಿ ॥ ೬೭ ॥

ವಿನುತ ತತ್ಪ್ರಾಂತದಖಿಲ ಪ್ರಸಿದ್ಧಪ್ರಮುಖ
ರನುಮತಿಯೊಳೊಂದು ಶಿವಯೋಗಶಾಲೆಯನೆಸಗಿ
ಸನುಮತದೊಳೈತಂದ ಸಾಧಕವಿತಾನಕಾಸನಧರ್ಮಶಾಸ್ತ್ರಗಳನು
ಘನಪಂಡಿತರ್ಕಳಿಂ ಪದೆದು ಪೇಳಿಸಲಾದ-
ನನುರಾಗದಿಂ ಮುಂದೆ ಕೆಲಕಾಲವಾದಬಳಿ-
ಕನನುಕೂಲತೆಯುಡಗಿ ನಿಂದುದಿದಕೇಗೈವುದನುತಾಪಗೊಂಡನವನು ॥ ೬೮ ॥

ಹರಯೋಗಮಂದಿರಕ್ಕೊಮ್ಮೆ ಮುಂಬಾಪುರಿಯ
ಪಿರಿಯಾಂಗ್ಲವೈದ್ಯನೋರ್ವಂ ಬಂದು ತತ್ಸಾಧ-
ಕರ ಯೋಗಸಾಧನಗಳಂ ನೋಡಿ ತಲೆದೂಗಿ ಪರಮಾನುರಾಗದಿಂದ
ಪರಿಪರಿಯ ರೋಗಗಳು ಬಂದಬಳಿಕೌಷಧವ-
ನರಿದು ಕೊಡುವೆವು ನಾವು ಮುಂದಾವರೋಗಗಳು
ಬರಬಾರದೆಂದು ಮೊದಲೇ ಯೋಗಮೆಂಬೌಷಧವನು ಕೊಳ್ಳುವಿರಿ ನೀವು ॥ ೬೯ ॥

ಪರತರಾರೋಗ್ಯ ಸಾಧನಮಿದೆಂದೊಪ್ಪಿದನು
ನಿರುತಮೀ ಶಿವಯೋಗಮಂದಿರಂ ಪೇರ್ಮೆಯಿಂ
ಮೆರೆವುತಿರಲಿಂದಫಿಸ್ತ್ರಾಯದೋಲಿಯೊಳವಂ ಬರೆದಿಹಂ ಶಂಕೆಗೊಳದೆ
ನಿರುಕಿಸಲು ಬಂದೆಲ್ಲ ಪದವೀಧರರ್ಪಂಡಿ-
ತರನೇಕರಂದಿಸಿಂದಿಂದಿಗುಮೊಡಂಬಟ್ಟು
ಬರೆವುತಿರ್ಪರು ನೋಡಿ ತಿಳಿದವಶ್ಯಮಿದೆಂದು ಸುವಿಚಾರಪ್ರವೃತ್ತಿಯಿಂದ ‖ ೨೦ ‖

ಪರಧರ್ಮಗ್ರಂಥಗಳನು ಕಲಿಸ್ಕೈಶಂದು
ಮೆರೆವಶಿವಯೋಗಮಂದಿರದೊಳ್ಪರೀಕ್ಷೆಯೊಳ್
ಗುಂಮುಟ್ಟಿ ವಿದ್ಯಾರ್ಥಿಗಳು ತಕ್ಕಬಹುಮಾನಗಳನು ಪಡೆವುತ್ತಿರ್ಪರು
ನಿರುಪಮಾಭವಧರ್ಮವೇ ರೂಪುವೆತ್ತು ಚರ
ವರಕುಮಾರೇಶನಾಗಿಹುದೆಂದು ಮೇ-
ಣ್ಮಾಹೇಶ್ವರಧರ್ಮ ಪಿತೃವೆಂದು ಬಹುತತ್ವವಿದುಗಳೀ ಶಿವಯೋಗಿಯಂ ಪೊಗಳ್ವರು
‖ ೨೧ ‖

ಈ ಸಂಸ್ಥೆಯನಾಗಳ್ಸುರಕ್ಷಿತಂ ನಡೆಯಲೆಂ-
ದಾಶೆಯಿಂ ಶ್ರೀಕುಮಾರೇಶ್ವರಂ ಬೋಧಿಸುತ
ದೇಶದೊಳು ಸಂಚರಿಸಿ ನೂರಾರುಕೂರಿಗೆ ಹೊಲಂಗಳಂ ಕೊಡಿಸಿದನು
ಲೇಸುಮಿಗೆ ವರ್ಗಣಿಯು ರೂಪದಿಂಮೊಂದು ನೂ-
ರ್ಸಾಸಿರಕೆ ಪೆರ್ಚಾಗಿ ರೌಪ್ಯಗಳ ಗಳಿಸಿ ಕಾ-
ರ್ಪಾಸಯಂತ್ರವನು ನಿರ್ಮಿಸಿದ ಬಾಗಲಕೋಟೆಯೊಳಗವರ ವೆಚ್ಚಕಾಗಿ ‖ ೨೨ ‖

ಅಂತು ಸಂಧಿ ೧೩ ಕ್ಕೆ ಪದಗಳು ೫೩೨

## ಮಂಗಲಂ



* ॥ ಶ್ರೀ ಮನ್ನಿರಾಭಾರಿ ದೇಶಿಕ ಪ್ರಸೀದ ॥ *



# ಹದಿನಾಲ್ಕನೆಯ ಸಂಧಿ ಪ್ರಾರಂಭ



ಸೂಚನೆ:—

ಹಲಗಲಿಯ ಭಕ್ತರಿಗೆ ಮತಧರ್ಮನಿಷ್ಠೆಯಂ
ಕಲಿಸಿ ಕ.ರ.ಬಂ ತಂದ ಗೋಕ್ಷೀರಮಂ ಕೊಂಡು
ನಲಿದು ಪಾಡುವ ನಿಜಸ್ತುತಿಗೊಪ್ಪದರುಪಿದಂ ನಿರ್ಧೂತಪಾಶವ್ರಜಂ ॥

ಆಶೆಯೆಂಬುಸಿರಿಸಿಂ ನಿಲ್ಲದಾತ್ಮಜ್ಯೋತಿ
ನಾಶವಾಗುವದಾಶೆ ಪುಟ್ಟಿರ್ದ ವಸ್ತು ಪರ-
ಮೇಶಗರ್ಪಣವಾಗದೆಂಬರನುಭವಿಗಳದರಿಂದಾಶೆ ಪುಟ್ಟಿದೆನ್ನ
ಹೇಸಿ ತನು ಮಾನಸಾದಿಗಳ ನಾನೆಂತು ನಿನ-
ಗಾಶೆಯಿಂದರ್ಪಿಸಲಿ ಕಾಡುತಿಹ ವಿಷಯಭೋ-
ಗಾಶೆಯಂ ಬಿಡಿಸಿ ನಿನ್ನಡಿಯ ನೆನಹಿನೊಳಾಶೆಯಿಡಿಸಿ ಪೊರೆ ವಿಶ್ವನಾಥ ॥ ೧ ॥

ಶಿವಯೋಗಮಂದಿರದ ಭಿಕ್ಷೆಗೆಂದೊಮ್ಮೆಯೀ
ಶಿವಯೋಗಿವರನು ಹಲಗಲಿಗೆ ನಡೆತರಲಲ್ಲಿ
ಶಿವಸಿದ್ಧನೆಂಬ ಸರನಾಯಕಂ ಸುಪ್ರಸಿದ್ಧಂ ಗುಣಾನ್ವಿತನರಸನು
ಸವಿನಯ ಮಹಾಭಕ್ತಿಯಿಂದಿವನನುಪಚರಿಸಿ
ತವಕದಿಂ ಮೂರುಸಾವಿರ ರೌಪ್ಯಕವನೆತ್ತಿ
ತವೆಯೂರಸಿರಿಯರಿಂದೊಡಗೂಡಿ ತಂದು ಮುಂದಿಟ್ಟೊಲ್ದುವಂದಿಸಿದನು ॥ ೨ ॥

ಆ ಪೂರೊಳಿರ್ಪ ಕೆಲ ರಡ್ಡಿಗಳು ಲಿಂಗದೀ
ಕ್ಷಾವಿಭವಮಂ ಪೊಂದಿ ದೀಕ್ಷೆಯಾಗದ ಜನರೊ-
ಳೀ ವಧೂವರಗಳಂ ತಂದು ಮದುವೆಯಮಾಡಿ ಕೂಡಿಕೊಂಡುಣುತಿರ್ದರು
ಈ ವಾರ್ತೆಯಂ ಜನಗಳಿಂ ಕೇಳ್ದು ತನ್ನ ನಿಜ
ಭಾವದೊಳಗೀ ಯನಾಚಾರವೃತ್ತಿಯ ಸಹಿಸ-
ದೀ ವಿಮಲಚರಿತನು ಕುಮಾರಗುರುವರನವರಿಗೆಂದನತಿಖೇದದಿಂದ ॥ ೩ ॥

ಸ್ವಸಮಾಜಸೇವೆಯೆಸಗುವ ನಿಮ್ಮ ಬಗೆಗೆ ಸಂ-
ತಸಮಾದೆಮಾದೊಡೈ ಶಿವಭಕ್ತರೇ ನೀವು
ಮಿಸುಪ ಶಿವದೀಕ್ಷೆಯಂ ಪ್ರೇಮದಿಂ ಪೊಂದಿ ದೀಕ್ಷೆಯನು ಪಡೆಯದ ಜನರೊಳು
ಒಸೆದು ಪೆಣ್ಗಂಡುಗಳನಿತ್ತು ಸಂಬಂಧಗಳ-
ನೆಸಗುವಿರಿ ನೀವೆಂದು ಕೇಳಿರುವೆವಿದು ನಿಮಗೆ
ಮುಸುಗಿದಜ್ಞಾನ ವರ್ತನವಲ್ಲವೇ ನೀವಿದಕ್ಕೆಂತೊಡಂಬಡುವಿರಿ? ॥ ೪ ॥

ಅವರು ನಿಮ್ಮಂತೆ ದೀಕ್ಷೆಯ ಪಡೆದೊಡಂದು ನೀ-
ವವರೊಡನೆ ನಂಟುತನಮಂ ಮಾಡಿಮಿಲ್ಲವೇ-
ಯವರ ಕನ್ಯೆಗೆ ದೀಕ್ಷೆಯಂ ಕೊಟ್ಟದಂ ಕೊಳ್ವುದುಚಿತಮವರಿಗೆ ನಿಮ್ಮಯ
ಶಿವಲಿಂಗಧಾರಣದ ಕನ್ಯೆಯಂ ಕೊಡುವದೆಂ-
ತವರೊಡನೆ ಕೂಡಿ ನಾವಿನ್ನು ಬಳಕೆಯನು ಮಾ-
ಡುವದಿಲ್ಲವೆಂದು ನೀವೊಪ್ಪಿದೊಡೆ ಪಿಡಿವೆವೀ ಕಾಣಿಕೆಯನೆನಲು ಕೇಳ್ದು ॥ ೫ ॥

ಎಮ್ಮ ಕುಲದವರುಸಾಕಿಸ್ಸಿಲ್ಲ ದೇವ ಮೇ -
ಣೆಮ್ಮೊಳಿತ್ತಂಡನಿಹುವವರಿಂದ ನಂಟುತನ -
ವೆಮ್ಮೊಳೀ ನಡೆಯುವಂತಿಲ್ಲ ಮಾಡುವದೇನು ದೀಕ್ಷಾವಿಹೀನಜನಕೆ
ಎಮ್ಮಂತೆ ದೀಕ್ಷೆಯಂ ಪೊಂದುವದೆನುತ್ತೊರೆದು
ಸಮ್ಮತಿಸುವಂತೆ ಮಾಡುತ್ತಿರುವೆವಾದಡುಂ
ನಿಮ್ಮಭಿಪ್ರಾಯದಂತಿಂದೆ ಬಿಡುವದಶಕ್ಯಮಿದರೆಚ್ಚರಿರುವದೆಮಗೆ ॥ ೬ ॥

ಸೈರಿಸುವದಿನ್ನು ಕೆಲದಿನವೋ ಮಹಾಪ್ರಭುವೆ
ಚಾರುಸುತೆಯರನವರಿಗಿತ್ತಿರುವೆವವರ ಸುಕು-
ಮಾರಿಯರನೊಪ್ಪಿತಂದಿರುವೆವವರುಂ ಬರುವದುಂಟಾವು ಪೋಪುದುಂಟು
ವೀರಶೈವಾಚಾರಕಿದು ತಕ್ಕುದಲ್ಲೆಂದು
ಧೀರರಿಂ ಪೇಳಿಸುವೆವದಕೊಪ್ಪದಿರಲವರು
ಜೇರಿದಲಿ ನಾವವರ ನಂಟುತನಮುಂ ಬಿಡುವೆವೆಂದು ವಿಜ್ಞಾಪಿಸಿದರು ॥ ೭ ॥

ಇಂದವರಬಳಿಕೆಯಂ ಬಿಡುವೆವೆಂದೆಮ್ಮಲ್ಲಿ
ಕುಂದುಮರೆವಚನಮಂ ಕೊಟ್ಟೊಡಲ್ಲದೆ ನೀವು
ತಂದಿರುವ ಭಿಕ್ಷೆಯಿದು ಸಲ್ಲದೆಮಗಾವೊಲ್ಲೆವಿದನೆಂದು ಯತಿವರ್ಯನು
ಸಂದೇಹವಿಲ್ಲದಂತುಸುರಲಾ ಸದ್ಭಕ್ತ -
ರಂದಾಮಹಾತ್ಮನೊಡನಿರ್ದ ಚೆನ್ನಕವೀಂದ್ರ -
ನೆಂದೆನಿಸುವೆನ್ನನೋರೆಗೆಕರೆದು ಪೇಳಿವರ್ತ್ತವಿಮ್ಮಂಗಿತವನೆಂತೆನೆ ॥ ೮ ॥

ಬಿಡುವೆವವರೊಡನೆ ಬಳಿಕೆಯನಿರೆಯುರುತ್ತಿಂದೆ
ಬಿಡಲಶಕ್ಯಂ ಮಹಾಸ್ವಾಮಿಗಳ್ಗೀಹಟಂ
ಕೆಡುಕಲ್ಲವೇ ಮೂರುಸಾವಿರಪಣಂಗಳಂ ಬಿಟ್ಟವರ್ಗಾಳ್ಕುವೇನು ?
ನಡೆವವರಿಗನುಕೂಲವಾದ ಮಾತಂ ಪೇಳ್ದು
ನಡಿಸಿಕೊಳ್ಳದೊಡವರ್ಕಡೆಗೆ ಪೋಗರೆ ನೀವು
ನಡೆದು ಬಿನ್ನೈಸಿ ಕಾಣಿಕೆಯ ಸ್ವೀಕರಿಸುವಂತೆಸಗಿದೆಂದುಸುರಲಾಗ ॥ ೯ ॥

ಅವಧರಿಸುದ್ಧೈ ಬುದ್ಧಿಮತದಿಂದೆ ಶುದ್ಧಮಾ -
ಗುವವೆ ಕೆಲಕಾಲಮುಂ ಬೇಕಿದಕೆ ಕೈಬಿಡದೆ
ಸುವಿಚಾರದಿಂ ಪೇಳ್ವುದೇ ಮಾರ್ಗವಿದನು ನೀವವರಿಗರುಪಿದಡೆ ಸಾಕು
ತವೆ ತಾನೆ ತಮ್ಮೊಳರಿದು ಸುಧಾರಿಸುತ್ತಿಪ್ಪ -
ರವರ ಮನಮುಂ ಬಲಾತ್ಕಾರದಿಂ ಜಗ್ಗಿದಡೆ
ಬವಣೆಯಿಂಪುಮ್ಮಳಿಸರೇ ಮತಾಚಾರದೊಳು ನಂಬುಗೆಯು ತೊರೆಯದಿಹರೇ॥ ೧೦ ॥

ಪರಮಶಿವಯೋಗಮಂದಿರದ ಕಾಣಿಕೆಗಾಗಿ
ಹರುಷದಿಂ ಮೂರುಸಾವಿರ ರೌಪ್ಯಕಂಗಳಂ
ನೆರೆಸಲ್ಲಿಸಿಹರಿದಂ ಬಿಟ್ಟೊಡಾ ಸಂಸ್ಥೆಗಿದು ಕೊರತೆಯಲ್ಲವೆ ಮಹಾತ್ಮಾ
ಮರೆಯದೆಮ್ಮೀ ಧರ್ಮಕನುಸರಿಸಿ ನಡೆದು ಸುರು -
ಚಿರಸುಖವ ಪಡೆವುದೆಂದಿನ್ನೊಮ್ಮೆ ಪೇಳ್ವ ಸ್ವೀ
ಕರಿಸಬೇಕೀ ಹಣವನಿವರೊಪ್ಪುತಿಹರೆಂದು ನಮಿಸಿ ನಾನೊರೆಯಲದಕೆ ॥ ೧೧ ॥

ಲೇಸನಾಡಿದಿರಿ ಕವಿಗಳೆ ನಿಮ್ಮ ಮನಕಿನಿತೆ
ಭಾಸವಾದುದೆ ಶಿವಶಿವಾ ಧರ್ಮಮಂ ಮೂರು
ಸಾಸಿರ ಪಣಕ್ಕೊಪ್ಪಿ ಮಾರಿಕೊಂಡಂತಲ್ಲವೇ ನಿಮ್ಮ ವರ್ತನವಿದು
ಈ ಶಿವಾಚಾರಮುದ್ಧಾರಮಾಗುವದಾಗಿ
ದೇಶಿಕೋತ್ತಮರಿಂದ ನೆಲೆಗೊಂಡ ಶಿವಯೋಗ
ವಾಸವೀಬಗೆಯ ಹಣದಿಂದ ಪೋಷಣವಹುದೆ ಧರ್ಮವೇಷಿಗಳೆ ನಾವು ? ॥ ೧೨ ॥

ಇಲ್ಲಿ ಧರ್ಮಾವನತಿಗವಕಾಶವಿತ್ತು ನಾ -
ವಿಲ್ಲಿಂದ ಧನವನೊಯ್ದಾ ಶಿವಯೋಗಾವಾಸ -
ದಲ್ಲಿ ಧರ್ಮೋನ್ನತಿಯನೆಸಗುತಿಹೆವೆಂಬುದಿದು ಪಾಪಮಯ ಮೋಸವಲ್ತೇ?
ಬಲ್ಲವರು ನಗರೆ ದೀಕ್ಷಾವಂತರಾಗಿ ಮತ -
ದಲ್ಲಿ ಸಾಂಕರ್ಯಮಂ ಮಾಳ್ಪವರ ಧನವನಾ -
ವೊಲ್ಲೆವೀಗಳೆ ಪೋಪೆವೆಮ್ಮೊಡವೆಗಳನು ಹಾಕಿಸಿರಿ ಬಂಡಿಗಳೊಳೆಂದು ॥ ೧೩ ॥

ತಡೆಯದೆನಗೊರೆಯಲೀ ಮಾತನಾಲಿಸಿ ಭಕ್ತ
ರೊಡನೆ ತವೊಮ್ಮಳು ಮಾತನಾಡಿಕೊಂಡೊಡಬಟ್ಟು
ನೃಡಯೋಗಿವರ್ಯರೇ ತಪ್ಪಾಯ್ತು ನಿಮ್ಮಾಜ್ಞೆಯಂತೆ ದೀಕ್ಷಾಹೀನರ
ಒಡಗೂಡಿ ಬಳಕೆಯಂ ಮಾಡದಿಹೆವಿನ್ನೆಂದು
ಪೊಡವಟ್ಟು ವಚನಮಂ ಕೊಡಲಾಗ ಸಂತಸಂ
ಬಡುತವರಿಗಾಚಾರಮಾರ್ಗಮಂ ಮತ್ತನಿತು ಬೋಧಿಸಿ ಪ್ರಶಾಂತಗೊಳಿಸಿ ॥ ೧೪ ॥

ಕರುಣೆಯಿಂದಾಶೀರ್ವದಿಸಿ ಪೇಳ್ದು ಬೀಳ್ಕೊಂಡು
ಹರುಷದಿಂದವರಿತ್ತ ಕಾಣ್ಕೆಯಂ ಕೈಕೊಂಡು
ಪರಮಶಿವಯೋಗಮಂದಿರಕೆ ದಯಮಾಡಿಸಿದನೀ ಪರಮ ಶಿವಯೋಗಿಯು
ಹರಭಕ್ತರಲ್ಲಲ್ಲಿ ಕೇಳ್ದು ತವೊಮ್ಮಳು ತಾವೆ
ಪರತರನಿಜಾಚರಣೆಯಂ ಸುಧಾರಿಸಿಕೊಂಡ -
ರರಿದೀ ಮಹಾತ್ಮನಧಿಕೃತನೆಂದು ಪೊಗಳ್ದರುತ್ಸಾಹದಿಂ ಧರ್ಮಾತ್ಮರು ॥ ೧೫ ॥

ಮೆರೆವ ಕಪ್ಪನಹಳ್ಳಿಯೂರಸೀಮೆಯೊಳು ನೆಲ -
ಸಿರುವ ಶಾಖಾಶಂಭುಯೋಗಮಂದಿರಕೆಮ್ಮ
ಚರಸಾರ್ವಭೌಮನದರ ಸುಧಾರಣಾರ್ಥಮೊಲವಿಂದೊಮ್ಮೆ ಪೋಗಲಾಗ
ಕರೆವುತಿರ್ದತ್ತು ಮಳೆ ಹೊರಗೆ ಹೋಗದ ಹಾಗೆ
ತುರುವಿಂಡು ದೂರವಿರ್ದುದರಿಂದ ಹಾಲಿವನ
ಪರಮಲಿಂಗಾಭಿಷೇಕಕೆ ತರುವವೆಲ್ಲಿಂದವೆಂದು ಸೇವಾಜನಗಳು ॥ ೧೬ ॥

ಆಲೋಚಿಸುತ್ತಿರ್ದರನಿತರೊಳೆ ಮಳೆಯ್ಯಲ್ಲಿ
ಲೀಲೆಮಿಗೆ ಶಿವಯೋಗಿಯಿಂದು ಬಂದಿಹನೆಂದು
ಕೇಳಿದೊರ್ವ ಕುರುಂಬನತಿಭಕ್ತಿಯಿಂದ ತೋಯಿಸಿಕೊಳ್ಳುತಾತುರದೊಳು
ಹಾಲುತುಂಬಿದ ಪಾತ್ರೆಯಂ ಪಿಡಿದುಕೊಂಡೀ ಚ -
ರಾಲಯಕೆ ಬಂದು ತತ್ಸೇವಾಜನಂಗಳಂ
ಲೋಲಮೆನೆ ಕಂಡಪ್ಪಗಳೆ ಮಹಾಸ್ವಾಮಿಗಳ ಪೂಜೆಗೀ ಗೋಕ್ಷೀರವ ॥ ೧೭ ॥

ತಂದಿರುವೆನಿವನು ಕೊಳ್ಳಿರಿ ನೀವೆನುತ್ತವಂ
ಮುಂದಕ್ಕೆ ಕೈಮಾಡಲೀಕ್ಷಿಸುತ್ತೀನಿದೆಲೊ
ಮಂದಶೀಲನೆ ತೊಪ್ಪನಿನ್ನಂಗಿಯಿಂದಿಳಿವವರಲ್ಲಿ ನೀರಹನಿಯು
ಹಿಂದಕ್ಕೆ ಕೊಂಡುಹೋಗೀ ಹಾಲನೊಲ್ಲೆನಿಂ
ತೆಂದು ಧಿಕ್ಕರಿಸಲಾ ಮಾತನಾಲಿಸಿ ಮನದೆ
ನೊಂದು ತಳುವದೆ ಕುಮಾರೇಶ್ವರಂ ಗಾಂಭೀರ್ಯದಿಂ ಸೇವಕರನು ಕುರಿತು ॥ ೧೮ ॥

ಮತಿಗೇಡಿಗಳೆ ನಿಮ್ಮ ಶೀಲವೀತನ ಭಕ್ತಿ-
ಗತಿಶಯಮಪಲ್ಲ ಶಿವಲಿಂಗಪೂಜಾವಶ್ಯ-
ಕತೆಯುಳ್ಳ ಗೋಕ್ಷೀರಮಂ ತರುವವೆಂತಿಂದು ಹತ್ತಿಹುದು ಮಳೆಯಿದೆಂದು
ಕೃತಕತನದಿಂದಾಡುವಿರಿ ಪೋಗಲಾರದೀ
ಮತಿವಂತನಾರುಮುಸುರದೆ ತಾನೆ ತಿಳಿದು ಸ-
ನ್ಮತಭಕ್ತಿಯಿಂದ ಹೊಳೆಯಂ ದಾಂಟಿ ಸುರಿವ ಬಲು ಮಳೆಯೊಳಗೆ ತಂದಿರುವನು
॥ ೧೯ ॥

ಶೀಲಮಂ ಕಲಿತಿರುವೆವೆಂಬಹಂಕಾರದಿಂ
ಮೇಲೆ ಬರಿತೋಳೆವುದಂ ಕಲಿತಿರುವಿರೈ ನೀವು
ಕೀಳಾದ ಬಲುಹೊಲಸುಗುಣಗಳೇ ತುಂಬಿಹವು ನಿಮ್ಮಂತರಂಗದಲ್ಲಿ
ಹಾಲಮತದವನಿವಂ ತಿಳಿಯಲೀತನ ಮನಂ
ಹಾಲಿನಂತಿಹುದಿದಂ ಪರಿಕಿಸದೆ ತಿಳಿದಂತೆ
ಬೀಳುಗಳೆವುದಿದಾವ ಜಾಣ್ಮೆ ನಿರ್ಮಲಚಿತ್ತವೇ ಪ್ರಮುಖದೊಳು ಮಾನ್ಯವು ॥ ೨೦ ॥

ಚಿತ್ತನಿರ್ಮಲವಾಗುವದಕಾಗಿ ಶೀಲಮುಂ
ಚಿತ್ತನಿರ್ಮಲತೆಗಾ ನಿಷ್ಕಾಮ್ಯಕರ್ಮಮುಂ
ಚಿತ್ತನಿರ್ಮಲತೆಯೊದಗುವದಕ್ಕುಪಾಸನಮದೆಲ್ಲರಿಗವಶ್ಯಮೆಂದು
ಚಿತ್ತಶಾಂತರ ಶಾಸ್ತ್ರದಭಿಮತಗಳಲ್ಲವೇ
ಚಿತ್ತದೊಳು ವಿಧಿನಿಷೇಧಪರೀಕ್ಷೆಯಂ ಮಾಡಿ
ಮತ್ತವಾ ದೇಶಕಾಲಸ್ಥಿತಿಗಳನುಸಾರಮಾಗಿ ತಿಳಿದಾಚರಿಪುದು ॥ ೨೧ ॥

ತಿಳಿಯೆ ಕಣ್ಣಪ್ಪನತಿ ಪರಿಶುದ್ಧಭಾವಮುವ-
ನೊಲಿದು ಲಿಂಗಾರ್ಚನೆಯೊಳುಪಯೋಗಿಸಿದ ವಸ್ತು-
ಗಳ ಜಿಗುಪ್ಸೆಯು ಕಳೆದು ಪರಮಾತ್ಮನಿಂದವಗೆಕೊಡಿಸಲಿಲ್ಲಿವೆ ಮೋಕ್ಷವಾ
ಮಲಹರನ ಭಕ್ತರ ಪವಿತ್ರ ಮಂಗಲಭಾವ-
ದೊಳು ನಿಲ್ಲವಾವದೋಷಜಿಗುಪ್ಸೆ ಶಂಕೆಯುಂ
ನೆಲದೊಳಮೃತಂ ಬಿಸಂ ಬಿಸಮುಮೃತವಾಗಿ ಪರಿಣಮಿಪುದೀ ಭಾವದಿಂದ ॥ ೨೨ ॥

ಈತಂ ಮಹಾಭಕ್ತಿಯಿಂದು ತಂದಿರುವ
ನೀತನೀ ಪಾಲಿನೊಳ್ಬಹುಭಕ್ತಿ ತುಂಬಿರುವ-
ದೀತನಂಗಿಯು ನೀರು ಬೀಳ್ವಡೇನಾಯ್ತುದುಂ ಪಾಲೆಮ್ಮ ಲಿಂಗಯ್ಯಗೆ
ಪ್ರೀತಿಯುಪಚಾರ ಸುಪದಾರ್ಥವೆಂದರಿದು ಪರಿ-
ಪೂತಭಾವನೆಯಿಂದ ತೆಗೆದುಕೊಳ್ಳಿರಿ ಬೇರೆ
ಮಾತೇಕೆ ಭಕ್ತಿಭಾವದೆ ಬಂದ-ಯಾಚಿತಸುಗೋಮಾತೆಯಮೃತವಿದನು ॥ ೨೩ ॥

ಮತಿಗಲಿತು ಸೇವಕರ್ತ್ತಸ್ಸಥೆಯ ನೀಸಿಕೊಂ-
ಡತಿಸಮಾಧಾನಮುಂ ಪೊಂದಿದರು ಕುರುಬನೀ
ಯತಿಪನ ಪದಾಬ್ಜಕಾನತನಾಗಿ ಗುರುವೆ ನಿನ್ನುಪದೇಶ ವಚನದಿಂದ
ಕೃತಕೃತ್ಯನಾದೆನೀ ಭಕ್ತಿಪ್ರಸಂಗಮುಂ
ಸತತಮೆನಗೊದಗುತಿರುವಂತೆಸಗು ನೀನೆಂದು
ನುತಿಸಿದಂ ಜಂಗಮನ ವೃತ್ತಿಭಾಷಣಭಾವಗಳ್ಗಗದ್ಘಿತಮಲ್ಲನೇ ॥ ೨೪ ॥

ಎಮ್ಮಯ ವಿರಾಟ್ಪುರ ಕುಮಾರಶಿವಯೋಗೀಂದ್ರ
ನೊಮ್ಮೆ ಶಿವಯೋಗಮಂದಿರದ ಸಲುವಾಗಿ ತಾ-
ನೊಮ್ಮೆ ದ್ಯಾಂಪುರಮೆಂಬ ಹಳ್ಳಿಗೈತರಲಲ್ಲಿ ಸರ್ವರುಂ ಭಕ್ತಿಯಿಂದ
ತಮ್ಮತಮ್ಮಯ ಮನೆಗಳಿಗೆ ಕರೆದುಕೊಂಡೈದಿ-
ಯೊಮ್ಮನಸಿನಿಂದ ಶಕ್ತ್ಯನುಸಾರಂ ಕಾಣ್ಕೆ-
ಯಂ ಮೆಚ್ಚುವಂತರ್ಪಣಂಗೈವುತಿರಲಂದು ನಾನೀಚರಾಧಿಪನನು ॥ ೨೫ ॥

ಹರುಷದಿಂಪೆಮ್ಮಪಮಂದಿರಕೆ ಕರತಂದು ಸ-
ತ್ಕರಿಸಿ ಕುಳ್ಳಿರಿಸಿಪೆಸು ಪಡದಿಮಕ್ಕಳು ಬಂದು
ಚರಣಸನ್ನಿಧಿಯಲ್ಲಿ ಸಾಷ್ಟಾಂಗವೆರಗಿದರು ಕಾಣ್ಕೆಕೆಯಂ ಕೊಟ್ಟಬಳಿಕ
ಬಿರುಗುತಿಹ ತಳಿಗೆಯೊಳು ಜ್ಯೋತಿಯಂ ತುಂಬಿ ಬಲು-
ಸರಸಮೆನೆ ಹಾನಗಲ್ಲಯತೀಂದ್ರಜಯವೆಂದು
ನೆರೆದೆನ್ನ ವಿದ್ಯಾರ್ಥಿಗಳು ಮಂಗಲಾರತಿಯ ಗೀತೆಯಂ ಪಾಡಲದಕೆ ॥ ೨೬ ॥

ಸಿಡಿಮಿಡಿಯುನಾಂತಿದೇನೆಮ್ಮನೇ ಪಾಡುವರೆ
ಪೊಡವಿಯೊಳು ಮೇಲಾದ ಚರವರ್ಯರಿಲ್ಲವೇ
ಕಡುಸಂತಸದೊಳು ಮನೆಗೈತಂದವರಿಗಿಂತ-ಸಂತುಷ್ಟಿಯಂ ಮಾಳ್ಪರೇ
ಪಡೆದುದೇನೀ ವ್ಯಥಾಸ್ತುತಿಯಿಂದ ನೀವೆಮ್ಮ
ನಡೆನುಡಿಗಳೊಳದಾವ ಮಹತಿಯಂ ಕಂಡಿರ್ದೈ
ಬಿಡಿ ರೀತಿಯಲ್ಲಮಿದು ನಾಪೊಪ್ಪೆನೆಂದೊರೆದು ಮರುಳ್ಗನಸಮಾಧಾನವೆ ॥ ೨೭ ॥

ಇವರ ನುತಿಯುಳ್ಳ ಮಂಗಲವ ಪಾಡೆಂದು ನಾ-
ನವರಿಗಾನೊರೆದಾತನಲ್ಲವಪರಿದನೆ ಪಾ-
ಡುವರೆಂಬುದೆನಗೆ ಗುರುತಿಲ್ಲ ಮಾಡುವವೇನು ಕಾಲಕ್ಕುಪಾಯವಿಲ್ಲ
ಶಿವಶಿವಾ ದುರ್ಭಾಗ್ಯನಾನಿರ್ಪೆನೀ ಮಹಾ
ಶಿವಯೋಗಿವರರ ಮನವೆನ್ನ ಮಂದಿರದೊಳೆ-
ನ್ನವರಿಂದ ಸಂತೋಷಮಂ ತಳೆದುದೇಗೈವುದಿನ್ನೆಂದು ಮನಮೊಳೆಣಿಸಿ ॥ ೨೮ ॥

ನಾನವರ ಸೇವೆಯಂ ಮೊದಲಂತೆ ಮಾಡಿಯಭಿ-
ಮಾನದಿಂದವರುಳಿದ ಬೀಡಿಗೋರ್ವಾಪ್ತನಂ
ಸಾನುಮತಿವಡೆದೊಡಂಗೊಂಡೈದಿ ಪಗಲು ಲಿಂಗಾರ್ಚನೆಯ ಮುಗಿಸಿಕೊಂಡು
ಮೌನದಿಂದೋರ್ಪ್ಪರೇ ಕುಳ್ಳಿರ್ಪ್ಪರಂ ಕಂಡು
ಮಾನಸದೊಳಂಜಿ ವಂದಿಸಿ ಪದಾನುಜ್ಞೆಯಿಂ
ದೀನಭಾವಂ ಮಿಸುಗೆ ವಿಶ್ರಮಿಸಿ ಬುದ್ಧಿ! ಮರೆನೋಸವಿಂದೆನಗಾದುದು ॥ ೨೯ ॥

ಗೀತೆಯಿಂ ತಮ್ಮನುರೆ ಪೊಗಳಬೇಕೆಂದು ಪೇ -
ಳ್ದಾತನಾನಲ್ಲವರು ಪಾಡಲಾರಂಭಿಸಲಿ -
ದೇತಕ್ಕೆ ಜೇರೆ ಮಹನೀಯರಂ ಪಾಡಿರೆಂದೊರೆದು ಪಾಡಿಸದಿರ್ಪ್ಪ ನೇ
ಮಾತು ತಪ್ಪಾದುದಿದೆ ಮೋಸವೆನ್ನೀ ಪ್ರಮಾ-
ದಾತಿಶಯಚಿಂತಾಗ್ನಿಯಿಂ ಬೇವೆನಪರಾಧ
ರೀತಿಯಂ ಮರೆದು ಪಾಲಿಪುದೆಂದು ದೀನಸ್ವರಮದುಣ್ಮೆ ಮುಗುಳ್ನಗಲು ‖ ೩೦ ‖

ಏಳಿರಿ ಮುಖಸ್ತುತಿಗೆ ಮುನಿದೆವಲ್ಲದೆ ನಿಮ್ಮ
ಮೇಲೆಮ್ಮ ಕಿನಿಸೆಳ್ಳನಿತಿಲ್ಲ ಪದೆದು ತ-
ಮ್ಮಾಲಯಕೆ ಬಂದವರನುಪಚರಿಸಬೇಕವರ ಯೋಗ್ಯತೆಗೆ ಸರಿಯಾಗಿಯೇ
ಕಾಲಾನುಸಾರಮುಪಚಾರಕರ್ತಮ್ಮ ಗುಣ
ಶೀಲಗಳ ಮಾನದಿಂದುಪಚರಿಸಬೇಕದಕೆ
ಕೀಳಾದೊಡೂನವಾದೊಡಮುಪ್ಪುದಪಮಾನಮುಪಚರಿತರಿಗೆ ತಿಳಿಯಲು ‖ ೩೧ ‖

ಶರಣರಿಗೆ ಸಲ್ಲುವ ವಿಶೇಷಣಗಳೆಮಗೊಳ್ಳೆ
ಸರಿಯಾಗಬಲ್ಲವೇ ಶ್ರೀಮದಥಣಿಯ ಮಹಾ
ಮುರುಘೇಂದ್ರ ಶಿವಯೋಗಿವರ್ಯರಂತಹ ತಪೋನಿಧಿಗಳೇ ನಾವು ಪೇಳಿ
ಮರೆದಾದೊಡುಂ ತಮ್ಮ ಗುರುಚರಾರ್ಯರನವರ
ಪೊರೆಯಲ್ಲಿ ನೆರೆವವರ ಮುಂದೆ ಬಣ್ಣಿಸುವದಿದು
ತರವೆ ಸ್ವಾರ್ಥಿಗಳ ಕುರುಹಿದರಿಂದ ಸಾಮಾನ್ಯಮಪ್ಪುದಾ ಗುರುಚರರಿಗೆ ‖ ೩೨ ‖

ಸಲೆ ಸಮಾಜಸುಧಾರಕರೊಳಾದುವನರು ನೀ-
ಪ್ತೀಯುದವರಂತೆಸಗಿದುವನು ಸೈರಿಸಲಿಲ್ಲ
ನೆಲದೊಳಾತ್ಮಸ್ತುತಿಪ್ರೀತಿಯೇ ಮೌರ್ಖ್ಯಮಾತ್ಮನಿರೀಕ್ಷಕರಿಗೆ ಹಾಸಿ-
ಸಲುವಂತೆ ಪಿಂದೆ ಬಣ್ಣಿಸಬೇಕು ಸುಜನರಂ
ಬೆಳೆಸಿಬಣ್ಣಿಸಲಾಗದೆಂದಿಗುಂ ಗುಣಗೇಡಿ-
ಗಳನಿಂದ್ರಚಂದ್ರಸಮರೆಂದಾವನೆನುದಿಂದಮಾದಡುಂ ಗುಣವಂತರು ‖ ೩೩ ‖

ಮುಂದೆ ಸವಿ ಮಾತಿನಿಂ ಪೊಗಳುವಾತಂ ಪಿಂದೆ
ನಿಂದಿಸುವನಿದು ನಿಶ್ಚಯಂ ಮುಂದೆ ಪೊಗಳದವ
ನೆಂದಿಗುಂ ಪಿಂದೆ ನಿಂದಿಸಲರಿಯನವನೆ ಗುಣವಂತನನ್ಯರಿಗೆ ನೋವು
ಬಂದೊಡಾಗುವನವಂ ನಂಬಿದವರಿಗೆ ಪುರುಕ-
ದಿಂದೊಳ್ಳೆ ಮಾರ್ಗಮಂ ತೋರುವಂ ಬೀರುವಂ
ಮುಂದಿಯುಂ ಬರಿದೆ ಪೊಗಳುವನಲ್ಲನೆಂದೊರೆದು ಸಂತೈಸಿದನು ಯತಿಪನು ‖ ೩೪ ‖

ಗುಣಹೀನರಾತ್ಮಸ್ತುತಿಗೆ ಹಿಗ್ಗುವರು ತಾವು
ಗುಣವಂತರಹುದೆಂದು ನಿಜಭಾವ ದೋಷದಿಂ
ಗುಣಿಗಳಾತ್ಮಸ್ತುತಿಗೆ ಕುಗ್ಗುವರು ನಿಜಗುಣವಿಮರ್ಶದಿಂದರಿದು ನಾವು
ಗುಣಹೀನರಿಹೆವೆಂದು ತಿಮಿರಚಂದ್ರಿಕೆಯಂತೆ
ಗುಣಹೀನಗುಣವಂತರಾತ್ಮದೊಳು ಭೇದಮುಂ-
ಟೆಣೆಯುರಂ ನಿರ್ಮಲಗುಣಾಢ್ಯರಿಂದುದ್ಧಾರಮಪ್ಪುದೀ ಭೂಲೋಕವು ‖ ೩೫ ‖

ಅಂತು ಸಂಧಿ ೧೪ ಕ್ಕೆ ಪದಗಳು ೫೭೭

ಶುಭಂ



* ॥ ಶ್ರೀ ಮಹಾಂತೇಶ ವಿಜಯತೇತರಾಂ ॥ *



# ಹದಿನೈದನೆಯ ಸಂಧಿ ಪ್ರಾರಂಭ



ಸೂಚನೆ:—

ಮನುವಿನಿರವಂ ಪೇಳ್ದು ಸಾಧುವನೊಡಂಬಡಿಸಿ
ಮನಸಿನಿಂ ತನ್ನಯ ಚರಿತ್ರಲೇಖನಕೊಪ್ಪ
ದನುರೋಧವಿಲ್ಲದತಿಕೃಪಣನಂ ಬರಿಸಿಕೊಳ್ಳದೆ ಮೆರೆದನೀ ಕರ್ತನು ॥

ತಾನು ತನ್ನಯ ಪೆಗಲಮೇಲೆ ತನ್ನಂ ಪೊತ್ತು
ಬಾನಿಗೇರುವೆನೆಂಬ ಮರುಳನಂತಬಲನ
ಜ್ಞಾನಿ ಜಡಕಾಲಕರ್ಮಾಧೀನನಾದನಾಂ ಮಡಿಪು ಗತಿಗಾಂಬೆನೆಂದು
ನಾನಾವಿಧ ಕ್ಲೇಶಕೊಳಗಾಗಿ ಬಳಲುವೆನು
ಮೇನಕಾತ್ಮಜೆಯರಸ ಪೊರೆವ ಹೊಣೆಗಾರನಿಹೆ
ನೀನೆಂದು ನಿನ್ನಮೇಲೆನ್ನೆಲ್ಲ ಹೊರೆಯಿಡುವ ಮನವನೆನಗಿತ್ತು ಸಲಹು ॥೧॥

ಮತ್ತಮುಂಕಲಕೋಟಿ ಶರಣನೆಂಬವನೊರ್ವ-
ನೆತ್ತಲುಂ ದುರುಳವೇದಾಂತಿಗಳ ಬಳಗದೊಳು
ಸುತ್ತಿ ಸುಳಿದಾಡುತುತ್ಪ್ರೇಕ್ಷೆಯಿಂ ಶಾಸ್ತ್ರಮಂ ಪೇಳುತ ಮಹಾ ಮಂತ್ರವ
ಒತ್ತಿ ಬೀದಿಗಳೊಳವಡೊಡನೆ ಕೂಗುತ್ತ ಕುಣಿ-
ಯುತ್ತ ಕಂಡವರಿಗುಪದೇಶಿಸುತ ಧರ್ಮವನು
ಹತ್ತಿಕ್ಕಿ ನಡೆವನವರವರ ಮೆಚ್ಚಿಗೆಯಂತೆ ಪವಣಗಳ ಭಯವಿಲ್ಲದೆ ॥ ೨ ॥

ಶಿವಮಂತ್ರದಿಂ ಜೀವಿಗಳು ಮುಕ್ತರಾಗುವರು
ಶಿವಮಂತ್ರಮಂ ಭಜಿಸಿ ಹೇಳಿ ಕೇಳ್ದೊಡೆ ಸಾಕು
ವಿವಿಧ ಪಶುಪಕ್ಷಿನೊದಲಾದ ಪ್ರಾಣಿಗಳುಸಹ ಭವಜಾಡ್ಯಮಂ ಗೆಲಿವವು
ಭುವನಮೆಮ್ಮಿಂದ ಪಾವನಮಪ್ಪುದೆಂದು ತಾ-
ನವಲೋಕನಂಗೈದು ಕಂಡಮಂದಿಯ ಕರೆದು
ಕಿವಿಯೊಳೀ ಮಂತ್ರೋಪದೇಶಮಂ ಮಾಡಿ ಗತಿಗಂಡೆ ನಡೆಯೆಸುತಿರ್ದನು ॥ ೩ ॥

ತನ್ನ ಹಾಸಿಗೆಯೊಳ್ಕೈತಂದಿರುಳೊಳೊರಗಿರ್ದ
ಕುನ್ನಿಗುಪದೇಶಮಂ ಮಾಡಿದಂ ಮಂತ್ರಮಂ
ಮುನ್ನೆದುರಿನೊಳು ಬೀಳ್ದ ಕಣ್ಣಪ್ಪಡಿಗೆ ಷಡಕ್ಷರವ ಬೋಧಿಸಿದನೊಮ್ಮೆ
ಇನ್ನೆಮ್ಮ ಸಾಧುಗಳಿಗವಿದಿಡದ ಪಾಮರರು
ಬನ್ನಬಡುವರು ಜವನ ಸೀಮೆಯೊಳು ಪೊಕ್ಕು ತಾ-
ನೆನ್ನುತವನಲ್ಲಲ್ಲಿ ಸಂಚರಿಸುತಿರ್ದನೀವಾರ್ತೆಯಂ ಕೇಳ್ದು ಬಿಡದೆ ॥ ೪ ॥

ಬರಮಾಡಿಕೊಂಡನೆಮ್ಮೀ ಕುಮಾರೇಶನಾ-
ಶರಣನಂ ಸಭೆಯೊಳ್ಕೈ ನಿನ್ನೀವಿಚಾರಮದು
ಸರಿಯುಲ್ಲ ಮಂತ್ರಮಂ ಜಪಿಸಬೇಕಲ್ಲದೇ ಭಜಿಸಲಾಗದು ಜಪವಿದು
ಪರಿಕಿಸಲು ವಾಚಕಮುಪಾಂಶು ಮಾನಸವೆಂದು
ವರಶಾಸ್ತ್ರಗಳ್ಪೇಳ್ವವಿಂತು ಮೂದೆರನಾಗಿ
ನೆರೆ ರಸನೆ ತುಟಿಗಳಲುಗದೆ ಮನದೆ ಮಂತ್ರಮಂ ನೆನೆವುದೇ ಮಾನಸ ಜಪಂ ॥ ೫ ॥

ರಸನೆ ತುಟಿಗಳ್ಳಿಸುಗೆ ಮಂತ್ರಮದು ತನ್ನ ಕಿವಿ-
ಗುಸಿರಾಗೆ ಕೇಳ್ವಂತೆ ಮಾಡುವದುಪಾಂಶುಜಪ-
ವೊಸೆದನ್ಯಕರ್ಣಗೋಚರವಾಗುವಂತೆ ಜಪಿಸುವದೆ ವಾಚಕ ಜಪವಿದು
ಎಸೆವೀ ಜಪವನು ನೀಚರಿಗೆ ಮ್ಲೇಂಛರಿಗೆ ಕೇ-
ಳಿಸದಂತರಣ್ಯಾದಿಶುಭವಿವಿಕ್ತಸ್ಥಲದೊ
ಳಿಸಗಿವೊಡೆ ಸಂಪ್ರಾಪ್ತಿಯಹುದುಕ್ತಫಲವಿದಂ ಜಪಿಸಬೇಕೆಚ್ಚರಿಂದ ॥ ೬ ॥

ಫಲವಿಲ್ಲ ಜಾಪಿಗಾನೀಚಾದಿಗಳ ಕರ್ಣ-
ದೊಳು ಬೀಳ್ದ ಮಂತ್ರದಿಂ ಮಂತ್ರಶಬ್ದಂ ಮನನ
ಸಲಹುವರ್ಥಂಗುಡುವದೀ ಮಹಾಮಂತ್ರಮಂ ಗಣನೆಯಿಂ ಜಪಗೈದೊಡೆ
ಫಲವಹುದು ಗಣನೆಯಿಲ್ಲದೆ ಮಾಡಿದುರುಜಪದ
ಫಲವನಸುರರ್ಕಳಪಹರಿಸುವರು ಮೇಣ್ಜಪಕೆ
ಸ್ಥಲಕಾಲನಿಯಮಾಸನಾಧಿಕಾರಗಳ ಸಾಪೇಕ್ಷೆಯುಂಟರಿದು ನೋಡೆ ॥ ೭ ॥

ಗುರುವರಂ ಶಿಷ್ಯನಂ ಸಂಸ್ಕಾರಪೂರ್ವಕಂ
ಕರೆದಾರಿಗುಂ ಕೇಳದಂತವನ ಬಲಗಿವಿಯೊ
ಳೊರೆವಂ ಮಹಾಮಂತ್ರಮಂ ಶಿಷ್ಯನಂ ಪರೀಕ್ಷಿಸಿಯೊಪ್ಪಿ ಕರುಣದಿಂದ
ಮರೆಯದಿರು ಮಗನೆ ದಿನದಿನಮುಚಿತವೇಳೆಯೊಳು
ಕರದಿಷ್ಟದರ್ಶನೆಯೊಳೀಮೂಲಮಂತ್ರಮಂ
ನೆರೆ ಸಮಗ್ರೀವೋತ್ತಮಾಂಗ ಸುಶರೀರಿ ಸೀನಾಗಿ ಜಪಿಸೆಂದೊರೆವನು ॥ ೮ ॥

ಮಲಗಿ ಜಪಿಸುವದಲ್ಲ ನಿಂದು ಜಪಿಸುವದಲ್ಲ
ನಲಿವುತಾಕಳಿಸುತ್ತ ಮೈತುರಿಸಿಕೊಳ್ಳುತ್ತ-
ಮುಲಿವುತ್ತ ಜಪಿಸಲಾಗದು ಮನುವ ಮತ್ತೆ ಮೂವತ್ತೆರಡುದೋಷಗಳಿಗೆ
ಒಳಗಾಗದಂತೆ ಮಂತ್ರವ ಜಪಿಸಬೇಕೆಂದು
ಸಲೆನಿಜಗುಣಾರಾಧ್ಯಮುಖ್ಯತತ್ವಜ್ಞಾನಿ-
ಗಳು ತಮ್ಮ ಗ್ರಂಥಗಳೊಳಾಗಮಾಮ್ನಾಯ ಪ್ರಮಾಣದಿಂ ಪೇಳಿರ್ಪರು ॥ ೯ ॥

ಧರೆಯ ಭೋಗಂ ದೊರೆವುದುಚ್ಚಾರಜಪದಿಂದ
ಸುರಲೋಕಸಂಪದಂ ಸಮನಿಪುದುಪಾಂಶುವಿಂ
ಹರನುಕ್ತಿಯಪ್ಪುದೀ ಮಾನಸಿಕಜಪದಿಂದ ನೀನಿದಂ ತಿಳಿದಿಲ್ಲವೇ
ಶರಣ ಕೇಳ್ಬೀದಿಯೊಳು ಮಂತ್ರಮಂ ಭಜಿಸುತೊ-
ತ್ತರದಿಂಪ ಕುಣಿದಾಡುವದಿದಾವ ಧರ್ಮವೈ
ಪರಿಕಿಸದೆ ಕಂಡವರಿಗುಪದೇಶಮಂ ಮಾಳ್ಪೆಯಲ್ಲ ಫಲವೇನಿದರೊಳು ‖ ೧೦ ‖

ಪರಿಪಕ್ವಹೃದಯರಲ್ಲದ ಮಂದಮನುಜರಿಗೆ
ಬರಿಪೆ ಬೋಧಿಪೆನೆಂಬ ಭ್ರಮೆಯಾತಕೆಂದು ಬಲು
ದುರಭಿಮಾನದ ಕಪಟಗುರುವೇಷದವರಿಗಾ ಸರ್ಪಭೂಷಣಯೋಗಿಯು
ಮುರುಕದಿಂ ಕೈವಲ್ಯಕಲ್ಪವಲ್ಲರಿಯಲ್ಲಿ
ಸರಳಮೆನೆ ಬೋಧಿಸಿರ್ಪಂ ನೀನುಬೂಕ ಕು-
ಕ್ಕುರಗಳಿಗೆ ಸಹಿತಮುಪದೇಶಿಸುವೆಯೆತ್ತಣ ವಿಚಾರವೈ ತಿಳಿದು ನೋಡು ‖ ೧೧ ‖

ಪರಶಿವಕ್ಷೇತ್ರದೊಳು ದೇವತಾಸನ್ನಿಧಿಯೊ-
ಳುರುತೀರ್ಥದೆಡೆಯೊತ್ತರಂಗಿಣೀತೀರದೊಳು
ಪರಮಪುಣ್ಯಾರಣ್ಯದೊಳ್ಗೋಷ್ಠದೊಳು ಶೈಲದೊಳ್ಪವಿತ್ರಸ್ಥಲದೊಳು
ಪರಿಶುದ್ಧಮಾದ ಜಲದಿಂ ಮಿಂದು ಮಡಿಯುಟ್ಟು
ಪರಿಯದಿಹ ಬಿಳಿಯ ಕಂಬಳಿಯ ಗದ್ದುಗೆಯಲ್ಲಿ
ಪುರಹರಸ್ಮರಣೆಯಿಂ ಕುಳಿತು ವಿಧಿಗನುಸರಿಸಿ ಮಂತ್ರಮಂ ಜಪಿಸಬೇಕು ‖ ೧೨ ‖

ಮನುಜಂಗೆ ಸಾಧ್ಯವಲ್ಲದೆ ಮುಕ್ತಿಸಾಧನಂ
ಶುನಕಾದಿಭೋಗಯೋನಿಜಗಳಿಗೆ ಸಾಧ್ಯವೇ?
ಶುನಿಶೂಕರಾದಿಹೀನಪ್ರಾಣಿಗಳಿಗೆ ಗತಿಯಾಯ್ತೆಂಬ ಚಾರಿತ್ರವು
ಮನಸಿಜವಿರೋಧಿಯು ತಮೀಯವಸ್ತುಪ್ರಜವ
ಘನತೆಯಂ ಪೇಳ್ವರ್ಥವಾದವಲ್ಲನೆ ತತ್ವ-
ದನುವಾದವಲ್ಲ ಮನುಜನ ಮನಸನೆಳೆವ ರೋಚಕವಾಕ್ಯವಿಹುದು ನೋಡು ‖ ೧೩ ‖

ಕಾಯವಿಡಿದಾತ್ಮರಾಶಿಗೆ ಪರಮಮೋಕ್ಷಕ್ಕು-
ಪಾಯವಿದು ಶಿವಮಂತ್ರವೆಂದು ನಿಜಗುಣಯೋಗಿ
ರಾಯನೊರೆದಿಹಸಿಲ್ಲಿ ಕಾಯಮಂ ಧರಿಸಿದ ಪಿಪೀಲಕಾದಿಗಳಲ್ಲವು
ಕಾಯವಿಡಿದಾತ್ಮರಾಶಿಯೊಳು ಭಾಗತ್ಯಾಗ-
ವಾಯತಂ ಮಿಗೆಮಾಡಿ ವಾಗ್ವೈಖರೀಕರ್ಮ-
ಕಾಯನಾದೀ ಮನುಜನಂ ಗ್ರಹಿಸಿಬೇಕು ವೈಖರಿಯೊಳಿಹ ಮನುಜಪಕ್ಕೆ ॥ ೧೪ ॥

ಮುಂದಮೇ ಗೀತೆಯೊಳು ಭುವನದ ಮನುಷ್ಯರಿಂ-
ತೆಂದು ಹಾಡಿಹನವನೆ ವೇದವಿದು ನಿಜಗುಣಂ
ಸಂದೇಹವಿಲ್ಲದರ್ಥವನುಳಿದು ಸುಮ್ಮನೇ ಗೊಂದಲದೆ ಬೀಳ್ವುದೇಕೆ
ಹೊಂದಿಲ್ಲವೀ ಪದ್ಯದೊಳ್ಜಪಾದಿಗಳ ವಿಧಿ
ಮುಂದುವರಿದಿದು ಕೇವಲಮಂತ್ರಮಹಿಮೆ ಬಹು
ಸುಂದರಕಥಾನಕೋದಾಹರಣೆಯಿಂ ಮಹಾರೋಚಕಸುಬೋಧಮಾಗಿ ॥ ೧೫ ॥

ನರಕಜೀವಿಗಳ ಕಷ್ಟವ ನೋಡಿ ಸೈರಿಸದೆ
ಕರುಣದಿಂ ಸಾನಂದನೀ ಮಹಾಮನುವನು-
ಚ್ಚರಿಸಲದನಾಲಿಸಿ ಪೊದಳ್ನುಡಿದವರೆಲ್ಲರುಂ ನರಕದಿಂದೇಳ್ದರು
ಸರಿಯಾಗದೀ ಮಂತ್ರಕಾವಾವಮಂತ್ರವೆಂ-
ದೊರೆದ ಚಾರಿತ್ರಮಿದು ತಪ್ಪಲ್ಲ ಜಪವಿಧಿಯ
ಬರೆದಿಹುದರಿಂದ ಸಾನಂದರಿತಿಹಾಸದಂತಾಚರಿಪುದಲ್ಲ ಕೇಳು ॥ ೧೬ ॥

ನಿರಯಕೋಟಿಗಳುಳ್ಳ ಯಮಲೋಕವದು ನಮ್ಮ
ನರರಿರುವ ಕರ್ಮಭೂಮಿಯದಲ್ಲವಲ್ಲಿರ್ದ
ನರಕಿಗಳು ಕರ್ತವ್ಯದೇಹಿಗಳು ತಾವಲ್ಲ ನಮ್ಮ ಲೋಕಕೆ ಸಲ್ಲುವ
ಪರವೇದವಿಧಿಗಳಾ ಲೋಕಕ್ಕೆ ಸಂಬಂಧ
ವಿರದಕಾರಣದಿಂದವಕ್ಕೆ ತಪ್ಪೆಂದು ನಾ
ವ್ಪರಿದೆ ತರ್ಕಿಪುದೇಕೆ ನಮ್ಮ ವರ್ತನದುದಾಹರಣೆಯಲ್ಲಸುದು ತಿಳಿಯೆ ॥ ೧೭ ॥

ಸಾನಂದನಾನರಕಿಗಳ ಕಷ್ಟಮಂ ನೋಡಿ
ಮಾನಸದೊಳತಿಖೇದಮಂ ಪೊಂದಿ ಬಹುಕೃಪಾ
ನೂನಪರವಶನಾಗಿ ಮಂತ್ರಮಂ ನುಡಿಯಲಾಕ್ಷಣದೊಳಾ ನಾರಕಿಗಳು
ಆ ನಿರಯದಿಂದೇಳ್ದರೀ ಮಹಾಮನುವಿಧಿ ವಿ-
ಧಾನಗಳ್ಮಂತ್ರಸಿದ್ಧರನಡ್ಡಗಟ್ಟವೆಂ-
ದಾ ನಿಖಿಲವೇದವಿದುಗಳ್ಪೇಳ್ವರೀ ನಡತೆ ಶಾಸ್ತ್ರಮಂ ಮೀರಿರುವದು ॥ ೧೮ ॥

ಇನ್ನೊಂದು ಬಗೆಯಿಂದ ಖಗೆಯಲೋರ್ವಳಿಗೋರ್ವ
ಸನ್ನುತಪ್ರಿಯನಾಥನಿರುವ ನಿಯಮವಿದುಂಟು
ಮುನ್ನೈವರಿಗೆ ಪತ್ನಿಯಾಗಿ ಘನಸಾಧ್ವಿಯೆನಿಸಿದ ದ್ರುಪದಸುತೆಯೊಳು
ಉನ್ನಿಸಲಿದೊಂಪವಳಿಗುರುಧರ್ಮವಾದಂತೆ
ನನ್ನಿಯೆನೆ ಸಾನಂದಗಿದು ಧರ್ಮವಾಗಿರ್ಪ-
ದೆನ್ನಲಿದರೊಳ್ತಪ್ಪದೇನೆಂದು ಸಮ್ಮತಿಸರೇ ಸಕಲತತ್ವಜ್ಞರು ॥ ೧೯ ॥

ಸಾನಂದರಂತಿಂದು ನೀವೆಲ್ಲ ಸಾಧುಗಳು
ಸಾನಂದಮನುರಾಗಿ ಪಗಲಿರುಳೆ ಬೀದಿಗಳೊ
ಳೇನೊಂದು ಸಂದೇಹವಿಲ್ಲದಲೆ ಕೂಗುವಿರಿ ಕುಣಿಕುಣಿದು ಸೋಗಮಾಡಿ
ಜ್ಞಾನಿಗಳು ನೀವೀಮಹಾಮಂತ್ರದಿಂದೇಸು
ಮಾನವರನುದ್ಧರಿಸಿದಿರಿ ಪೇಳಬಲ್ಲಿರಾ
ಮಾನಸದೊಳಭಿಮಾನವಂಚನೆಗಳಂ ಬಿಟ್ಟು ಸರಳತನದಿಂ ಬಾಳಿರಿ ॥ ೨೦ ॥

ಪ್ರಾಣಿಗಳ ಭವಪಾಶಮಂ ಪರಿದು ಲೋಕಮಂ
ಮಾಣದುದ್ಧರಿಸಲೆಂದಿರುವ ನಿಮ್ಮಯ ಯತ್ನ
ಕೂಣೆಯಾಗಲುಬಾರದೆಂದಪೇಕ್ಷಿಪೆವಾದೊಡಾ ಧರ್ಮಶಾಸ್ತ್ರವಿಧಿಗೆ
ಕ್ಷೋಣಿಯೊಳು ತಪ್ಪಿ ನಡೆದೊಡೆ ಫಲಂ ಬರ್ಪುದೇ
ಜಾಣರಹುದೆಂಬರೇ ನೀವೇ ವಿಚಾರಿಸಿರಿ
ಸ್ಥಾಣುಪ್ರಣೀತ ನಿಗಮಾಗಮಂಗಳ ಧರ್ಮಮವಿರತಂ ಕರಣೀಯವು ॥ ೨೧ ॥

ಇಂತವನ ವಾದಪ್ರಸಂಗಕ್ಕೆ ಸರಿಯಾದ-
ನಂತಪ್ರಮಾಣಂಗಳಂ ಪೇಳಲೊಪ್ಪಿ ಬಲು
ಸಂತಸದೊಳೀ ಕುಮಾರೇಶನಪ್ಪಣೆವಡೆದು ನಡೆದಂ ನಿಜಸ್ಥಾನಕೆ
ಭ್ರಾಂತಿಯಳಿವುದು ಮಹಾತ್ಮರ್ತ್ರಿಳಿಸಿದೊಡೆ ಹೇವ
ಮಂ ತವಿಸಲಾರನಜನುಂ ಜಗದೊಳೆಂಬ ನುಡಿ
ಯಂತವನೊಳುಳ್ಳ ಕೆಲಬರ್ಕನದೆ ಸಿಡಿಮಿಡಿಯನಾಂತರಿದಕೇಗೈವುದು ॥ ೨೨ ॥

ನಾನೊಮ್ಮೆ ಶಿವಯೋಗಮಂದಿರದೊಳೀ ಮಹಾ
ಶ್ರೀನಿರಂಜನನ ಜೀವನಚರಿತ್ರೆಯನು ಸ-
ನ್ಮಾನನೀಯಮದಾಗಿ ಬರೆಯಬೇಕೆಂದೆಳಸಿ ಬೇರೋರ್ವ ಶಾಸ್ತ್ರಿಗಳನು
ಮೌನದಿಂ ನೆನಪು ಬರೆಯೆಂದು ಸಿಂದಿರಿಸಿ ಬಿಡ
ದಾನಂದದಿಂ ಪ್ರಸಂಗವ ತಂದು ನೆರೆಕೇಳ-
ಲೇನೊಂದು ಶಂಕೆಗೊಳದುಸುರಿದಂ ತನ್ನ ಕೆಲವಿಷಯಮುಂ ಮತ್ತೆ ಕೇಳೆ ॥ ೨೩ ॥

ಜನಿಸಿದೆವು ಪ್ರಭವವತ್ಸರದಲ್ಲಿ ಖುಂಬಣ್ಣ
ನೆನಿಸೆಮ್ಮ ಜನ್ಮನಾಮವದೆಂದು ಪೇಳಲದ
ನನುರಾಗದಿಂ ಬರೆಯಿರೆಂದು ನಾನಾಶಾಸ್ತ್ರಿಗಳಿಗೆ ಮರೆದೊರೆಯಲದನು
ಘನಕುಮಾರೇಶ್ವರಂ ಸಿಂದಿದುಗಿ ತನ್ನಿಘುಣ
ರನು ನೋಡಿ ಬರೆವುದೇನೆಂದವಂ ಕೇಳೆ ಸು-
ಮ್ಮನೆ ಕುಳಿತಿವೆನೊಂದು ಮಾತನಾಡದೆ ಬೆದರಿ ಮನಸಿನೊಳು ತರಹರಿಸುತೆ॥ ೨೪ ॥

ತಮ್ಮ ಜೀವನಚರಿತ್ರೆಯ ಬರೆಯಲೆಂಬೆನಗೆ
ಸಮ್ಮತಿಸಿ ತಾವು ತಮ್ಮ ಗುಣಕ್ರಿಯಾದಿಗಳ
ನೊಮ್ಮೆಯುಂ ಪೇಳದಿಹರೆಂದಿಂತು ಮೋಸಮಂ ಮಾಡಿದೆನದೇ ಮುಗಳ್ದು
ಬಿಮ್ಮನೆನ್ನಯ ಪಾಲಿಗೈತಂದು ಮೊಪಲಿದ್ದ
ಹುಮ್ಮಸಂ ಬರಿದಾದುದಿನ್ನೇನು ಮಾಳ್ಪುದೆಂ
ದುಮ್ಮಳವನೊಳಕೊಂಡು ಕುಸಿದು ಪುಸಿ ನಗೆಗೆ ಪಕ್ಕಾದೆನಾನಂದವಗೆಟ್ಟು ॥ ೨೫ ॥

ಎಮ್ಮ ಜೀವನಚರಿತ್ರವ ಬರೆಯಬೇಕೆಂದು
ನೆಮ್ಮಿ ವಿಷಯಂಗಳಂ ಸಂಗ್ರಹಿಸುತಿರ್ಪಿರಾ?
ಎಮ್ಮೊಳಿರ್ಪೆಲ್ಲ ದುರ್ಗುಣಗಳಂ ಪೇಳ್ವೆನವುಗಳನೆಲ್ಲ ಬರೆದು ನೀವು
ಸುಮ್ಮನೆಮ್ಮನಸಪ್ರಚಾರಮಂ ಮಾಡುವದು
ಸಮ್ಮತವೆ ನಿಮಗೆ ಕೆಡುಕಂ ಬಿಟ್ಟು ಬಹು ಮಹಿಮೆ-
ಯಂ ಮನಸಿನಲ್ಲಿ ಕಲ್ಪಿಸಿಬರೆದು ದೊಡ್ಡವರನಾಗಿಸುವಿರಾ ಮುದದೊಳು ॥ ೨೬ ॥

ಬಸವಾಲ್ಲಮರತೆರದೊಳಾವು ಘನವಂತರೇ ?
ಪುಸಿನುಸುಳಸೂಯೆಯಿಲ್ಲದ ಸದ್ಗುಣಾಢ್ಯರೇ ?
ಮಿಸುಪ ಶಿವಯೋಗಿಗಳ್ದೊರೆಯರೇ ನೀವು ಚಾರಿತ್ರಮಂ ಬರೆಯುವದಕೆ
ವಸುಧೆಯೊಳಸಾರಸಂಸಾರವನು ಸಾರಮೆನ
ಲೆಸಗುವದೆ ಕವಿಧರ್ಮವೆಂಬ ನಾಣ್ನುಡಿಯ ಸಾ-
ಧಿಸುವಿರಾ ತೆಗೆಯಿರಿದು ಹೊಲ್ಲವೆಂದಾ ಕಾಗದವನೀಸಿಕೊಂಡರಾಗ ॥ ೨೭ ॥

ಅಂದಿನಿಂ ತಮ್ಮ ಚರಿತೆಯ ಬರೆಯಬಾರದೆಂ-
ಬೊಂದಭಿಪ್ರಾಯಮುಂಟಾದುದೀ ಮಹಿಮನೊಳು
ಮುಂದೊಮ್ಮೆ ಶಿವಯೋಗಮಂದಿರದೊಳತ್ಯನಾರೋಗ್ಯವಾದಾಗ ತಮ್ಮ
ಮಂಡಿಯಂ ಕರೆದು ನೀವಾರುವೆನ್ನಯ ಚರಿತೆ-
ಯಂ ದಲ್ಬರೆಯಲಾಗ ದೊರೆಯಲಾಗದು ಮನದೊ-
ಳಿಂದೋ ಯಶೋವಾಸನೆಯನು ತಳ್ಳಿಹೆನು ಗುರುಲಿಂಗಚರಸಾಕ್ಷಿಯಾಗಿ ॥ ೨೮ ॥

ಮೆರೆದೆನ್ನನುಗ್ರಹ ಗುರೂತ್ತಮರೊಳಿಲಕಲ್ಲ
ಚರವರ ವಿಜಯಮಹಾಂತೇಶಯತಿಪನೊಳಥಣಿ
ಮುರುಘೇಂದ್ರಶಿವಯೋಗಿಯೊಳನಂತಪುರದ ಗುರುಬಸವ ಶಿವಯೋಗಿಗಳೊಳು
ನಿರುತವೆಮ್ಮಯ ಭಕ್ತಿವಿಶ್ವಾಸಗಳು ಬಹಳ
ವಿರುವವರ ಸುಚರಿತ್ರಗಳನು ಬರೆಯಿರಿ ಬಿಡದೆ
ಮೆರೆಯಿಸಿರಿ ಮೈಲಾರಬಸವಪ್ಪನವರ ಗ್ರಂಥವ ತರಿಸಿಕೊಂಡೋದಿರಿ ॥ ೨೯ ॥

ಪೊಸಲೋಹಮಂ ಕನಕವಾಗಿ ಮಾಡುವ ಸಿದ್ಧ
ರಸದಂದದಿಂದಾಶ್ರಿತರ ಜಡಾಂಗವನು ಲಸ-
ದಸಮಾನಲಿಂಗತೇಜೋಯುಕ್ತಮಾಡುವನುಪಮಮಹಿಮರಿತಿಹಾಸವ
ರಸಿಕರೊಲ್ವಂತೆ ಬರೆಯಿರಿ ಪೊಗಳ್ದು ಕೇಳ್ದು ಸಂ -
ತಸವ ಪಡೆಯಿರಿ ಜಂಗಮಾಂಘ್ರಿವಾರಿಯನು ಸೇ -
ವಿಸಿದಂತೆ ಪರಿಶುದ್ಧರಾಗುವಿರಿ ನೀವೆಂದು ಪೇಳ್ದಂ ಕುಮಾರೇಶನು ॥ ೩೦ ॥

ಹೊಸಹಳ್ಳಿಯೆಂಬೂರಿಗೀ ಮಹಾಶಿವಯೋಗಿ
ಯೊಸೆದು ಶಿವಯೋಗಮಂದಿರ ಭಿಕ್ಷೆಗಾಗಿ ತಾಂ
ಪೊಸತಾಗಿ ಪೋಗಲಾಪೂರ ಸಕಲಪ್ರಮುಖರುಪಚರಿಸಿ ಭಕ್ತಿಯಿಂದ
ಮಿಸುಪಚರಸನ್ನಿಧಿಗೆ ಮಂದಿಯಂ ಕರೆಯಿಸಿ ಬರೆ-
ಯಿಸಲಾದರವರವರ ಯೋಗ್ಯತೆಗೆ ಸರಿಯಾಗಿ
ಮುಸುಗಿದತಿ ಕೃಪಣತೆಯೊಳವರೊಳೋರ್ವಂ ಮಹಾಸನ್ನಿಧಿಗೆ ಪೋದೊಡೆನಗೆ ॥ ೩೧ ॥

ಪೇರುವರು ಕೂಡಿದವರೆಲ್ಲ ಭಿಕ್ಷೆಯ ಬಹುಲ
ಭಾರಮಂ ಜನರೊಳದಕಾನೊಲ್ಲೆನೆನ್ನಲಿಕೆ
ಬಾರದೆಂದರಿದು ಮಠದಯ್ಯನಂ ತನ್ನ ಮನೆಗಾರ್ಯೆದು ಬರಿಸಿಕೊಂಡು
ಏರಿರ್ಪುದೆನಗಿಂದು ಹೊಟ್ಟೆಕಡಿತಮದು ಬರ
ಲಾರೆ ನಾ ಸ್ವಾಮಿಗಳ ಸನ್ನಿಧಿಗೆ ನೀವೇ ಸು -
ಧಾರಿಸಿ ಪೊದಳ್ದು ಪೇಳ್ದೀ ನಾಲ್ಕು ರೂಪಾಯಿಗಳನು ಸಲ್ಲಿಸುವದೆಂದು ॥ ೩೨ ॥

ಕೊಡಲವನ ಮೋಸಮಂ ತಿಳಿಯದೀ ಹುಚ್ಚು ಮಠ -
ದೊಡೆಯನಾ ರೂಪಾಯಿಗಳನು ಸನ್ನಿಧಿಯ ಮುಂ-
ದಿಡಲು ಪ್ರಮುಖರ್ಕಳದನರಿದೀ ಪಣಂ ಬೇಡವಾತನೇ ಬರಲಿ ಪೋಗಿ
ಬಿಡದಿರೆ ಕರೆತನ್ನಿ ನೀವೆಂದು ಚಾರರಿಗೊರೆಯೆ
ಕಡಿವುದಂತವನುದರವೆಂತು ಬಂದಪನವಂ
ಬಿಡಿರಿ ಕರೆಯಲುಬೇಡವೆಂದು ಬಿಡಿಸಿದನೀ ಕುಮಾರೇಶನೇವೇಳ್ವುದು ॥ ೩೩ ॥

ಬರಿದೆ ನೆವಕಾಗಿ ಹೇಳಿದ ಹೊಟ್ಟೆಕಡಿತವೇ
ಯರೆಜಾವದಲ್ಲಿ ನಿಜವಾಗಿ ಬಂದುದು ಪೆರ್ಚಿ
ಮರುದಿನವೆ ಮುಗಿಸಿದಂ ಭೂಲೋಕಯಾತ್ರೆಯಂ ಪಾಪಿ ಗಳಿಸಿದುದನುಣದೆ
ಹರಗುರುಚರಾರ್ಯರನು ವಂಚಿಸಿದ ಪಾಪವೀ
ತೆರದೊಳುರುಪದೆ ಮಾಣದೆಂದೂರಜನರೆಲ್ಲ
ಮರುಗಿದರು ಕೊರಗಿದರು ಕೇಡಿಗೀ ವಿಪರೀತಬುದ್ಧಿಯುದ್ಭವಿಪುದೆಂದು ॥ ೩೪ ॥

ಗುರುಚರರ ಕರುಣವುಂಟೆಲ್ಲಭಕ್ತರ ಮೇಲೆ
ಸಿರಿವಂತರಾಗಿ ಸತಿಸುತರಿಂದ ಕೂಡಿ ಸೊಗ-
ವೆರಸಿ ಬಾಳ್ವಿವರೆಂದು ಹರಸುತಿಹರವರನಾರತಮುಂ ಶಿವಾರ್ಥವಾಗಿ
ಮರುಕದಿಂ ತಮಗಲ್ಲದೊಮ್ಮೊಮ್ಮೆ ಭಕ್ತರೊಳು
ತೊರೆಯುವರ್ಥಿಪರರ್ಥವೇ ಪ್ರಾಣವೆಂದು ನಂ-
ಬಿರುವ ಜಡಮಾನವರ್ವಂಚಿಪರ್ಮುಂಚಿಸರ್ಕೋಪಾಗ್ನಿಯಿಂದಪರನು ॥ ೩೫ ॥

ಅಂತು ಸಂಧಿ ೧೫ ಕ್ಕೆ ಪದಗಳು ೫೬೧

ಶ್ರೇಯಃ



* ॥ ಶ್ರೀ ಶಾಂತಾಯ ನಮಃ ॥ *



# ಹದಿನಾರನೆಯ ಸಂಧಿ ಪ್ರಾರಂಭ





ಸೂಚನೆ:--

ಎಡೆಯೂರಸಿದ್ಧಲಿಂಗೇಶ್ವರನ ವೇದಿಕೆಗೆ

ಪೊಡಮಟ್ಟು ಪಿಡಿದ ವ್ರತಮಂ ಬಿಟ್ಟು ಜಂಗಮನ

ವೃಡಶರಣನಿಚ್ಛೆಯಂ ತೀರ್ಚಿ ಶಿವಯೋಗಾರ್ಯನಂ ಪೊರೆದನೀ ಕರ್ತನು ॥

ದೇಹವೇ ನಾನೆಂಬಪಾಪವದು ಕೋಟಿಗೋ-
ದ್ರೋಹದಿಂದಧಿಕವೆಂದುಪನಿಷತ್ಪಂಡಿತಸ-
ಮೂಹವೊರೆವುತ್ತಿರ್ಪ್ಪದಾದೊಡುಂ ಬಿಡಲೊಲ್ಲೆನೀಯಹಂಭಾವಮತಿಯ
ಮೋಹವಿಲ್ಲವೆ ಗುರೂತ್ತಮಗೆ ತನುವಂ ಮಹೋ-
ತ್ಸಾಹದಿಂ ಲಿಂಗಕ್ಕೆ ಮನವ ಜಂಗಮನಿಗೆ ನಿ-
ರೀಹದಿಂ ಭಾವಮಂ ಕೊಡುವ ಸಡಗರವನನುಕೂಲಿಸೆನಗಿಂದುಜೂಡ ॥೧॥

ಎಡೆಯೂರ ಶ್ರೀಸಿದ್ಧಲಿಂಗಸುಕ್ಷೇತ್ರಕ್ಕೆ
ಸಡಗರದೊಳಾ ಜಗದ್ಗುರುತೋಂಟದಾರ್ಯರೀ
ಮೃಡಯೋಗಿವರ ಕುಮಾರೇಶನಂ ಶಿವಯೋಗಮಂದಿರದ ಸಾಧಕರನು
ಒಡಗೊಂಡು ದಯಮಾಡಿಸಿದರೊಮ್ಮೆ ಭಕ್ತಿಯಿಂ
ನಡೆದರವರೊಡನೆ ಕೆಲ ಭಕ್ತಮಾಹೇಶ್ವರರು
ಪೊಡವಿಯೊಳು ಪೆಸರಾಗುವಂತೆ ಮೆರೆದುದು ಪಯಣವದು ಬಣ್ಣಿಸಲ್ಸಲ್ಲುಗುಮೇ ||೨||

ಮೊಳಗುತಿರೆ ವಿವಿಧವಾದ್ಯಂಗಳುಂ ಸದ್ವಂದಿ-
ಗಳು ಪೊಗಳುತಿರೆ ಪಥದೊಳಲ್ಲಲ್ಲಿ ಭಕ್ತಸಂ-
ಕುಳವೈದಿ ಪೂಜೋಪಚಾರದಿಂ ಗಣಸಮಾರಾಧನೆಯನೆಸಗುತಿರಲು
ಉಳಿದೆಡೆಗಳಲ್ಲಿ ವ್ಯಾಖ್ಯಾನಕೀರ್ತನಗಳುಂ
ಹಲವು ವಿಷಯಪ್ರವಚನಂಗಳುಂ ಜರಗುತಿರ
ಲೆಳಸಿ ದರ್ಶನಕಾಗಿ ಬಂದ ಭಕ್ತರಿಗೆ ಶುಭವಾದನಂಗೈವುತಿರಲು || ೩ ||

ಈ ಸುಕೃತವಿಷಯಪ್ರಸಾರ ಪ್ರಬೋಧೆ ಮೇ-
ಣೀ ಸುಶೋಭಿತಗುರುಚರೇಶ್ವರ ವಿಲಾಸವಿ-
ನ್ನೀ ಶಿವಾರ್ಚನವಿಭವವೀ ಸುಲಭಸರಳಪ್ರಯಾಣದುತ್ತಮರೀತಿಯು
ಈ ಸುಧಾರಣೆಯ ಸುಕ್ಷೇತ್ರಯಾತ್ರಾನಿಯಮ-
ವೀ ಶಾಂತಿಯೀ ಸನಾತನಧರ್ಮದಭ್ಯುದಯ
ವೀ ಸತ್ಸಹಾಯವಿನ್ನೆಲ್ಲಿಯುಂ ದೊರೆಯದಂತಿರ್ದತ್ತದೇವೇಳ್ವುದು || ೪ ||

ಮನಸಿನೊಳು ಹಿಗ್ಗುತೆಡೆಯೂರಿಗಂ ತಲುಪಿ ದ-
ರ್ಶನನಿಮಿತ್ತಂ ಮಠಕೆ ಪೋಗಿ ಶ್ರೀಸಿದ್ಧಲಿಂ-
ಗನ ಗರ್ದುಗೆಗೆ ಸರ್ವರುಂ ನಮಿಸಲೀ ಕುಮಾರೇಶನೆರಗದೆ ಸುಮ್ಮನೆ
ವಿನುತ ಕಿಂಕುರ್ವಾಣದೃಷ್ಟಿಯಿಂ ನೋಡುತಿರೆ
ಘನ ಜಗದ್ಗುರು ತೋಂಟದಾರ್ಯರಿದನರಿದು ನೆ-
ಟ್ಟನೆ ವಿಚಾರಿಸಿದರೇತಕೆ ನೀವು ವಂದಿಸದೆ ನೋಡುತ್ತ ನಿಂದಿರುವಿರಿ || ೫ ||

ಪರತರಜಗದ್ಗುರುವರೇಣ್ಯನೆನಿಸುವನಾದಿ
ಚರಸಾರ್ವಭೌಮ ನೀರಂಜನ ನಿರಾಭಾರಿ
ವರದ ತೋಂಟದ ಸಿದ್ಧಲಿಂಗೇಶ್ವರನ ಗದ್ದುಗೆಯಿದಲ್ಲವೇ ಮರೆದಿರಾ
ಚರವರರೆ ಬೇರಾವುದಾದಡೊಂದಿರ್ದಡಾ
ಪರಿಯನೆಮಗೊರೆವುದೆನಲದಕ್ಕೆ ಮಹಾಪ್ರಭುವೆ
ಮರೆದಿಲ್ಲವಾಗಳಂ ಗದ್ದುಗೆಗೆ ನಮಿಪರೂಢಿಯನಿಟ್ಟುಕೊಂಡಿಲ್ಲವು ॥ ೬ ॥

ಹುರಿದಬೀಜದೊಳಗಣ ತಿರುಳಿನಂದದೊಳಾಶ್ರಿ
ತರನೆಸಗಿ ನಿತ್ಯನಿರ್ಮಲಕೃತಾರ್ಥತೆಯಿಂದ
ಮೆರೆದಾ ಜಗದ್ಗುರು ಶ್ರೀಸಿದ್ಧಲಿಂಗನೆಮ್ಮೆಲ್ಲರಿಗೆ ಪೂಜ್ಯನಿಹನು
ಹರನೊಳಾ ಮಹಾತ್ಮನ ತಾಣಕೆಳಸಿ ಬಂ-
ದಿರುವೆವೀ ಗದ್ದುಗೆಯ ನೋಡಿ ಮನದಲ್ಲಿ ತುಂ-
ಬಿರುವದಾಜಂಗಮನ ಪ್ರಣವಸ್ವರೂಪದವಮಲಧ್ಯಾನಸಂಪದವದು ॥ ೭ ॥

ಆತನಂ ನೆನೆಯಲಕ್ಕುಂ ಭಜಿಸಲಕ್ಕುಮಿ
ನ್ನಾತನೀಂ ಗದ್ದುಗೆಯ ನೋಡಲಕ್ಕುಂ ನಾವು
ಪ್ರೀತಿಯಿಂ ಪ್ರತ್ಯಕ್ಷಜಂಗಮನ ಕಂಡು ಪೂಜಿಸಲಕ್ಕು ಮೆರಗಲಕ್ಕುಂ
ಆತನೀ ವೇದಿಕೆಗೆ ನಮಿಸಲೊಪ್ಪದು ನಮ್ಮ
ಪೂತ ಯತಿವರ್ಯರಾಚರಣೆ ಪರಕಿಸಲು ವಿ-
ಖ್ಯಾತಯತಿಗಳ ವೇದಿಕೆಯದೊಂದುರೀತಿಯಿಂ ಸ್ಥಾವರಮೆನಿಪ್ಪುದರಿಯೇ ॥ ೮ ॥

ಚರಚರಣತೀರ್ಥಮುಂ ಪಡೆವವಂ ತಾನೇಳ್ದು
ಪರಿತಂದು ಭಕ್ತಿಯಿಂದೆರಗಿ ಬಿನ್ನೈಸಿ ತ-
ತ್ಕರುಣಾಮಯಾಜ್ಞೆಯಿಂ ಸ್ವೀಕರಿಸಬೇಕಲ್ಲದನ್ಯಗದನೆತ್ತಿ ತಂದು
ಗುರುಚರರ ಗದ್ದುಗೆಗಳಿಗೆ ಸಮರ್ಪಿಸಲಾಗ
ದರಿಯಲಿದು ಪರತರಶಿವಾನುಭಾವಿಗಳ ಮತ
ವಿರುವದದರಿಂದ ಸೂಕ್ಷ್ಮಸ್ಥಾವರಂಗಳೆಂದಿವುಗಳಂ ತಿಳಿಯಲಹುದು ॥ ೯ ॥

ಶಿವಚಿತ್ಕ್ರಿಯಾರಹಿತಮಾದ ಗರ್ದ್ದುಗೆಗಳಿಗೆ
ಶಿವಚಿತ್ಕ್ರಿಯಾಚರಣೆಗೊಳಗಾದ ತನುವಿನಿಂ
ಶಿವಯೋಗಿಗಳದೆಂತು ನಮಿಸಬಹುದು ಶಿವೈಕ್ಯರಾದ ಗುರುಚರವರ್ಕ್ಯರಾ
ಅವಿಕಲಾಂಗಗಳು ವೊದಲೊಳಕೊಂಡ ಚಿತ್ಕ್ರಿಯೋ
ತ್ಸವಗಳಿಂ ಪರಿಶುದ್ಧವಾಗಿರ್ಪ್ಪ ವವುಗಳಂ
ತವೆ ತಳೆದ ಗರ್ದ್ದುಗೆಗಳಾಗಲ್ಪವಿತ್ರಮಿಹವಿದರೊಳನುಮಾನವಿಲ್ಲ ॥ ೧೦ ॥

ಆದುಷುಂ ನಿತ್ಯಮರ್ಚಕರಿಂದವುಗಳ ಪೂ-
ಜಾದಿ ಸತ್ಕಾರಮಂ ಮಾಡಿಸುತ್ತಿರಬೇಕು
ಮೋದದಿಂ ತಾವು ದರ್ಶನಗೊಳ್ಳುತಿರಬೇಕು ಬಂದು ಶಿವಯೋಗಿವರರು
ಸಾದರದೆ ನಿಯಮಿತದಿನಂಗಳೊಳಗುತ್ಸವಂ
ಗೈದು ಭಕ್ತರಿಗೆ ಧರ್ಮವನರುಹಬೇಕು ತ-
ದ್ವೇದಿಕೆಗಳೊಳು ಜನರ ಭಕ್ತಿವಿಶ್ವಾಸಗಳು ಬೆಳೆವಂತೆ ಮಾಡಬೇಕು ॥ ೧೧ ॥

ಎಲ್ಲ ಶಿವಯೋಗಿಗಳು ಭಕ್ತಿಯಿಂ ನಮಿಸುತಿರು-
ವಲ್ಲಿ ಸಾವೊಲ್ಲೆವೆಂಬುದಿದಾವ ಘನತೆ ತಾಂ
ಸಿಲ್ಲಿಸಿಹುದೆಮ್ಮನೆಮ್ಮಾಚರಣೆಗಳ ಕಟ್ಟು ಸುಮ್ಮನೇ ನಿಂತಿರುವೆವು
ಬಲ್ಲವರೊಡಂಬಡಿಸಿದೊಡೆ ತುಳಿಲ್ಗೈವೆವಿದ-
ರಲ್ಲಿ ಸಂದೇಹವೆಳ್ಳನಿತಿಲ್ಲವೆಂದೊರೆದು-
ಸಲ್ಲೀಲೆಯಿಂ ಕುಮಾರೇಶನವರೊಡನೆ ತಾನುಳಿದ ಬೀಡಿಗೆ ಬಂದನು ॥ ೧೨ ॥

ಅಂದಿರುಳೊಳೀ ಕುಮಾರೇಶ್ವರನ ಕನಸಿನೊಳು
ಸುಂದರ ಶ್ರೀಸಿದ್ಧಲಿಂಗನಾ ಗರ್ದುಗೆಯೊ-
ಳಂದದಿಂ ಲಿಂಗಪೂಜೆಯನೆಸಗುತಿರುವದಂ ಕಂಡು ಬೆರಗಾಗಿಯೇಳ್ದು
ಹಿಂದೆ ಮುಂದೀಕ್ಷಿಸುತ್ತಾಲೋಚನೆಯ ಮಾಡಿ
ಸಂದೆಗಂಗೊಂಡು ಮೇಣೊರಗಲೊಡನಲ್ಲಿ ಚರ-
ವೃಂದಕಾನಂದದಿಂ ತೀರ್ಥಪ್ರಸಾದಮಂ ಕೊಡುತಿರ್ಪುದಂ ಕಂಡನು ॥ ೧೩ ॥

ಭಸಿತತ್ರಿಪುಂಡ್ರದಿಂ ರುದ್ರಾಕ್ಷಮಾಲೆಯಿಂ
ದೆಸೆವ ಶುಭಕಾಯದಿಂ ಮಂತ್ರನುಯಶುದ್ಧ ಮಾ-
ನಸದಿಂದ ಲಿಂಗಾಂಗಸಮರಸ ಸುಭಾವದಿಂ ತೀರ್ಥಪ್ರಸಾದಗಳನು
ಒಸೆದೋರ್ವರೋರ್ವರುರೆ ಕೈಕೊಂಬುದಂ ನಿರೀ-
ಕ್ಷಿಸಿ ಸೋಗಲಿಲ್ಲವಿವುಗಳಿಗಾವು ತಪ್ಪಾದು-
ದಸಮಜಂಗಮುವಶ್ಯನವಕ್ಯಪೆಯಿದೆಂದು ತಿಳಿದಡಬಡಿಸುತೆಚ್ಚಿತ್ತನು ॥ ೧೪ ॥

ನೋಡಿದನದೆಲ್ಲಮುಂ ಬಟ್ಟಬೈಲಾಗಿರ್ದು-
ದಾಡಲೇನೀ ಸಿದ್ಧಲಿಂಗನ ವಿಲಾಸವೋ
ಕೂಡಿದವೆರಳ್ಬಾರೆ ಸ್ವಪ್ನವಿಷಯಂಗಳೊಂದಾಗಿ ಪೆರತಿಲ್ಲದಂತೆ
ನೋಡಬೇಕೇನಿಹುದಿದೆಂದು ಯೋಚನೆಯನುರೆ
ಮಾಡುತ್ತ ಕುಳ್ಳಿರಲು ಮೈಮರೆದು ಕಣ್ಮುಚ್ಚಿ
ನಾಡಿಕನವರಿಕೆಯಂತಾಗಲಾ ಶ್ರೀಕುಮಾರೇಶನಾ ಗರ್ದುಗೆಯೊಳು ॥ ೧೫ ॥

ನೆರೆದ ಬಹುಚರವರ್ಯರಿಗೆ ಸಿದ್ಧಲಿಂಗಯತಿ
ವರನತಿಕೃಪಾಪೂರ್ಣನೇತ್ರಂಗಳಿಂ ನೋಡಿ
ಪರಮಶಿವಯೋಗಾಮೃತಸ್ವಾದನಂ ಗೈಸುವದನು ಕಣ್ಣಾರೆ ಕಂಡು
ಹರುಷರಸಮುಣ್ಮಿ ಜಾಗ್ರದವಸ್ಥೆ ಕೈಗಣ್ಮಿ
ಹರಹರಾ ಪೂಜಾರ್ಪಣಾನುಭವಗಳನೆಮಗೆ
ನೆರೆತೋರಿ ಪೊರೆದಂ ಜಗದ್ಗುರುವರೇಣ್ಯನೇನೊಂದು ಸಂಶಯವಿಲ್ಲದೆ ॥ ೧೬ ॥

ಈತಂ ಮಹಾಲಿಂಗದಲ್ಲಿ ಬೆರೆದಿರ್ದ್ದೊಡೆಮ-
ಗೀ ತೆರದೊಳಿರಡುತಾಸಿನೊಳು ಮೂಬಾರೆ ಸಂ-
ಪ್ರೀತಿಯಿಂ ಪೂಜಾರ್ಪಣಾನುಭವಗಳನು ಕ್ರಮವಾಗಿ ತೋರುತ್ತಿರ್ದನೇ
ಕೌತುಕಮಿದೆನೆ ಶಿವಸಮಾಧಿಯಾನಂದದಿಂ-
ದೀ ತಾಣದೊಳು ವಿರಾಜಿಸುತಿರ್ಪುದಿದು ನಿಜಂ
ಸೋತುದೆಮ್ಮ ವಿಚಾರವೆಂತಿರ್ದಡುಂ ಚರಾಧಿಪರಿರವನಾರರಿವರು ॥ ೧೭ ॥

ನೋಡಿದೆವು ಸಿದ್ಧಲಿಂಗೇಶ ಸ್ವರೂಪಮಂ
ನೋಡಿದೆವು ತಲ್ಲಿಂಗಪೂಜಾಸುಸಂಪದವ
ನೋಡಿದೆವು ಚರಕುಲಕೆ ತೀರ್ಥಪ್ರಸಾದಮಂ ಕೊಡುವ ಸಂಭ್ರಮವ ಮತ್ತೆ
ನೋಡಿದೆವು ಶಿವಯೋಗಸುಧೆಯನಲ್ಲುಣಿಸನುರೆ
ನೀಡಿ ಪ್ರಮಥರ್ಕಳಂ ಸಂತೃಪ್ತಿಗೈದುದಂ
ನೋಡಿದೆವಭೂತಪೂರ್ವ ಯತೀಶ್ವರಪ್ರತತಿಯಾನಂದದುತ್ಸವವನು ॥ ೧೮ ॥

ಎರಗದಿರಬಾರದೆರಗಲೆಬೇಕು ತೋಂಟದಾ
ರ್ಯರಿಗೊರೆಯಬೇಕಿದಂ ತನ್ನಿರವನೀ ಚರೇ-
ಶ್ವರನರುಪಿದಂ ನಿದರ್ಶನವಾದುದೆಮಗೆ ಜಂಗಮನಸಮ ಮಹಿಮೆಯಿಲ್ಲಿ
ಗುರುಸಿದ್ಧಲಿಂಗನಿಹನಾತನಂ ಕಂಡೆವೀ
ಸುರುಚಿರಕ್ಷೇತ್ರದೊಳಗೆಂದೆಲ್ಲ ಕೂಡಿದ ಚರೋ-
ತ್ಕರದೊಡನೆ ಪೋಗಿ ಗರ್ದುಗೆಗೀ ಕುಮಾರೇಶ್ವರಂ ಪ್ರಣಾಮಂಗೈದನು ॥ ೧೯ ॥

ಉಗಿಬಂಡಿ ನಾವು ಹರುಗೋಲು ಮೊದಲಾದೆಲ್ಲ
ತೊಗಲೊಡವೆಯುಳ್ಳ ವಾಹನಗಳೊಳು ಭವಿಗಳಿಹ
ಬಗೆಬಗೆಯ ರಥಶಕಟಗಳೊಳೇರುತಿರಲಿಲ್ಲ ಚರ್ಮಾವರಣದ ವಹಿಯ
ಮಿಗೆ ಮುಟ್ಟುತಿರಲಿಲ್ಲ ಮೆಟ್ಟುತಿರಲಿಲ್ಲ ಕೃ-
ತ್ತಿಗಳ ಪಾದುಕೆಯನೀ ಶಿವಯೋಗಿಪುಂಗವಂ
ಪಗಲಿರುಳೊಳಿದರೆಚ್ಚರಿಂದಿರ್ದನಪ್ಪಮಂ ತಾನೇರಲಿಲ್ಲಾಗಳು ॥ ೨೦ ॥

ಎತ್ತುಬಂಡಿಗಳಿಗೊಂದಿನಿಸು ತೊಗಲೊಡೆವೆಯುಡು
ಹತ್ತದಲೆ ನಾರನೇಣಿಂ ಬಿಗಿದು ಲಿಂಗಿಯೇ
ಹತ್ತಿ ಪೊಡೆವಾ ಬಂಡಿಯೊಳು ಕೂತು ಪಯಣಮಂ ಮಾಡುತಿರ್ದಂ ಮುದದೊಳು
ಮತ್ತಮೇರಿರುವ ಬಂಡಿಯನಲಿಂಗಿಗಳಾರು
ಮೆತ್ತಲುಂ ಮುಟ್ಟಬಾರದೆನಿಪ್ಪ ನಿಯಮವಿ-
ರ್ದತ್ತೀ ಕುಮಾರೇಶ್ವರನ ವರ್ತನಂ ಕಾರ್ಯದಕ್ಷರಿಗೆ ಸಾಧ್ಯಸಹುದೇ ॥ ೨೧ ॥

ದೂರಪ್ರಯಾಣವಂ ಮಾಡುತಿರ್ದೊಡೆ ತಿಳಿದು
ದಾರಿಯೊಳಗುಳ್ಳೂರ ವೀರಶೈವರು ತಮ್ಮ
ಚಾರುಬಲವೃಷಭಂಗಳಂ ತಂದು ದಾರಿಯೊಳು ಮೇಲಾಡಿ ಹೂಡಿಕೊಂಡು
ತೂರುತುತ್ಸಾಹದಿಂ ಪೋಗುತಿರ್ದರ್ಮುಂದಿ
ನೂರವರಿದೇ ಮೇರೆಗೆತ್ತುಗಳ ತಂದಿವರ
ದಾರಿಯಂ ನೋಡುತ್ತನಿಂದಿರುತಿರ್ದರೀ ಸಂಭ್ರಮುವನೇವೇಳ್ವುದು ॥ ೨೨ ॥

ಹಾನಗಲ್ಲಕುಮಾರ ಶಿವಯೋಗಿಗಳು ಬರುವ-
ರೀ ನಿಮ್ಮ ಗ್ರಾಮದಿಂ ಮುಂದೆ ಪೋಪರು ನಿಲ್ಲ-
ದೀ ನಿಮಿಷದೊಳು ನೀವು ನಿಮ್ಮೆತ್ತುಗಳನೊಯ್ದು ದಾರಿಯೊಳು ನಿಲ್ಲಿರೆಂದು
ಆನಂದದಿಂ ಪಿಂದಿನೂರವಂ ಪೇಳ್ದೊಡೀ
ಸ್ಥಾನದವನಾಗಳೇ ಮುಂದಿನೂರ್ಗ್ಗರುಸುತಿಂ-
ತಾನುಬೊಲ್ಯಂ ತಾನೆ ಮುಂದೋಡುತಿರ್ದತ್ತು ಪರತರೋತ್ಸಾಹದಿಂದ ॥ ೨೩ ॥

ಬರುವರಂತಾ ಹಾನಗಲ್ಲಸ್ವಾಮಿಗಳೀಗ
ತೆರಳುತಿಹರಂತೆ ಮುಂದಕ್ಕಿಲ್ಲಿ ನಿಲ್ಲರಂ-
ತೆರಡು ಬಂಡಿಗಳಿರುವವಂತವರು ಮತವನುದ್ಧರಿಪ ಘನಮಹಿಮರಂತೆ
ಸರಳಮೆನೆ ಬಹುಶೀಘ್ರದಿಂದ ನಡೆವೆಮ್ಮ ಪೊಸ
ಹಿರಿಯ ಹೋರಿಗಳನೇ ಹೂಡಿ ಸೇವೆಯ ಮಾಡಿ
ಬರುವೆ ನಾನೆಂದೆತ್ತುಗಳನು ಪೈದೊಳೆವುತಿರ್ದರ್ಭಕ್ತಿಯಿಂ ಭಕ್ತರು ॥ ೨೪ ॥

ಕೆಲರು ತಮ್ಮೆತ್ತುಗಳಿಗೆಸೆವ ಬಣ್ಣದ ಜೂಲ
ಗಳನು ಕಿರಿಗಂಟೆ ಕೋಡಣಸು ಗೆಜ್ಜೆಗಳನು
ಜ್ವಲಿಪಕನ್ನಡಿಯ ಬಾಸಿಂಗ ಗಗ್ಗರಿಗಳನು ಹಾಕಿಕೊಂಡುತ್ಸವದೊಳು
ತಳುವದೀತಂ ಬರುವದಾರಿಗೈತರುತಿರ್ದ
ರೊಲವಿನಿಂ ನಾನು ನಾನೆಂದು ಮುಂಬರಿದೆತ್ತು-
ಗಳನು ಹೂಡುತಿರ್ದರೀ ಮಹಾತ್ಮನ ಬಂಡಿಗಳಿಗೆ ಬಹುಸಂಭ್ರಮದೊಳು ॥ ೨೫ ॥

ದಾರಿಯಂ ನೋಡುತ್ತ ನೆರೆದಿರ್ಪ ಜನರಿನಿಸು
ದೂರದೊಳು ಬರುವ ಬಂಡಿಯನು ಕಂಡೋ ನಿರಾ
ಭಾರಿದೇಶಿಕವರೇಣ್ಯರು ಬಂದರೆಂದೂರಿಗೈದಿ ಕರೆತಂದು ತಮ್ಮ
ಹೋರಿಗಳ ಹೂಡಿ ವಂದಿಸಿ ಕರುಣೆವಡೆದು ಮಿತಿ
ಮೀರಿದುತ್ಸಾಹದಿಂ ಪುಳಕಾಂಕುರಮದೇಳೆ
ವೀರಶಿವಧರ್ಮಸಿತ್ಪವಂ ಕಂಡು ಧನ್ಯರಾವಾದೆವೆಂದೆನುತಿರ್ದರು ॥ ೨೬ ॥

ಕೂಡುತಿರ್ಪರು ನಿಲ್ಲದೂರಪಿರಿಕಿರಿಯರುಂ
ನೋಡುತಿರ್ದರು ನಮಿಸಿ ಕರವ ಜೋಡಿಸಿ ನಿಂದು
ಪಾಡುತಿರ್ದರು ಜಯಧ್ವಾನಮಿಂಬಾಗೆ ತುಂಬಾ ಧನ್ಯರಾದೆವೆಂದು
ಬೇಡುತಿರ್ದರು ಸಕಲರೀ ಮಹಾತ್ಮನ ಕೃಪೆಯ
ನಾಡುತಿರ್ದರು ಪರಮಶಿವಧರ್ಮದೇಳ್ಗೆಯಂ
ಮಾಡಲೆಮ್ಮೀ ಪುತದ ಮೇಲೀತನಾಳಿಕೆ ನಿರಂತಮಿರ್ಕೆಂದು ನಲಿದು ॥ ೨೭ ॥

ಸೊನ್ನಲಿಗೆಯೊಳು ಪಿಂದೆ ಜರುಗಿರ್ದ ಮೂರನೆಯ
ಸನ್ನುತ ಶ್ರೀವೀರಶೈವಸುಮಹಾಸಭೆಗೆ
ಮುನ್ನವೇ ಪೋಗಲನುಕೂಲವಿಲ್ಲದೆ ಸ್ವಾಗತಾಧ್ಯಕ್ಷರಾಗ್ರಹಕ್ಕೆ
ಮನ್ನಣೆಯನಿತ್ತು ಮೂರೇ ದಿನದ ಮೊದಲು ಮಹಿ-
ಮೋನ್ನತ ಕುಮಾರೇಶನಾ ಹಾನಗಲ್ಲಿಂದ
ತನ್ನೊಡನೆ ಹಾವೇರಿ ಶಿವಬಸವ ಶಿವಯೋಗಿವರ್ಯನಂ ಕರೆದುಕೊಂಡು ॥ ೨೮ ॥

ಪೊರಮಟ್ಟಮಾರ್ಗ್ಗದೊಳಗಣ ಪುರಗ್ರಾಮಗಳ
ಪರಮಶಿವಭಕ್ತರಿಂತತ್ಯಂತ ಶೀಘ್ರಮೆನೆ
ಸರಳಸ್ವಭಾವದೆತ್ತಂ ಪೂಡಿ ಬಂಡಿಯಿಂ ಮೂರು ದಿನಗಳೊಳಿವರನು
ನೆರೆದಾ ಮಹಾಸಭೆಗೆ ಮುಟ್ಟಿಪಂತೆಸಗಿದರು
ಚರವರ್ಯರಿವರೀರ್ವರುಂ ಸುಮ್ಮನೇ ಪೋಗಿ
ಜರುಗಿರ್ದ ಸಭೆಯೊಳೊಂದೆಡೆಯೊಳುಳಿದಿರ್ದ್ದೊಂದು ಖುರ್ಚಿಯಂ ಕಂಡದರೊಳು ॥೨೯॥

ಶಿವಬಸವಯತಿಪನಂ ಕುಳ್ಳಿರಿಸಿ ಕೆಳಗಲ್ಲಿ
ತವಕಮುಂ ಮಿಗೆ ತನ್ನ ಹೆಗಲೊಳಿಹ ಕೈಪಾವು-
ಡವ ಹಾಸಿಕೊಂಡು ಕುಳಿತಂ ಕುಮಾರೇಶನದನರಟಾಳಸಾಹೇಬರು
ತವೆ ಕಂಡು ಸಭಿಕರುದ್ಘೋಷಿಸೆ ಮಹಾಸನದೊ-
ಳವರೀರ್ವರಂ ವಿಜೃಂಭಣೆಯಿಂದ ಕುಳ್ಳಿರಿಸಿ
ಶಿವಯೋಗಿಗಳ್ಬಂದರೀ ಸಭೆಗೆ ವಿಜಯಮುಂಟಾದುದಿನ್ನೆಂದು ನುತಿಸಿ ॥ ೩೦ ॥

ಮುಂದಿವರ ಸದನುಮತಿಗೊಂಡು ತತ್ಕಾರ್ಯಮಂ
ಮುಂದುವರಿಸಿದರು ಮತವಿಷಯದಾಲೋಚನೆಯ
ನಂದಮೆನೆ ಮಾಡಿ ಪಂಡಿತರ ವ್ಯಾಖ್ಯಾನಪೂರ್ವಕವಾಗಿ ನಿರ್ಣಯಿಸುತೆ
ಕುಂದು ಕೊರತೆಗಳಿಗೆಡೆಯಾಗದಂತಾ ಸಭೆಯ-
ಮಂದಪ್ರಯೋಜನಂ ಸಭೆಗೊಡೆದು ಕಾಣ್ಬಂತೆ
ಸುಂದರಕುಮಾರೇಶನದನಾಗಲೆಸಗಿದಂ ಜಸಮೆಸೆಯಲೇಣ್ಡೆಸೆಯೊಳು ॥ ೩೧ ॥

ಈ ತೆರದೊಳಾಚರಿಸುತಿಹ ಕುಮಾರೇಶ್ವರನಿ-
ಗೈತಂದುದಾಕಸ್ಮಿಕಂ ತಂತಿಯೊಂದು ವಿ-
ಖ್ಯಾತ ಬಾಗಲಕೋಟೆಯಿಂದ ಕರಿಮರಿಮಠದ ಶಾಂತವೀರಸ್ವಾಮಿಯು
ಭೂತನಾಥನೊಳೈಕ್ಯನಾಗುತಿಹ ಸಮಯಮಿಂ-
ದಾತುನಿಂದಿಹುದು ನಿಮ್ಮಯ ಚರಣದರ್ಶನವ
ನಾತನಿಚ್ಛಿಪನು ನೀವಿಲ್ಲಿಗೀಗಳೆ ಬರಲುಬೇಕೆಂದು ಶೀಘ್ರದಿಂದ ॥ ೩೨ ॥

ಶಿವಯೋಗಮಂದಿರಕೆ ಮನಮುಟ್ಟಿ ದುಡಿದಿರುವ
ಶಿವಯೋಗಿ ಶಿವನೊಡನೆ ಬೆರೆವೆಡೆಯೊಳೆನ್ನನೆಳ-
ಸುವನಿದಂ ತಪ್ಪಿಸುವಡನುಚಿತಂ ಪೋಗಲೇ ಬೇಕಲ್ಲಿಗಿಂದಾದೊಡೆ
ಶಿವಶಿವಾ ನಾನಲ್ಲಿಗೀಗಾಲೇ ಪೋಗಿ ಮು-
ಟ್ಟುವ ರೀತಿಯೆಂತು ಬಂಡಿಯಮೇಲೆ ಕಠಿಣವ್ರ
ತವನು ಪಿಡಿದಿರ್ಪೆನುಗಿಬಂಡಿಯೊಳು ಕುಳ್ಳಿರಲು ಬಾರದೆಂದೆಂದಿನನಕಾ ॥ ೩೩ ॥

ಹಿಡಿದವ್ರತಮಂ ಬಿಟ್ಟ ಕಲ್ಮಷಕ್ಕಿಂದ ಗುರು-
ಚರವರರಪೇಕ್ಷೆಗನುಕೂಲಿಸಿದ ಪಾತಕಂ
ಹಿರಿದೆಂದು ಪೇಣಾಡುಗದಂತೆ ಕೊನೆಮುಟ್ಟಿಸಿದ ವ್ರತದ ಸತ್ಫಲಕ್ಕಿಂತಲು
ಗುರುಚರಮನೋರಥಗಳಂ ತೃಪ್ತಿಗೈದ ಶುಭ-
ಕರ ಪುಣ್ಯಫಲಮದತ್ಯಧಿಕವೆಂದೋದುತಿಹ
ಶರಣವಚನಗಳಂತೆ ಸತ್ಕ್ರಿಯೆಗಳೊಳು ಬಲಾಬಲಗಳಂ ನೋಳ್ಪುದೊಳಿತು ‖ ೩೪ ‖

ಇಂತಂತರಂಗದೊಳು ನೆನೆದು ತತ್ಕ್ಷಣದೊಳ-
ತ್ಯಂತಾತುರಂಗೊಂಡು ಹಾವೇರಿಯಿಂದವಿ-
ಶ್ರಾಂತಮೆನಲುಗಿಯುಬಂಡಿಯನೇರಿ ಬಿಡದೆ ಬಾಗಲಕೋಟೆಗೈತಂದನು
ಶಾಂತವೀರಸ್ವಾಮಿಯಂ ಕಂಡು ನುಡಿಸಿ ತ-
ತ್ಸ್ವಾಂತದಭಿಮತವನರಿದೆಚ್ಚರಿಸುತುಪಚರಿಸ-
ಲಂತಕಾರಿಯೊಳಡಗಿದಂ ಮೂರುಗಳಿಗೆಯೊಳು ಶಿವಮಹಾದೇವ ಎಂದು ‖ ೩೫ ‖

ಆತನಂತಿಮಸಂಸ್ಕೃತಿಯ ಮುಗಿಸಿ ತನ್ಮಠದ
ರೀತಿಗೆಡದಂದದೊಳು ಸುವ್ಯವಸ್ಥೆಯ ಮಾಡಿ
ಪ್ರೀತಿಯಿರ್ಕೆ ಮಠವ ಮೇಲೆಂದು ಪುರವೆಲ್ಲ ಭಕ್ತರಿಗೆ ಪೇಳ್ದು ಮರುಳಿ
ಸಾತಿಶಯಮೆನೆ ಕುಮಾರೇಶನಲ್ಲಿಂದ ಪರಿ-
ಪೂತ ಶಿವಯೋಗಮಂದಿರಕೆ ಬಂದಿರೆ ಮುಂದೆ
ಖ್ಯಾತಿಯಂ ಪಡೆದು ಸೊನ್ನಲಿಗೆಯೊಳ್ಮೆರೆದಿರ್ದ ವೀರೇಶಶಿವಶರಣನು ‖ ೩೬ ‖

ಲಿಂಗೈಕ್ಯರಪ್ಪುದಂ ತಂತಿಯಿಂದರಿದೊಡನೆ
ಜಂಗಮಾಗ್ರಣಿ ಕುಮಾರಂ ನಿಖಿಲಸಾಧಕ ಜ-
ನಂಗಳಿಂದೊಡಗೂಡಿ ಶಿವಯೋಗನಿಲಯದಿಂದುಗಿಬಂಡಿಯಲ್ಲಿ ಕುಳಿತು
ಹಿಂಗದಾ ಸೊನ್ನಲಾಪುರಕೆ ತೆರಳ್ದಾ ಶರಣ
ಪುಂಗವನಪೇಕ್ಷೆಯಂತಂತ್ಯಕ್ರಿಯೆಯನಿತ್ತು
ಲಿಂಗಾಂಗಸಾಮರಸ್ಯಪ್ರವಚನಮನೊರೆದನಪನೊಪ್ಪುವಂತಂತ್ಯದೆ ‖ ೩೭ ‖

ದೊರೆದುದೀ ಜಂಗಮದ ಪದಜಲಜದರ್ಶನಂ
ದೊರೆದುದೀ ಯತಿವರನ ಚರಣತೀರ್ಥಂ ಮತ್ತೆ
ದೊರೆದುದೀ ನೀರಂಜನಪ್ರಭುಶ್ರೊತ್ತಮನನುಭವಾನಂದ ಪರಬೋಧೆಯು
ತೆರೆದುದೀ ಮಾಯಾಕವಾಟಮದು ಪ್ರಣವದುರು
ತರಭಾವಮರುಣಕೋಟಿಪ್ರಕಾಶಂದಾಳ್ದು
ಬೆರೆದಂ ಪರಂಜ್ಯೋತಿರಾಕಾರ ಲಿಂಗದೊಳು ಶ್ರೀಮಹಾಶಿವಶರಣನು || ೩೮ ||

ಆತನ ಸಮಾಧಿಯನು ಸಿದ್ಧರಾಮೇಶನ ಸು-
ಸ್ಥಿತ ದೇವಾಲಯದೊಳಾಗಮವಿಧಾನದಿಂ
ದೋತುಮಾಡಿಸಿ ತತ್ತನೂಜೆಗಾಶೀರ್ವದಿಸಿ ಬಂದನೀ ಮಂದಿರಕ್ಕೆ
ಸೋತು ನಿಜಪದಪೂಜೆಗೊಳ್ಳದತಿಮಹಿಮನಾ
ದೀತನಾ ಶರಣಂಗೆ ತೀರ್ಥಮಂ ಕೊಟ್ಟುದುದು
ಕೌತುಕಮಿದೆಂದರೆಲ್ಲರ್ಶರಣರಭಿಮತಾವನಕುಂಟೆ ನಿರ್ಬಂಧವು || ೩೯ ||

ಸಿರಿಯಾಳಕೊಪ್ಪದೊಳಗೊಮ್ಮೆ ಶಿವಯೋಗಸಂ-
ದಿರಕೆ ವಟುಗಳನು ಕೊಡಿಮೆಂದು ಕೆಲರಂ ವಿರಾ-
ಟ್ಪುರದ ಯತಿ ಕೇಳೆ ಬಸವಣ್ಣಾತನೆಂಬಾತನೇಳ್ದು ಶಿವಯೋಗಿವರ್ಯ
ಕರುಣಿಸೆನಗಿಂದಿಗುಂ ಮಕ್ಕಳಿಲ್ಲಾದೊಡಾ
ತರುಳನಂ ನಿನ್ನಂಘ್ರಿಗರ್ಪಿಸುವೆನಾನೆನು
ತ್ತಿರಗಿದಂ ಮುಂದದೇ ವರ್ಷದೊಳು ಪುಟ್ಟಿದಂ ಬಲುಚಲ್ವ ಸುಕುಮಾರನು || ೪೦ ||

ಆತಂಗೆ ಶಿವಯೋಗಿಯೆಂದು ಹೆಸರಿಟ್ಟು ಸಂ-
ಪ್ರೀತಿಯಿಂದೈದುವರ್ಷಂ ಬರಂ ಪೊರೆದು ಬಳಿ-
ಕೀ ತಪೋನಿಷ್ಠನಿಹುದಂ ತಿಳಿದು ಶಿವಯೋಗಮಂದಿರಕೆ ಬಂದು ತನ್ನ
ಮಾತಿನಂತಣುಗನಂ ಕೊಡಲು ಸ್ವೀಕರಿಸಿ ಕರು-
ಣಾತಿಶಯದಿಂ ಸಲಹಿ ಬಿಜ್ಜೆವೇಳಿಸಲು ವಿ-
ಖ್ಯಾತಪಂಡಿತನಾಗಿ ಮೆರೆವಂ ಕುಮಾರೇಶನಿಂದ ಶಿವಯೋಗಾರ್ಯನು || ೪೧ ||

ಅಂತು ಸಂಧಿ ೧೩ ಕ್ಕೆ ಪದಗಳು ೬೩೧ ಜಯಂ

* ॥ ಶ್ರೀ ವಿಶ್ವಾರಾಧ್ಯಾಯ ನಮಃ ॥ *



# ಹದಿನೇಳನೆಯ ಸಂಧಿ ಪ್ರಾರಂಭ



ಸೂಚನೆ:---

ಪರಳಿಯ ಪ್ರಕರ್ಣಮಂ ಗೆಲ್ದು ಬರಿಕೈನೂಲಿ

ನರಿವೆಯಿಂ ಗುರುಮಹಾಂತೇಶನನಲಂಕರಿಸಿ

ಮೆರಿಸಿದಂ ಮತಭಾರತೋದ್ಧಾರಬುದ್ಧಿಯಿಂದೀ ಸದಾಶಿವಯತಿಪನು ॥

ನರೆಯೊಡೆದು ಮುಪ್ಪಾಗಿ ಬೆಂಬಾಗಿ ತಲೆನಡುಗಿ

ಸೊರಗಿ ಕೊರಗುವೆನಾದಡುಂ ಮನದ ವಿಷಯೇಚ್ಛೆ

ಸರಿಯದಿಹುದೀಶ್ವರನೆ ನಿನ್ನಡಿಯ ಜ್ಞಾನಮೆನ್ನೀ ಮನಸಿಗೊಪ್ಪದಿಹುದು

ನರನಾಗಿ ಪಶುವಾಗಿ ಮೃಗವಾಗಿ ಖಗವಾಗಿ

ಬರುವವದಕ್ಕಿಂದ ಶಿವಶರಣರಂಗಳಡಲ್ಲಿ

ತರುವಾಗಿ ಜನಿಸಿರ್ದೊಡೀ ಮನದ ಕಾಟಕೀಡಾಗುತಿರಲಿಲ್ಲ ಸಲಹು ॥ ೧ ॥

ಮೆರೆವ ಹನ್ನೆರಡು ಜ್ಯೋತಿರ್ಲ್ಲಿಂಗಗಳೊಳೊಂದು
ಪರಳಿಯೆಂಬೂರಲ್ಲಿ ವೈಜನಾಥನೆನಿಪ್ಪ
ಹರಲಿಂಗಮುಂಟದರ ಪೂಜಕರು ಮೊದಲಿಂದ ವೀರಶೈವರ್ಕಳಿರ್ದು
ಇರೆಯಿರುತ ಹಾರುವರು ನಡುವೆ ಬಂದವರೊಡನೆ
ಜೆರೆದೊಂದು ಪೂಜೆಯಂ ತಾವೆಸಗುತೀಜೆಗಿದ-
ರಿಂಬಾರದೀ ಪೂಜೆಯೆಮ್ಮದೆಂದೆಂದಿಗುಂ ನಾವೆ ಪೂಜಕರಿರ್ಪ್ಪೆವು ॥ ೩ ॥

ಹಾರುವರು ನಾವು ಬ್ರಾಹ್ಮಣರೆನಿಸಿಕೊಂಡೆವು
ವೀರಶೈವರು ಶೂದ್ರರಿಹದು ಷಟ್ಕರ್ಮಾಧಿ-
ಕಾರಿಗಳು ನಾವು ವೇದಾಧ್ಯಯನ ದೇವತಾರ್ಚನೆಗಳಂ ಮಾಡುವವರೇ
ಧಾರಿಣಿಯೊಳಾಗಳುಂ ನಾವಲ್ಲದೆಲ್ಲಿಯುಂ
ಜೇರಿಲ್ಲ ಗರ್ಭಮಂದಿರದಲ್ಲಿ ಲಿಂಗಿಗಳು
ಸೇರಿದೊಡೆ ದೇಗುಲಮುದಪವಿತ್ರಮಾಗುತಿರಲವರು ಪೂಜಿಸುವನೆಂತು ॥ ೩ ॥

ಬಿಡಿಸಬೇಕಾ ಲಿಂಗಿಗಳು ಮಾಳ್ಪ ಪೂಜೆಯಂ
ನಡಿಸಬೇಕಾವೆಲ್ಲರೊಂದಾಗಿ ಮೂರ್ಖರೆ-
ನ್ನೊಡನೆ ಸರಿಗಟ್ಟಲವರಸಮರ್ಥರೆಂದುಬ್ಬಿ ಕೊಬ್ಬಿ ತಾನ್ನೈಗಾಯದೆ
ನಡೆತಂದು ಹೈದರಾಬಾದ ಸರಕಾರದೊಳು
ಕಡು ವಿವಾದವ ತಂದರಿದರ ನಿರ್ಣಯಕಾಗಿ
ಬಿಡದೊಂದು ನ್ಯಾಯಸಭೆಯಂ ಗೊತ್ತುಮಾಡಿದರು ನೈಜಾಮುಬಾದಶಹರು ॥ ೪ ॥

ಕರಿಸಿದರು ಹಾರುವರು ಪುಣ್ಯಾಖ್ಯನಗರದಿಂ
ಸಿರಿಯ ಪಂಡಿತರನೆಲ್ಲೆಡೆಯ ಬಹುಕುಶಲರಂ
ಬರಿಸಿದರು ವಿಖ್ಯಾತರಾಜಶಾಸನದಗ್ಧರನೆಲ್ಲ ಕೂಡಿಸಿದರು
ನೆರಸಿದರು ಬ್ರಾಹ್ಮಣ್ಯದಭಿಮಾನಿಗಳನಲ್ಲಿ
ಪರಿಪರಿಯ ಬ್ರಾಹ್ಮಣಗ್ರಂಥಪ್ರಮಾಣಮಂ
ಸುರಿಸಿಪರು ವೀರಶೈವರ ಸಮಯಮಂ ನಿರಾಕರಿಸಲಾತುರಗೊಂಡರು ॥ ೫ ॥

ಆವರಿಗೆದುರಾಗಿ ಪರಳಿಯ ಲಿಂಗವಂತರೀ
ಶಿವಭಕ್ತನಾದ ಬಾಪೂರಾಯನೆಂಬೋರ್ವ
ಸುವಿಚಾರ ಶಾಸನವಿದಗ್ಧನೆಡೆಗೈತಂದಾ ಹೈದರಾಬಾದಕೆ
ತವೆ ತಿಳಿಸಿ ತತ್ಸಹಾಯಂಗೊಂಡರಾತನೀ
ಸುವಿರಾಟ್ಪುರೀ ಕುಮಾರೇಶಂಗೆ ಬರೆದರುಪ-
ಲವಿಕಲಮತಾಭಿಮಾನವೆ ಮೂರ್ತಿಗೊಂಡೀತನಾಕ್ಷಣವಲ್ಲಿ ಸಿದ್ಧನಾಗಿ ॥ ೬ ॥

ಪೊರಮಟ್ಟು ಹೈದರಾಬಾದಕ್ಕೆ ಹೋಗಿಯಾ
ಸಿರಿಯ ಬಾಪೂರಾಯನಿಂದೆಲ್ಲಮಂ ತಿಳಿದು
ಬರೆಬರೆದು ಬಹುಕಡೆಯೊಳಿರುವ ಮತಶಾಸ್ತ್ರಪಂಡಿತರನೈವತ್ತು ಜನರ
ಬರಿಸಿಕೊಂಡಂ ಕೂಡಿ ವಿಷಯದಾಲೋಚನೆಯ
ಪರಿಶೋಧನಮಂ ಮಾಡಿ ಧರ್ಮಪ್ರಮಾಣಕನು-
ಸರಿಸಿ ಬುಧರೊಡನೆ ನಿರ್ಧರಿಸಿ ಪರವಾದಿಗಳ ಪ್ರಶ್ನೋತ್ತರಗಳ ಮುರಿಸಿ ॥ ೭ ॥

ನ್ಯಾಯಸಭೆಯೊಳ್ಮಹಾಶಾಸ್ತ್ರಯುಕ್ತಿಗಳಿಂದ
ನ್ಯಾಯಾಧಿಪರಿಗೊಡಂಬಡಿಕೆಯಪ್ಪಂತೆ ತ-
ನ್ನ್ಯಾಯಶಾಸನನಿಪುಣರಿಂದ ಬುಧರಿಂ ಪೇಳಿಸಿದನರ್ಥಮಾಸದನಕ
ನ್ಯಾಯಾದಿಸಕಲಶಾಸ್ತ್ರಜ್ಞರಾದೆಮ್ಮ ಲಿಂ-
ಗಾಯತವಿದಗ್ಧರೀವಖಿಲಪ್ರಮಾಣ ಸಮು-
ದಾಯಕೆದೆಗೆಟ್ಟೋಡಿದಂ ನಡುವೆ ಪುಣ್ಯಾಖ್ಯಪುರದ ನಿಪುಣಂ ನಿಲ್ಲದೆ ॥ ೮ ॥

ವೀರಶೈವರು ಶೂದ್ರರಲ್ಲ ವಿವರಿಸಿ ನೋಡೆ
ವೀರಶೈವರ್ಸಕಳಪ್ರಾಕೃತ ಬ್ರಾಹ್ಮಣರು
ವೀರಶೈವರಿಗುಂಟು ವೇದಾಧ್ಯಯನದೇವತಾರ್ಚನೆಗಳಧಿಕಾರವು
ವೀರಶೈವರೆ ವೈಜನಾಥಪೂಜಕರಹುದು
ವೀರಶೈವರೆ ಮಾಳ್ಪುದಾ ದೇವರಾರ್ಚನೆಯ
ಹಾರುವರಿಗದರ ಬಾಧ್ಯತೆಯಿಲ್ಲವೆಂದೆಲ್ಲ ನ್ಯಾಯಾಧಿಪತಿಗಳರಿದು ॥ ೯ ॥

ಹೇಳಿದಡು ನಿರ್ಣಯವ ನ್ಯಾಯಾಸನವೊಳದನು
ಕೇಳಿದರು ಸರ್ವರುಂ ಪರಮಸಂತುಷ್ಟಿಯಿಂ
ತಾಳಿದರು ನೈಜಾಮುಬಾದಶಹರಂ ಪೊಗಳ್ದರೀ ವೀರಶೈವರೆಲ್ಲ
ಹಾಳಾಗಿ ಬೀಳಾಗಿ ಗೀಳಾಗಿ ಹಾರುವರು
ಮೇಲಕ್ಕೆ ಮೋರೆಯೆತ್ತದೆ ಸುಮ್ಮನಾದರೀ-
ಶೀಲರಿಗೆ ಕೀಳಲಿಂಬರಿಗಾಗದೇ ಮಾನಧನಹಾನಿಗಳ್ಜಗದೊಳು ॥ ೧೦ ॥

ನೂರಾರು ಮಂದಿ ನಿಪುಣಾಧ್ಯವಶ್ಯಜನೋಪ-
ಚಾರಮಂ ಮೇಣವರು ಬರುಹೋಗುತಿರುವಾ
ದಾರಿವೆಚ್ಚವನೆಲ್ಲ ಪೂರಯಿಸಿ ಕೊಡಲಿರುವ ಹಣಕೆ ಬಿಕ್ಷೆಯನು ಮಾಡಿ
ತೀರಿಸಿದನೀ ಕುಮಾರೇಶನಿಂ ಮತಕೊಂದು
ಸಾರಕಳೆಯೇರಿದುದೆನುತ್ತೆಲ್ಲ ಪ್ರಮುಖರುರೆ
ಸಾರಲಾದರ್ಮಹಾಸಂಭ್ರಮದೊಳೆಲ್ಲೆಡೆಗಳಲ್ಲಿ ಪೊಂಪುಳಿವೋಗಲು ॥ ೧೧ ॥

ಇಲಕಲ್ಲೊಳಾ ಚಿತ್ರಿಗಿಯ ತಪೋನಿಷ್ಠನು-
ಜ್ವಲಮೂರ್ತಿಯಾದ ವಿಜಯಮಹಾಂತಶಿವಯೋಗಿ
ಯಿಳೆಯನುಳಿದಭವನೋಳ್ಬೆರೆದ ಬಳಿಕಂ ಗುರುಮಹಾಂತೇಶಗಧಿಕಾರವ
ಒಲಿದೆಸಗಬೇಕೆಂದು ಮಠಗಳನಲಂಕರಿಸಿ
ಚೆಲುವ ಮಂಟಪಗಳಂ ರಚಿಸಿ ಪಾಕಾದಿಗಳ
ಹಲವು ಸಾಮಗ್ರಿಯಂ ಸಂಗ್ರಹಿಸಿ ಪೊಳಲಿಗರು ಸಕಲವಾದ್ಯಗಳ ನೆರಸಿ ॥ ೧೨ ॥

ಬರಿಸಿದರ್ಗುರುಚರವರೇಣ್ಯರಂ ನಿಪುಣರಂ
ದೊರೆಗಳಂ ಪಿರಿಯರಂ ಪದವೀಧರರ್ಕಳಂ
ಸರಸ ಗಾಯನಕಲಾಭಿಜ್ಞರಂ ತಜ್ಞರಂ ಕವಿಗಳನು ವೈದಿಕರನು
ವರಪುರಾಣಿಕರನೀಶ್ವರಕಥಾಕಾರರಂ
ಹರಭಜನಸಮ್ಮೇಳನಂಗಳಂ ಮಾಹೇಶ
ಪರಿಕರವನಖಿಲಭಕ್ತರನಾಪ್ತರಂ ನಂಟರಂ ಬಂಧುಬಳಗಗಳನು ॥ ೧೩ ॥

ಪಡಗನರವೊಳುರುವಿರಕ್ತಾಶ್ರಮದ ಕಾರ್ಯಮದು
ನಡೆದುದತಿಮಧುರಾದಿ ಷಡ್ರುಚಿಯ ಭೋಜನಂ
ಕಡುತೃಪ್ತಿಕರಮಾಗಿ ಸಾಗುತಿರ್ದತ್ತಾವುದುಂ ಕೊರತೆಯಿಲ್ಲದಂತೆ
ವೃಡಭಜನೆ ಕೀರ್ತನ ಪುರಾಣ ಪ್ರವಚನಂಗ-
ಳೆಡೆವಿಡದೆ ಸೊಗಸುವಿಂಗೆ ಜರುಗಿರ್ದವವು ಪೆಂಪು
ವಡೆದಾಗುತಿರ್ದುವೀ ಶ್ರೀಕುಮಾರೇಶನನುಮತಿಯಿಂದ ಕಾರ್ಯವೆಲ್ಲ ॥ ೧೪ ॥

ಹುಸಗುಂದದೋರ್ವ ಶಿವಭಕ್ತನಕಲಂಕ ವ-
ರ್ತನಶೀಲನುತ್ತಮುಂ ಬಸವಶೆಟ್ಟಿಯೆನಿಪ್ಪ
ಜನತಾಸುಸೇವಕಂ ಪರಮಾನುರಾಗದಿಂದೀ ಮಹೋತ್ಸವಕೆ ಬಂದು
ಘನವಿರಾಟ್ಪುರದ ಚರದೇವನಂ ಕಂಡೆರಗಿ
ಸನುಮತದೊಳೈ ಮಹಾಪ್ರಭುವೆ ಕೈನೂಲಿನಿಂ
ವನನೊಪ್ಪಿ ಕೈಮಗ್ಗದೊಳು ನೆಯ್ದು ಕಪನಿ ಮುಂಡಾಸಗಳನೆಸಗಿ ನಾನು ॥ ೧೫ ॥

ಮೆರವಣಿಗೆಯೊಳು ಗುರುಮಹಾಂತೇಶ್ವರಂಗಿವಂ
ಧರಿಸಬೇಕೆಂದು ಕಾವಿಯನದ್ದಿ ತಂದಿಹೆನು
ಸರಿಗಂಡೊಡೀವೆನೆಂದೇಳ್ದು ಬಿನ್ನೈಸಲೊಡನಹ ಭಾಪು ಲೇಸಾದುದು
ಪಿರಿಯ ಕೆಲಸಂಗೈದೆ ಪರಿಶುದ್ಧನೈ ಪಕ್ಷ್ಯ
ವಿರುವದಿದನರಿಯದಿರ್ದೆವು ಮುಂದೆ ಸರ್ವಜನು-
ಕರಿಪಬಗೆಯಂ ತೋರಿದೈ ಸೆಟ್ಟಿ ಬಹುಸಮಾಧಾನವಾಯ್ತೆಮ್ಮ ಮನಕೆ ॥ ೧೬ ॥

ತಂದುಕೊಡು ನೀನವುಗಳಂ ಮಹಾಸ್ವಾಮಿಗಳಿ-
ಗಿಂದಲಂಕರಿಸಿ ಪಲ್ಲಕ್ಕಿಯೊಳು ಕುಳ್ಳಿರಿಸಿ
ಚೆಂದಮೆನೆ ಮೆರವಣಿಗೆಯಂ ಮಾಡಿಸುವೆನೆಂದು ಪೇಳಲಾಕ್ಷಣದೊಳವನು
ಮುಂದಿಟ್ಟು ಸಾಷ್ಟಾಂಗವೆರಗಲೀಕ್ಷಿಸಿ ಮಹಾ-
ನಂದದಿಂದವುಗಳಂ ಕಾರಭಾರಿಯ ಕೈಯೊ-
ಳಂದವುಗಳುಪಯೋಗಮಂ ಪೇಳ್ದು ಕೊಟ್ಟನೀ ಹಾನಗಲ್ಲಕುಮಾರನು ॥ ೧೭ ॥

ಖಾದಿಯೇ ಚಂದ ಖಾದಿಯೆ ಧರಿಸಲಾನಂದ
ಖಾದಿಯಂತಹ ಶುದ್ಧವಸ್ತುವಿನ್ನೊಂದಿಲ್ಲ
ಖಾದಿಯೇ ರಾಷ್ಟ್ರಕಲ್ಯಾಣಮಾರ್ಗದ ಗುರುತು ಜೀವನೋಪಾಯಗಳೊಳು
ಖಾದಿಯೇ ಮೇಲಾದ ಸಾಧನಂ ಭಾಗ್ಯಮೀ
ಖಾದಿಯೊಳು ಕೈಯೂರಿ ನಿಂದಿಹುದು ಪೆಸರಾದ
ಖಾದಿಯುದ್ಯೋಗವೇ ಮೊದಲಿನಿಂ ಬಂದೆಮ್ಮ ಪರಿಶುದ್ಧಕಾಯಕವಿದು ॥ ೧೮ ॥

ಚೆಂದಕ್ಕೆ ಮನವೆಳಸಿ ಯಂತ್ರರಾಕ್ಷಸರಿಂದ
ಬಂದರಿವೆಗಳಸುಟ್ಟು ತೊಟ್ಟು ಖಾದಿಯ ನಾವು
ಹಿಂದುಳಿಸಿ ಸಂಪದವ ಕಳಕೊಂಡು ನೆರಮನೆಯ ಬಾಗಿಲಿಗೆ ಹೋಗಿ ನಿಂದು
ಬೆಂದು ಬಾಯಾರಿ ಹಲುಬುವ ಹಣೆಯುಬರಹವೆಸು-
ಗಿಂದೊದಗಿದುದು ಮಾಳ್ಪುದೇನು ತಪ್ಪಾಗಿಹುದು
ಮುಂದಾದಡುಂ ಖಾದಿಯಭಿಮಾನಮುದಿಸಿದೊಡೆ ಸುಖವಾಗುತಿರ್ಪುದಕಟ ॥ ೧೯ ॥

ಹೇಳಿದರು ಕೇಳಿದರು ದೇಶಹಿತಚಿಂತಕರು
ನೂಲುದೆಗೆದರು ಪಿರಿಕಿರಾಟಿಯಿಂ ಮಗ್ಗದೊಳು
ಮೇಲೆನಿಸಿ ನೆಯ್ದು ತೋರಿದರೆಮಗೆ ನೂಲ್ಪನೇಯ್ವರಿಗರಳೆ ರಾಟೆಗಳನು
ನೂಲುಮಗ್ಗಗಳನುಕೂಲಿಸಿದರಾದೊಡಂ
ಕೀಳು ಕೆಲಸವಿದೆಂದುದಾಸೀನಮಂ ಮಾಡಿ
ಹಾಳಾಗಿ ಹೋದುದೆಮ್ಮೀ ದೇಶವನ್ನಭಾಗ್ಯಾಭಾವವಾಗಿ ತಿಳಿಯೆ ॥ ೨೦ ॥

ಚೆಲುವೆಂದು ಸುಲಭವೆಂದಾ ಯಂತ್ರರಾಕ್ಷಸರ
ಹಲವು ವಸ್ತ್ರಗಳನರಿದವರರಿಯದವರೆಲ್ಲ
ಬಳಸುವರು ಜಾಂಗಿಲನ ಮಾಯಾಬಜಾರದಂತಿಹುದೀಗಿನುದ್ಯೋಗವು
ಚೆಲುವಿನೊಳಗಾದುದೀ ಕಾಲವೆಮ್ಮಯ ಬಂಧ-
ಗಳ ಕಷ್ಟವನು ನೋಡದೀ ಕಾಲವೆಲ್ಲರುಂ
ಚೆಲುವಿಗಾಡಿ ದಯಾಪರಸ್ಪರ ಪ್ರೀತಿನೀತಿಗಳಿಗೊಪ್ಪದ ಕಾಲವು ॥ ೨೧ ॥

ಒಳಗೆನಿತು ಹುಳುಕುಳ್ಳೊಡದನು ನೋಡದೆ ಹೊರಗೆ
ಚೆಲುವಿಕೆಯ ನೋಡುವರು ಚೆಲುವಿಕೆಯೊಳಾಡುವರು
ಚೆಲುವಿಕೆಗೆ ಮರುಳಾಗಿ ಗತಿಗೆಟ್ಟು ಹೋಗುವರು ಚೆಲುವಿಕೆಯ ಬೇಡಿ ಕಡೆಗೆ
ಕಳೆದುಕೊಂಬರು ತಮ್ಮ ಮಾನಮಂ ಜನರುಳಿದ
ಹಳೆಯ ಹರುಕರಿವೆಗಳು ಸಿಗವೆ ಲಂಗೋಟಿಯಿಂ
ಕಳೆವರಾಯುಷ್ಯಮಂ ಚೆಲ್ವ ಬಟ್ಟೆಗಳ ವಾಸನೆಯದೇಂ ಕಷ್ಟಕರವೋ ॥ ೨೨ ॥

ಚೆಂದುಳ್ಳ ಖಾದಿಯಂ ತೊಟ್ಟಿರುವೆ ದಿಟವನೊರೆ
ಯೆಂದುಖಾದಿಯ ತೊಟ್ಟವನಿಗೆಂಬುದಿಲ್ಲವೇ
ಮಂದಿ ಖಾದಿಯೊಳುಂಟು ಶುಚಿ ಸತ್ಯ ಶುಭಲಕ್ಷಣಾದಿ ಸುಖಸಂಪದಗಳು
ಮಂದರೀ ಖಾದಿಗಂ ಗಿರಣಿಯರುವೆಗಳೆ ಬಲು
ಚೆಂದವೆಂಬರು ಕುದುರೆಗಿಂ ಕತ್ತೆ ಮೇಲೆಂಬು
ಮಂದದಿಂದವರ ಮಾತೇಂ ತೆಗೆಯೆನುತ್ತಂ ಕಂಡವರು ನುಡಿದರಿತ್ತ ॥ ೨೩ ॥

ಗುರುಮಹಾಂತಸ್ವಾಮಿಗಳಿಗಂದಣದೊಳಿಂದು ಬಲು
ಬಿರಿಸುಳ್ಳ ಖಾದಿಯನಲಂಕರಿಸಿ ಕುಳ್ಳಿರಿಸಿ
ಮೆರಿಸುತಿಹರಂತದಂ ಬಸವಶೆಟ್ಟರೆನಿಪ್ಪವರು ಸಲ್ಲಿಸಿರುವರಂತೆ
ನೆರೆ ಕುಮಾರಚರೇಂದ್ರರೊಪ್ಪಿರುವರಂತೆ ತೆಗೆ
ಸರಿಯೆನಿಸಿದಪುದೆಯಿದು ಮಠದಲ್ಲಿ ಝಗಝಗಿಪ
ಜರದ ಪೀತಾಂಬರಾದಿಗಳಿಲ್ಲವೇ ನಮ್ಮ ಸ್ವಾಮಿಗಳ್ಸಾಮಾನ್ಯರೇ ॥ ೨೪ ॥

ಎಮಗೊಪ್ಪದೀ ಮಾತು ಪೋಗಿ ಬಿನ್ನೈಸಿದೊಡೆ
ವಿಮಲಮಹಿತ ಕುಮಾರಯತಿಗಳನುಮತಿಗೊಡರೆ
ನಮಿಸಿ ಕೇಳುವ ಬನ್ನಿರೆಂದಲಂಕಾರಶೃಂಗಾರಪ್ರಿಯರ್ಕೆಲಬರು
ಪ್ರಮುಖರೆ ನಲಿದು ಸಾಧ್ಯಮಲ್ಲೆಂದು ಮತ್ತೆ ಕೆಲ
ಸುಮತಿಗಳ್ಕೇಳಲಾಲೋಚನೆಯ ಮಾಡಿ ಸಂ
ಭ್ರಮದೊಳಾ ವಸ್ತ್ರಗಳನೋರ್ವ ಕರಣಿಕನಿಂದ ಕೋಣೆಯೊಳಗಿಡಿಸಿ ಬಿಡದೆ ॥ ೨೫ ॥

ಅವಕೊಂದು ಬಲ್ಬೀಗವನು ಹಾಕಿಕೊಂಡು ನೀ-
ನೆಮುರಿಗೀಜೇಡ ಬೇರೆಡೆಗೆ ಪೋಗೆಂದು ಕಳಿ-
ಸಿದರವನನಿವರು ಸಿಂಹಾಸನಾರೋಹಣ ಮಹೋತ್ಸವಕೆ ಸಭೆಗರೆವರು
ಸದಮಲಸ್ವಾಮಿಗಳಿಗಾಗಿ ಬಂದಿರುವ ಜೆ-
ಲ್ಪೊದಗಿದಾ ಖಾದಿ ಕೋಣೆಯೊಳಹುದರಿಂದವಸ-
ರದೊಳು ಹುಡುಕಿಸಿದರಾ ಕರಣಿಕನು ಸಿಗಲಿಲ್ಲ ಬರಿದೆ ಯತ್ನಂ ಗೈದರು ॥ ೩೬ ॥

ಕರಣಿಕಂ ಕಂಡಡುಂ ಕಾಣಲಿಲ್ಲೆಂದು ಪೇ-
ಳ್ದರು ಹುಡುಕುವವರಿವಕ್ಕೇಗೈವುದೀ ವಿರಾ-
ಟ್ಪುರಚರೇಂದ್ರರು ಖಾದಿಯಿಲ್ಲದಾಂದೋಲನೋತ್ಸವವಾಗಬಾರದೆಂದು
ಸರಿಯಿಲ್ಲದವರಿಗೊರೆದರು ತಿಳಿಯದಂತವರು
ಗುರುಮಹಾಂತೇಶನಂ ಜರತಾರಿಯಿಂದಲಂ-
ಕರಿಸಿ ನೆರೆದಿರ್ದ ಸಭೆಯೊಳು ಜಯಧ್ವಾನಮಿಂಬಾಗೆ ಸಿಂಹಾಸನದೊಳು ॥ ೩೭ ॥

ಒಲಿದೋರ್ವ ಚರವರಕ್ಕೈಗೊಟ್ಟು ನೆರೆ ಪೂರ್ತ
ಗೊಳಿಸಿದರು ಖಾದಿಯಂ ಧಂಸಲೊಪ್ಪವ ಮೂರ್ತಿ-
ಗಳು ಜಿಗ್ಗಿದರು ಒಡೆಯ ಜೆಲ್ಪ ಕೋಣೆಯೊಳಿರ್ದ ಹಾನಗಲ್ಲಯತೀಂದ್ರನ
ಬಳಿಗನಿತಕಾ ಕರಣಿಕಂ ಬಂದನೆಲವೊ ನೀ
ಸುಳಿದೆಲ್ಲಿಗೈದಿರ್ದೆ ಖಾದಿಯಂ ಕೊಡು ಕೋಗು
ತಳೆಯಲಿ ಮಹಾಸ್ವಾಮಿಗಳು ಬೇಗ ಸಿಂಹಾಸನಾರೂಢರಾಗಿರ್ಪರು ॥ ೩೮ ॥

ಇಂತೆದು ಪೇಳಲೊಡನವನು ಖಾದಿಯ ಪೊಟಿಕೆ-
ಯಂ ತಂದು ಸಭೆಯೊಳಾ ಕಾರ್ಯಕಾರಿಗಳ ಕೈ-
ಗಂತರಸದೀಯೆ ನಿರುಪಾಯದಿಂದಲ್ಲಿಯೇ ಕಪಸಿಯೊಂದನೆ ತೊಡಿಯಿಸಿ
ಎಂತು ಸಿಂಹಾಸನದೊಳುತ್ತಮಾಂಗದ ಮಕುಟ-
ಮಂ ತೆಗೆದು ಮುಂಡಾಸವನು ಸುತ್ತಿಸುವದೆಂದು
ಸಂತಪ್ತಚಿತ್ತದಿಂ ಬೇರೆ ಪ್ರಮುಖ ಚರೇಂದ್ರನೀ ಕುಮಾರೇಶನೆಡೆಗೆ ॥ ೩೯ ॥

ಸಿಡಿಮಿಡಿಸುತ್ತೈತಂದು ಕಂಥೆಯನು ತೊಡಿಸಿದೆವು-
ನಡೆಸ ಸಭೆಯೊಳು ಸಿಂಹಪೀಠಸ್ಥ ಚರವರಗೆ-
ಕೊಡುವನೆಂತಾ ಖಾವಿಯುಂ ಪೊಸಲು ಧರಿಸಿಪ್ಪ ಮುಕುಟಮುಂ ತೆಗಿಸಿ ನೀವೇ
ನುಡಿಯಿರಿ ಸಮಸ್ತರೊಪ್ಪಿದಪರೇನಿದಕೆಂದು-
ಗಡಬಡಿಯೊಳೆನಲವಕ್ಕೀ ಕುಮಾರೇಶ್ವರಂ
ಕಡು ವಿಷಾದಂ ಬಟ್ಟು ಬೇಡವೆಮಗಿದು ಪೋಪೆವೆಂದುಸುರಿ ಪೊರಗೆ ಪೋಗಿ
॥ ೩೦ ॥

ಉಳಿವನ್ತಿ ಜಯಮಹಾಂತೇಶ್ವರನ ವೇದಿಕೆಯ
ಲಲಿತಮಠಮೊಳು ಪ್ರಮುಖರೆಲ್ಲರಲ್ಲಿಗೆ ಬಂದು
ನೆಲವೊರಸಲಷ್ಟಾಂಗವೆರಗಿ ಕೈಮುಗಿದು ನಿಂಮೋ ಶಿವಾದ್ವೈತಭಾಜಾ
ಸಲಹಮೇಕೆಮ್ಮನಾಸರಿಯದನುಸರ್ಗದಂ
ತಿಳಿಯದವನೇ ತಾವು ತಮ್ಮ ಕಾರ್ಯವಿದೆಂದು
ತಳಿಯೊಳಾಂತಿಹೆವಿದಕೆ ಗೆಲವೀವುದೆಂದೊರೆದು ಕರೆತಂದರಾ ಮಠಕ್ಕೆ ॥ ೩೧ ॥

ಅಂದಲ್ಲಿ ಭಕ್ತಾಗ್ರಗಣ್ಯರಂ ಕೊರ್ತೆಲವೊ
ಇದೆಂನ್ನಭಿಪ್ರಾಯಮುಂ ಬೀಳುಗಳೆದಿರುವ-
ರೀವೆಮಗೆ ಮುಳಿಸಿಲ್ಲ ಶಿವಯೋಗಿಗಳಿಗೆ ಮಣಿಕನಕಾದ್ಯಲಂಕಾರವು
ಚಂದಲ್ಲದಿದರ್ಪ್ಪಡುಂ ನೀವೆಲ್ಲ ಭಕ್ತರೊ
ಪ್ಪಿಂದ ಪರಶಿವಮತೋತ್ಕರ್ಷಾರ್ಥವಾಗಿ ಬಿಡ
ದಂದವೆನೆ ಮಾಡುವಿರಿ ಜಂಗಮವರೇಣ್ಯರಂ ತಪ್ಪಲ್ಲವೀ ನಿಯಮವು ॥ ೩೨ ॥

ಆದೊಡಾವುದು ನಮ್ಮ ಭಾರತವಸುಂಧರಿಸ-
ಲಾದಿಯಿಂ ಟೊಂಕಮಂ ಕಟ್ಟಿ ನಿಂದಿರುವದಾ
ಖಾದಿಯ ಮಹತ್ವಮಂ ಯತಿಗಳುಂ ಧರಿಸಿ ಪಲ್ಲಕ್ಕಿಯೊಳು ಧರಿಸಿ ನಾವು
ಮೋದದಿಂದಂ ತೋರಿ ದೇಶಬಾಂಧವರೊಳಿದ-
ರಾದರವ ಪುಟ್ಟಿಸುವದೆಮ್ಮ ಕರ್ತವ್ಯವಿ-
ನ್ನೀ ದಿವ್ಯವಸ್ತ್ರವಲ್ಲದೆ ಗಿರಿಣಿಯುರಿದೆ ಭೂಷಣವೆ ಶಿವಯೋಗಿಗಳಿಗೆ ॥ ೩೩ ॥

ಅದರಿಂದ ಸ್ವಾಮಿಗಳಿಗೀ ಖಾದಿಯಂ ಧರಿಸಿ
ಮುದದಿಂದ ಪಲ್ಲಕ್ಕಿಯೊಳು ಮೆರಿಸಲೆಂಬೆವಾ
ವಿದಕೆ ನೀವೊಪ್ಪಿದೊಡೆ ಬರುವವೆಂದವರ ನೋಡ ಬಡಿಸಿ ಕೊಂಡೈದಿ ಮಠದೆ
ಸದಮಲ ಸ್ವಾಮಿಗಳಿಗಾ ಕಫನಿಮುಂಡಾಸು
ಹೊದಿಕೆಗಳನಂದವೆನೆ ಸಿಂಗರಿಸಿ ಸಿಂಹಾಸ
ನದ ಸಮಾರಂಭಮಂ ಮುಗಿಸಿ ನೆರೆ ತ್ರಿಯಾಂದೋಲಿಕೋತ್ಸವವನಂದು ॥ ೩೪ ॥

ಉಸುರಲಸದಳವಾದ ಬಹುವಿಜೃಂಭಣೆಯಿಂದ
ಮೆಸಗಿ ತಕ್ಕುಪಚಾರದಿಂದಾಗತರನು ಸಂ-
ತಸಗೊಳಿಸಿದಂ ನಾಡೊಳಿಲಕಲ್ಲಪುರ ಮಹಾಜನರಿಗಕಲಂಕವಾದ
ಪೆಸರು ಬಂದುದು ಚಿರೋತ್ತಮಕಾರ್ಯವಂ ಸುಜನ
ರೊಸೆದಹುದೆನ್ನುತ್ತ ನುತಿಸಂತೆ ತನುವಚಮಾ
ನಸಗಳಂ ನೆರೆವೇರಿಸಿದರೆಂದು ಪರಸಿದನಸ್ವರನೀ ಕುಮಾರೇಶನು ॥ ೩೫ ॥

ಅದಕೆ ಮೊದಲೀ ಖಾದಿಯುವರಿಗೆ ಕುಮಾರೇಶ
ಹೃದಯವೊಪ್ಪಿಗ್ಗತ್ತು ಬಿಡದೆ ತಾನಿಸಿನಿಸು
ಮುದದಿಂದಮಂ ಧರಿಸುತಿವರ್ದನೀಯುತ್ಸವಾನಂತರಂ ಕೈನೂಲಿನ
ಸದಮಲಾಂಬರಗಳನೆ ಬಳಿಸಲಾದಂ ವಿದೇ-
ಶದ ವಸ್ತ್ರದಿಗಳನೀ ಚರಾಧಿಪಂ ಧರಿಸಲಿ-
ಲ್ಲನನರಿದು ಬಹುಯತೀಶ್ವರರು ಖಾದಿಯ ಬಟ್ಟೆಗಳನು ಬಳಿಸುತ್ತಿರ್ಪರು ॥ ೩೬ ॥

**ಅಂತೂ ಸಂಧಿ ೧೭ ಕ್ಕೆ ಪದಗಳು ೬೬೭**

**ಮಂಗಲಂ**

॥ ಶ್ರೀ ಗುರುಲಿಂಗಜಂಗಮೇಭ್ಯೋ ನಮಃ ॥



# ಹದಿನೆಂಟನೆಯ ಸಂಧಿ ಪ್ರಾರಂಭ





**ಸೂಚನೆ:—**

ಸಿರಸಂಗಿಯೊಂದುವಾದವ ಗೆಲ್ದು ಪಿಕಮುಖದ

ಸರಸ ಫಳಮಂ ಮುರಿದು ಗಣಪಗೆಳೆಯನನಿತ್ತು

ಹರಭಕ್ತಿಯಂಥಣೆಯ ಕಳೆದು ಚರಸಂಗದೊಳ್ಮೆರೆದಂ ಕುಮಾರೇಶನು ॥

ಸಿರಿಯೆಂಬ ಮದನಾರಿಯಂ ಬಯಸಿ ಯತ್ನದಿಂ

ಕರೆದು ಮನೆಯೊಳು ಹೊಗಿಸಿ ಕೊಂಬರ್ಕೆಲಂಬರ್ಕೆ

ಸಿರಿ ತಾನೆ ಬಂದು ಹೊಕ್ಕಿರುವ ತಮ್ಮಯ ಮನೆಯನೊಲ್ಲದುಃಖಿದಾತುರದೊಳು

ಹೊರಳಿ ನೋಡಗೆ ಮೋಳಿಗೆಯ ಮಾರನಂತಹರು

ತೆರಳುವರು ಕೆಲಬರೀಯೆರಡರೊಳಗಾವುದುಂ

ಬರಲಿಲ್ಲವೆನಗೆ ಬಿಡು ಶರಣರೊಕ್ಕುದನುಣಿಸಿ ಪೊರೆಯೆನ್ನ ನಗಜಾಧಿಪ ॥ ೧ ॥

ಶಿರಸಂಗಿಯೊಡೆಯ ಲಿಂಗಪ್ಪಸರವೇಸಾಯಿ
ಕರುಣಾಳು ಸುವಿಚಾರಿ ಗುಣಮಣಿವಿಭೂಷಣಂ
ಧರಣೀರಮಾಮಾನನೀಯನೆಂದೆನಿಸಿ ಪ್ರಖ್ಯಾತಿಯಿಂ ಮೆರೆದನಿ ವನು
ವರತನುಜರಿಲ್ಲದುದರಿಂ ಕೊನೆಗೆ ತನ್ನೆಲ್ಲ
ಪಿರಿಯ ಸಂಸ್ಥಾನಮಂ ನಿಜವೀರಶೈವ ಪರ-
ತರಮತಧ ಸಕಲವಿದ್ಯಾದ್ರವ್ಯನಿಧಿಗಾಗಿ ಕೊಟ್ಟು ಶಿವನೊಳು ಬೆರೆದನು ॥ ೨ ॥

ಬಳಿಕಾ ನೃಪಾಲಕನ ಸಧರ್ಮಪತ್ನಿಯೆ-
ನ್ನಾಲಘುಸಂಸ್ಥಾನಮಿದು ವೀರಶೈವಮತಕ್ಕೆ
ಸಲಲಾಗದೋರ್ವ ದತ್ತಕುಮಾರಕನನು ಸ್ವೀಕರಿಸಿ ಮನೆಯುಳಿಯಬೇಕು
ಅಳಿಯಬಾರದು ಮದೀಶ್ವರನ ಸಂಗತವಾದ
ಕೆಲಸಮಂ ಮಾಡಿರುವೆನೆಂದು ನ್ಯಾಯಾಸನದೆ
ಕೆಲಬರನುಮತಿಗೊಂಡು ತಂದಳ್ಪಿವಾದಮಂ ನಡೆದುದದು ಬಲುಹಿನಿಂದ ॥ ೩ ॥

ಪತಿಯಿತ್ತ ದಾನಮಂ ಸಮ್ಮತಿಸದಪಹರಿಪ
ಸತಿಗೆ ಪಾತಕಮಪ್ಪುದಿದರಿಂದದಕೆ ನೀವು
ಮತಿಗೊಡಲು ಬೇಡೆಂದೆನೊಂದನುವಿನಿಂ ಮಹಾತ್ಮರ್ಸ್ಪೇಳಲಾ ತಾಯಿಯು
ಪ್ರತಿಕೂಲವಿಲ್ಲ ಪತಿವಚನಕ್ಕೆ ವೀರಶಿವ
ಮತಮೊಂದು ಪಿರಿಯ ಸಂಸ್ಥಾನವಿದು ನಾಮಶೇ-
ಷತೆಯನಾನುವವೆಂಬ ಕಷ್ಟಮುಂ ತಡೆಯುದಾನಿಂತು ಹೋರಾಡುತಿಹೆನು ॥ ೪ ॥

ಆರೊಲ್ಲೆವೆಂಬರೀ ಮತಹಿತವನಾಳ್ವದಕೆ
ವಿಚಾರಿದೀ ಸಂಸ್ಥಾನಮುತ್ಪನ್ನದನಿತು ಸರ-
ಕಾರದಿಂ ಪ್ರತಿವರ್ಷಮುಂ ಬಡ್ಡಿಬರುವನಿತು ಹಣವನಿಡುವೆನು ತಪ್ಪದೆ
ವೀರಶೈವರ ವಿದ್ಯೆಗುಪಯೋಗವಾಗಲದು
ಸಾರಸಂಸ್ಥಾನದಾಶೆಯದೇಕೆ ತಮಗೆಂದು
ಧೀರರಿಂ ಪೇಳಿಸಿದಳಾ ರಾಣಿಯದಕೆ ತತ್ಸಂಘಪವರಾಲೋಚಿಸಿ ॥ ೫ ॥

ಮಾಯಾಪ್ರಪಂಚಮೋಹಮದೆನಿತೊ ಶಿವಮತಕೆ
ತಾಯಿಯಾಗಿರ್ಪಮಾವಂಗೋರ್ಪಗೋ ಸ್ವಲ್ಪ
ತಾಯಿಯಾಗಲಪೇಕ್ಷಿಸಿದಳಾ ಮಹಾರಾಣಿ ದತ್ತಕವ ಮಾಡಿಕೊಂಡು
ರಾಯನೆನ್ನಿಪ್ಪ ಮತೀಯರಿಗೆಲ್ಲ ಪಿತನಾಗಿ-
ಯಾಯತಂ ಮಿಗೆ ವಿದ್ಯೆಯಂ ಕಲಿಸಿ ಬಹುಗೃಹನಿ-
ಕಾಯಮೊಳು ತನ್ನ ದೀವಿಗೆಗಳೊಪ್ಪುವ ತೆರದೊಳೆಸಗಿಹಂ ಪುಣ್ಯಾತ್ಮನು ‖ ೬ ‖

ತನ್ನೊಂದು ಮನೆಗೆ ದೀಪವನು ಹಚ್ಚುವದರಿಂ
ದೌನ್ನತ್ಯವೇನೆಲ್ಲರುಂ ಪೊತ್ತಿಸುವರದಂ
ಮುನ್ನಾವನೀ ಲಿಂಗರಾಜನಂತೆಲ್ಲ ಲಿಂಗಿಗಳ ಮನೆಗಳೊಳು ತನ್ನ
ಸನ್ನುತೋಜ್ವಲದೀಪಗಳನು ಹೊತ್ತಿಸಿ ಶಿವನ
ಮನ್ನಣೆಗೆ ಪಕ್ಕಾಗಿಹಂ ಜಗತ್ತ್ರಯದಲ್ಲಿ
ಸನ್ನಿಮುಚ್ಚಿರುವದೇನೆಮ್ಮ ತಾಯ್ಗಿದರಿಂದ ತನಗಾವ ಲಾಭಮುಂಟು ? ‖ ೭ ‖

ಏತರಿಂದನಿತು ಹಣವನು ರಾಣಿಯರು ಕೊಡುವ—
ರಾ ತಮ್ಮ ಸಂಸ್ಥಾನವೆಮ್ಮೀ ಸಮಾಜಕ್ಕೆ
ದಾತನಿಂದೊರೆದಿಹುದು ತಮಗಿದಂ ಮರಳಿ ಬಿಡುವಧಿಕಾರವೆಮ್ಮೊಳಿಲ್ಲ
ಮಾತಿದೆಮಗನುಚಿತಂ ಲಿಂಗಭೂಪಾಲಂ ಪು-
ನೀತಮನದಿಂ ದಾನಮಾಗಿ ಕೊಟ್ಟಿರ್ದಿದು
ರೀತಿಗೆಡದೀ ಸಮಾಜಕ್ಕುಳಿವುದಲ್ಲ ನೋಡೆ ಪೋಪುದಿದಕೇಕೆ ಚಿಂತೆ ‖ ೮ ‖

ಇವರಲ್ಲಿ ತಿಳಿವುದಾ ಲಿಂಗರಾಜನ ಮನಂ
ಬೆದರಿಕೆಯದಿಲ್ಲೆಮಗೆ ವೀರಶೈವಸಮಾಜ-
ಕಿದೆ ಮಹೋದ್ಧಾರಸಾಧನವೆಂದು ಬಯಸಿ ಬೇಡಿಲ್ಲವೆಮ್ಮೊಳಗಾವನು
ಒದಗಿಹುದು ತಾನೆ ಬಂದೆಮಗೆ ಸಂಸ್ಥಾನಮಿಂ-
ದಿದರ ಪರಿಣಾಮವೇನಪ್ಪುದೋ ನೋಳ್ಪೆವೆಂ—
ದೆದುರಾಗಿ ನಿಂದರಿವರಧಿಕಾರಿಗಳು ದಾನಕರ್ತನಿಂಗಿತವ ನಂಬಿ ‖ ೯ ‖

ನ್ಯಾಯಾಸನವ ನೆಚ್ಚಕಾಗಿ ಭಿಕ್ಷಾಟನದ
ಕಾಯಕವ ಕೈಕೊಂಡು ಶ್ರೀವಿರಾಟ್ಪುರ ಯತೀಶು-
ನಾಯಾಸದಿಂ ಧನವ ಪೂಕೈಸಿ ಗೆಲಿಸಿವಂ ತದ್ವಿವಾದವನು ಮತಕೆ
ತಾಯಿಯೇ ನಿಜವೀ ಮಹಾರಾಣಿಯೆಂಬಭಿ-
ಪ್ರಾಯವೆಲ್ಲರ ಮನದೊಳಚ್ಚೊತ್ತಿಸಿದನು ಮಹ
ನೀಯನಾದರೆಯುಸ ಪವಿತ್ರಮನನುಂ ಬಿತ್ತರಿಸಿದಂ ಪ್ರಬುದ್ಧತೆಯೊಳು ॥ ೧೦ ॥

ಶಿವಪುರದೊಳಿರುವ ಪಾಲ್ಕೆರೆಯನ್ನದಾನೀಶ
ಶಿವಯೋಗಿವರ್ಯರಾಶ್ರಮಕೀ ಕುವಾರಯತಿ
ನಿವಹತಿಲಕಂ ಬಂದನಾವುದೋ ಕಾರ್ಯಾರ್ಥವೊಂದುದಿನಮದರ ಬಳಿಯ
ವಿವಿಧಫಲಕುಸುಮತರುವಲ್ಲರಿಗಳಿಂ ಶೋಭಿ-
ಸುವ ತೋಟದೊಳು ಸಿದ್ಧಗೊಳಿಸಿ ಪದ್ಧತಿಯಂತೆ
ಶಿವಪೂಜೆಯಾಗಿ ಬಳಿಕರ್ಪಣಕ್ರಿಯೆ ನಡೆದ ಸಮಯದೊಳು ತಿಳಿಯದಂತೆ ॥ ೧೧ ॥

ಹರವಾಗಿ ನಿಬಿಡಪತ್ರಚ್ಛಾಯೆಯುಳ್ಳ ಪೆ-
ಮ್ಮರದ ಕೋಡೊಳು ಕುಳಿತ ಕೋಗಿಲೆಯ ಬಾಯಿಂದ
ಸರಿದೊಕ್ಕುದೊಂದೆಂಜಲಿಳಿದಳಿರು ಶ್ರೀಕುಮಾರೇಶನೆಡೆಬಟ್ಟಲೊಳಗೆ
ನಿರುಕಿಸಿದನೊಳಗೆ ಮರುಗಿದನದಂ ಭುಂಜಿಸಿದ
ನರೆಮುಚ್ಚಿದುದರಂ ಪರಿಣಾಮವಿದು ಮಾಳ್ಪುದೇ
ನರಿಯದಾದೆವು ಕರ್ಮಧರ್ಮಸಂಯೋಗದಿಂದಾಯ್ತೆಂದು ಚಿಂತಿಸಿದನು ॥ ೧೨ ॥

ಲಿಂಗಾರ್ಪಣೀಯ ಸಿದ್ಧ ಪದಾರ್ಥಗಳನೆಲ್ಲ
ಪಿಂಗದಂದದೊಳು ಮೊದಲೆಡೆಗೈಸಿಕೊಂಡು ನಿಜ
ಲಿಂಗಕರ್ಪಿಸುತ ಭುಂಜಿಪರು ಶಿವಯೋಗಿಗಳು ಮತ್ತೆ ಬೇಕಾದೊಡವನೇ
ಪೊಂಗಿನೀಡಿಸಿಕೊಳ್ಳುತಿರ್ಪರಾ ಮೊದಲೆಡೆಗೆ
ಸಂಗತಿಸದಿರ್ದ ಬೇರಾವನೂತನಪದಾ-
ರ್ಥಂಗಳಂ ಮುಟ್ಟದಿಹರೆಡೆಯಲ್ಲಿ ಬಂದುದಂ ಬಿಡದುಂಬುತಿರ್ಪರರರೇ ॥ ೧೩ ॥

ಮೊದಲಿಗೆಡೆಯಾಗದಿರ್ಪೆಳೆದಳಿರು ಮತ್ತೆ ಮೇ-
ಲದು ಪಿಕೋಚ್ಛಿಷ್ಟಂ ನಿಷೇಧಮಾಗಿಹುದರಿಂ-
ದದನು ಭುಂಜಿಸಲೆಬೇಕಾಯ್ತೆಡೆಯೊಳೈತಂದ ಕಾರಣಂ ತಾಂ ಬಿಸುಡದೆ
ಸದಮಲಶಿವಪ್ರಸಾದಿಗಳು ಬಹುಭಾಷೆಯಾ-
ಗದೆ ತುಂತುರುಗದುಂಡುಳಿಸವೆ ಪೇಣ್ಕೊಂಡು ಮರು-
ಳದೆ ಪ್ರಸಾದವನುಣ್ಬುದೆಂಬ ನಿಯಮವ ಪಾಲಿಸಿದನೀತನುಮ್ಮಳಿಸುತೆ ॥ ೧೪ ॥

ಉರಿವಗಾಧಾಗ್ನಿಯೊಳು ಹಸಿಯ ಕಟ್ಟಿಗೆಯುರಿದು
ಮರುದಾಪ್ತವಪ್ಪಂತೆ ಸಂಸ್ಕರಿಸದೋಗರಂ
ಪರಮಪ್ರಸಾದದೊಳು ಸುಪ್ರಸಾದವದಾಗುತಿಹುದೆಂದು ಹಲಕೆಲಬರು
ಹರುಷದಿಂದುಂಬಾಗ ನಡುನಡುವೆ ಬೇರೆ ಪೊಸ
ಪರಿಯೋಗರವನುಂಬುತಿಹರಿದಕ್ಕೆಮ್ಮ ಚರ-
ವರ ನೊಪ್ಪಲಿಲ್ಲವಿದರಿಂದಾತ್ಮಸಂಯಮನವಳಿವುದೆಂಬುತ್ತಿರ್ದನು ॥ ೧೫ ॥

ಆರರೆ ಜಂಗಮನು ರುಚಿಗಾಡಿ ಕೆಟ್ಟಂ ಮತ್ತೆ
ಬರಿಯ ವೇಷಕ್ಕಾಡಿ ಕೆಟ್ಟನಾ ಭಕ್ತನೆಂ-
ದೊರೆವ ಶರಣರ ವಚನಮಂ ಪೇಳುವಂ ಕುಮಾರೇಶ್ವರಂ ನೆರೆದವರೊಳು
ಸುರುಚಿಯುಳ್ಳೊಡೆ ಸಾರಿನೊಳು ನೀರು ಬೆರಿಸಿ ಸ್ವೀ-
ಕರಿಸುತಿರ್ದಂ ತಾನು ನಾಲಗೆಯ ಚಪಲತೆಗೆ
ಮರುಳಾಗಿ ಭೋಜನಂ ಮೀರಿದಪುದೆಂದೀತನಾರೋಗ್ಯಭಾಗ್ಯನಲ್ತೇ? ॥ ೧೬ ॥

ಹಿತಶುದ್ಧ ಸತ್ವಾನ್ನಮಿತಭೋಜನಂ ಸದೋ-
ಚಿತಕಾಲಲಿಂಗಪೂಜಾಸಕ್ತಿ ಪಾವನ
ವ್ರತಪಾಲನಂ ಕ್ಷುತ್ತೃಷಾಸಹಿಷ್ಣುತೆಯುಳ್ಳ ಯತಿವರ ಕುಮಾರೇಶನ
ಮತಿಯೊಳ್ವಿಷಾದಮುಂಟಾಗಿ ಕಪ್ಪನಹಳ್ಳಿ-
ಯತುಲಶಾಖಾಯೋಗಮಂದಿರಕೆ ಪೊರಮಟ್ಟ-
ನತಿಶೀಘ್ರದಿಂದಂದೆ ದೋಷನಿಷ್ಕೃತ್ಯರ್ಥಮಿರದನುಷ್ಠಾನಕಾಗಿ ॥ ೧೭ ॥

ಮೂದಿಂಗಳೆಸಗಿದನನುಷ್ಠಾನಮಂ ಮಹಾ
ಮೋದಮಂ ಪೊಂದಿದಂ ನಿರ್ಧೂತದೋಷಮನ
ನಾದಂ ನಿರರ್ಗಲಾಚಾರಮಂ ನಡಿಸಿದಂ ಜಾಗರೂಕತೆಯಿಂದಲಿ
ವೇದಾಗಮೋಕ್ತಶಿವಧರ್ಮಮಂ ತಿಳಿದು ಸಂ
ಪಾದಿಸುವಪೆಂದು ಪೇಳ್ದಂ ಸುಧಾರಿಸಿದನ
ತ್ಯಾದರದೊಳಾಶ್ರಿತರನವಿರತಂ ಧರ್ಮಾತ್ಮನಾದೀ ನಿರಾಭಾರಿಯು ॥ ೧೮ ॥

ಸೊನ್ನಲಿಗೆಗೊಮ್ಮೆ ಪೋದಂ ಕುಮಾರೇಶನ
ತ್ಯುನ್ನತಾಭವಯೋಗ ಮಂದಿರದ ಭಿಕ್ಷೆಗೀ
ಸನ್ನು ತನ ಚರಣದರ್ಶನಕೆ ಚುಂಬನಚೂಡಮಲ್ಲಯ್ಯನೆಂಬೋರ್ವನು
ಸನ್ನಿಧಿಯೊಳೆರಗಿ ಕುಳ್ಳಿರತಿಲವೊ ಭಕ್ತಿಸಂ
ಪನ್ನ ನಿನಗಣುಗರುಂಟೇನೆಂದು ಕೇಳಲೈ
ಮನ್ನಣೆಯವೆತ್ತ ಶಿವಯೋಗಿಯೇ ಮಕ್ಕಳೆನಗಿಲ್ಲೆಂದು ಬಿನ್ನಯಿಸಲು ॥ ೧೯ ॥

ಅಂತಿರ್ದಡೈ ದಂಪತಿಗಳೀರ್ವರುಂ ನೀವು
ಕಂತುಮರ್ದನ ಯೋಗಿವರರಿಂದನುಗ್ರಹವ
ನಾಂತೊಡಾನಂದಮುಂ ಮಕ್ಕಳುಂ ನಿಮಗಾಗುತಿಹರೆಂದು ಪೇಳಲವರು
ಶಾಂತಮಾನಸದಿಂ ಚರಾನುಗ್ರಹಂಗೊಂಡು
ಭ್ರಾಂತಿಯಂ ಬಿಟ್ಟು ಶಿವಪೂಜೆಯಂ ಮಾಡುತಿರೆ
ಸಂತಸದೊಳೋರ್ವ ಸುಕುಮಾರನಂ ಪಡೆದರೊಂದಬ್ದದೊಳಗಚ್ಚರಿಯೆನೆ ॥ ೨೦ ॥

ಬಳೆದಂ ಕುಮಾರನೆಂಬೊಳ್ಪೆ ಪೆಸರಿಂದ ಚೆಲು
ವೆಳೆಯನೇನೊಂದು ಕಂಟಕವಿಲ್ಲದೈದಬ್ದ
ದೊಳಗೆ ಮಲ್ಲಯ್ಯನಾ ಸುಕುಮಾರನಂ ತಂದು ಶಿವಯೋಗಮಂದಿರಕೆ
ಸಲಿಸಿದಂ ಮತ್ತೊಂದು ಪೆಣ್ಣವನ ಹಿಂದುದಿಸಿ
ಬಳೆವುತಿರ್ದತ್ತದನುಮೀ ಮಂದಿರಕ್ಕೀಯ
ತಿಳಸಿದಂ ತಂದೆಯುದಕೊಪ್ಪಲಿಲ್ಲವನ ಸತಿಯಿಬ್ಬರೊಳು ಕಲಹವುದಿಸಿ ॥ ೨೧ ॥

ಶಿವಯೋಗಿಯಾಜ್ಞೆಯಿಂದಾವೀರ್ವರುಂ ಪ್ಸಹಾ
ಶಿವಯೋಗಿಗಳ ಕರಾಬ್ಜದೊಳಿರಿಸಿ ಹಡೆದಿರ್ದ
ಶಿವಶರಣೆಯಾಗುವೀ ತನುಜೆಯಂ ಶಿವಯೋಗಮಂದಿರಕೆ ಕೊಡದಿರ್ದೊಡೆ
ಶಿವನೊಲಿಯನೀ ಕುಮಾರಿಗೆಯೆಮ್ಮಮಗಳಲ್ಲ
ಶಿವಯೋಗಿವರ ಕುಮಾರೇಶಗರ್ಪಿಸಿದೊಡೀ
ಕುವರಿ ಮಾದೇವಿಯಕ್ಕನ ಪೋಲ್ವಳಾತಂಕವೆಸಗಬೇಡೆಂದನವನು ॥ ೨೨ ॥

ಲಲನೆಯರ ದರ್ಶನವನೊಳಕೊಳ್ಳದಿಹ ಯೋಗ
ನಿಲಯದೊಳಿದಂ ಕೊಳ್ವುದುಂಟೆ ಶಿವಯೋಗೀಂದ್ರ
ನುಳುಹಿಕೊಳ್ಳುವೆನಿದೊಂದಂ ಮನೆಗೆ ಪೆಣ್ಣನಣಗನನಿತ್ತುದುದು ಸಾಲದೇ
ಇಳೆಯೊಳು ಚರೋತ್ತಮರು ತಮ್ಮ ಸಲುವಾಗಿ ವರ
ಗಳನರ್ಸ್ತಕರಿಗೆ ದಯಪಾಲಿಪರೆ ನಿಮ್ಮದಿದು
ತಿಳಿಗೇಡಿತನವೆನಿಪುದಣುಗೆಯಂ ಕೊಡಲಾರೆ ನಾನೆಂದವಳ್ನುಡಿದಳು ॥ ೨೩ ॥

ಅಪರೀರ್ವರಿಂತು ಮನೆಯೊಳ್ವಿವಾದವನು ಪ್ರತಿ
ದಿವಸಮುಂ ಮಾಡುತಿರಲಾ ಮೋಹದಣುಗೆ ರುಜೆ
ಗವಿದಳಿದುದಳಲಿದರು ಬಳಲಿದರು ದಂಪತಿಗಳಪರಾಧವಾದುದಕಟ
ಶಿವಯೋಗಿಗೀವ ಸಂಕಲ್ಪಮಂ ಮಾಡಿ ತ
ಪ್ಪುವದುರ್ವಿಚಾರಿಗಳಿಗುಳಿಯದದು ಕ್ಷಮಿಸೆಂದು
ಶಿವಪಾದ ಪಂಕೇಜಮಂ ಜಾನಿಸಿದರು ಮನದೊಳ್ಮಹಾಭಕ್ತಿಯಿಂದ ॥ ೨೪ ॥

ಮೆರೆವ ಮಾಕಾಪುರದೆ ನೀಲಪ್ಪಗೌಡನೆಂ
ಬುರತರ ಗುಣಾಢ್ಯನಾದೋರ್ವ ಗುರುಚರಭಕ್ತ
ನಿರುತಿರ್ದನವನ ತಾಯಿಯು ಕಂಗಳಾಕಸ್ಮಿಕಂ ಪೋದವಾ ಮಾತೆಯು
ಪರಿತಾಪಗೊಂಡದರ ಚಿಂತೆಯಿಂ ದಿನದಿನಂ
ಸೊರಗುತಿರಲದನರಿದು ನೀಲಪ್ಪಗೌಡನಾ
ಕೊರಗುವದದೇಕನೇಕೌಷಧೋಪಾಯಂಗಳಾದವಿನ್ನೇಗೈವುದು ॥ ೨೫ ॥

ಶಿವಮತವನುದ್ಧರಿಸಲೆಂದು ಶಿವಯೋಗದಿಂ
ಭುವನದೊಳು ಮೆರೆವುತಿರ್ಪಂ ಕುಮಾರೇಶ್ವರಂ
ಸವೆಯದತಿಭಕ್ತಿಯಿಂದಾತನಂ ನಂಬಿ ನೆನೆಭಜಿಸು ಪಗಲಿರುಳಲಸದೆ
ತವೆ ಬಾರದಿರವು ನಿನ್ನಯ ಕಣ್ಗಳೆಸಗಿ ನೋ-
ಡುವಣ ಯತ್ನಾಂತೇ ಮಹೇಶ ಎಂದುಂಟು ನೀ-
ನವಧರಿಪುದೆಂದೊರೆಯಲೊಡೆನವಳ್ಕಿಂದು ಮಡಿಯುಟ್ಟು ಲಿಂಗವನರ್ಚಿಸಿ ॥ ೨೬ ॥

ಅಸಮುಚರಪುಂಗವ ಶ್ರೀ ಕುಮಾರೇಶ್ವರನ
ಪೆಸರಿನಿಂ ತನ್ನೆರಡು ಕಂಗಳಿಗೆ ನೆನೆವುತುಂ
ಭಸಿತಮುಂ ಧರಿಸಿಕೊಂಡೈ ಮಹಾಶಿವಯೋಗಿ ತಂದೆ ನೀನೆನ್ನ ಸಲಹು
ವಸುಧೆಯಂ ಪೊರೆಯಲೈತಂದ ನಿನಗಾನೋರ್ವ
ಪಶುಪ ಭಕ್ತಳ್ಭಾರವೇ ದೇವ ಯತಿವರ್ಯ
ವ್ಯಸನದಿಂದಶನಮುಂ ಬಿಟ್ಟಿರುವೆನೀಕ್ಷಣಗಳಿಂಗಿಹುದರಿಂದ ಪ್ರಭುವೇ ॥ ೨೭ ॥

ಪ್ರಾರಬ್ಧಕರ್ಮಮಂ ದೂರಮಾಡಲು ಬಲ್ಲ
ವೈರಾಗ್ಯಮೂರ್ತಿಯೇ ಶರಣುಹೊಕ್ಕೆನು ನಿನ್ನ
ಚಾರು ಪದಪದ್ಮಂಗಳಂ ಕುಮಾರೇಶ ಜಿತಪಾಶ ಪಾತಕವಿನಾಶ
ಕಾರುಣ್ಯಸಿಂಧು ನಿರ್ಗತಿಕಜನಬಂಧು ಸುಖ-
ಸಾರ ಮಹಿತೋದಾರ ಪರಮೋಪಕಾರ ಪರ-
ವೀರಶೈವಾಚಾರಧೀರ ನೀನೆನಗೆ ಗತಿ ಬೇರಿಲ್ಲ ಪೊರೆ ಯತೀಂದ್ರಾ ॥ ೨೮ ॥

ಕಂಗಳೇ ಸರ್ವೇಂದ್ರಿಯಂಗಳೊಳು ಮುಖ್ಯವೀ-
ಕಂಗಳಿಲ್ಲದೊಡೆ ಶಿವಲಿಂಗಮುಂ ಪ್ರಮಥರಪ-
ದಂಗಳಂ ನೋಳ್ಪ ಬಗೆಯಾವುದೈ ಕಿವಿ ಬಾಯಿ ಪೋಗಿರ್ದೊಡಾನಳುಕದೆ
ಕಂಗಳೈಸಿರಿಯಿಂದ ಸುಖದೊಳಿರುತಿರ್ದೆನೈ
ಜಂಗಮಾಗ್ರಣಿ ಮದಪರಾಧಕೋಟಿಯ ಮರೆದು
ಕಂಗಳಂ ಕೊಡು ಕನಿಕರಂ ಬಡು ತಿರಸ್ಕಾರಮುಂ ಬಿಡು ವಿರಾಟ್ಪುರೇಶ ॥ ೨೯ ॥



ಪರಮ ಪೂಜ್ಯ

ಲಿಂ. ಶ್ರೀ ಮ. ನಿ. ಪ್ರ. ಶಿವಬಸವ ಮಹಾಸ್ವಾಮಿಗಳು, ಹಾವೇರಿ

ನೀನೆನ್ನ ತಾಯ್ತಂದೆ ನೀನೆನ್ನ ಗುರುದೈವ
ನೀನೆನ್ನ ಬಂಧು ಬಳಗಂ ಗುರುವೆ ನಿನಗೆನ್ನ
ಮಾನಸವೆ ಹಾನಗಲ್ಲೆಂದರಿದೆನ್ನೈ ನಿನ್ನ ದಿವ್ಯಪಾದಾಂಬುಜವನು
ಜಾನಿಪೆನು ನಿನ್ನ ಜಾನವಿದೆನ್ನ ಜೀವನಂ
ನೀನೆ ಸಲಹು ಕುಮಾರ ಸುಕುಮಾರ ಸುಕುಮಾರ
ನಾನೇಸು ಪುಣ್ಯವನು ಮಾಡಿದ್ದೆನೋ ನಿನ್ನ ನೆನಹು ದೊರೆದುದು ಕುಮಾರಾ ॥ ೩೦ ॥

ದಿನದಿನದೊಳಿಂತು ಪೊಗಳುತ್ತ ಜಾನಿಸುವ ಮಾ-
ನಿನಿಯು ಮನಸೊಳು ಜಾನಮದು ತುಂಬಿ ಜಾನಸೊಳು
ಘನಕುಮಾರಂ ತುಂಬಿ ತತ್ಕುಮಾರನೊಳು ದಯೆದುಂಬಿಯೊಂದಿರುಳಿನಲ್ಲಿ
ಕನಸಿನೊಳು ಮಗಳೆ ನೀನೇಳು ಯತಿಗಳು ನಿನ್ನ
ಮನೆಗೆ ಬಂದಿಹರು ನೋಡೆಂದಾ ಕುಮಾರೇಶ-
ನನುರಾಗದಿಂ ಪೇಳಿದಂತಾಗಲಾ ತಾಯಿ ಪಂಪಾಂಬಿ ಕಣ್ದೆರದಳು ॥ ೩೧ ॥

ಹೊಳೆವ ದೀವಿಗೆಯು ಬೆಳಗಿನೊಳೆಲ್ಲವೊಡೆದು ನಿ-
ಚ್ಚಳವಾಗಿ ಕಂಡುದಿರಲಿಲ್ಲ ಬೇರಾರುಮು-
ಚ್ಚರಿಗೊಂಡು ನಿರುಪಮಾನಾನಂದ ಪೊಂದಿ ಮಗನೆ ನೀನೇಳೆನ್ನಯ
ಕುರುಡಾದ ಕಣ್ಣುಗಳು ಮರಳಿ ಬಂದವು ವಿರಾ-
ಟ್ಪುರದ ಚರವರ ಕುಮಾರೇಶ್ವರಂ ಕರುಣಿಸಿದ
ನರರೆ ಧರಣಿಯೊಳೆನ್ನ ಪೋಲ್ವ ಪುಣ್ಯಾತ್ಮರಾರುಂಟು ಪೇಳ್ಮತ್ಕುಮಾರಾ ॥ ೩೨ ॥

ಮಾತೆಯಾನಂದ ವಚನೋದ್ಗಾರಕೆಲ್ಲರೇ-
ಳ್ಗಾತುರದೆ ಬಂದು ನಿಲಲಪ್ಪ ಕಣ್ಗಳ್ಬಂದ
ವೀ ತೆರೆಗೊಳೆನಗನುಗ್ರಹಿಸಿದಾತಂ ಕುಮಾರೇಶಂ ಕುಮಾರೇಶನು
ಕೌತುಕಮಿದಾತ್ಮಜನೆ ಮೊದಲು ಪೇಳಿದ ನಿನ್ನ
ಮಾತು ಪುಸಿಯಲ್ಲ ಕಣ್ಣಿತ್ತಂ ಕುಮಾರಂ ಪು-
ನೀತಳಾದೆನು ನೀವು ಸರ್ವರುಂ ಚೆನ್ನಾಗಿ ಕಾಣುವಿರಿ ಕುಂದಿಲ್ಲವೇ ॥ ೩೩ ॥

ನೀಲಪ್ಪಗೌಡನೇ ಮೊದಲಾದ ಮನೆಯವರು
ಕೇಳಿದರು ನೋಡಿದರು ಪರಮಸಂತೋಷನುಂ
ತಾಳಿದರು ಶ್ರೀ ಕುಮಾರೇಶನಂ ಪಾಡಿದರು ಬಳಗದೊಡವೆರೆದು ಪದೆದು
ಮೇಲಾದ ಗಣಸಮಾರಾಧನೆಯನೆಸಗಿದರು
ಕೀಲಿಸಿದ ಪ್ರಾರಬ್ಧಪಾಶಮಂ ಪರಿಯಲೀ
ಶೂಲಧರಯೋಗಿಗಳು ಶಕ್ತರಿಹರೆಂದು ಕೊಂಡಾಡಿದರು ಸಕಲಜನರು ॥ ೩೪ ॥

ವರಕುಮಾರೇಶಂಗೆ ಹಾವೇರಿ ಶಿವಬಸವ
ಚರವರ್ಯರಾವಗಂ ನೆರವಿರ್ದರೊಮ್ಮೊಮ್ಮೆ
ಮರುಗಿದರು ಮನದೊಳೀತನ ಕಷ್ಟಕೊಮ್ಮೊಮ್ಮೆ ಮಾಡಿಮೀ ಕಾರ್ಯವೆಂದು
ಒರೆದರಿದು ಬೇಡಿಮೆಂದೊಮ್ಮೊಮ್ಮೆ ತಿಳಿಸಿದರು
ಸರಿಯಾಗದೆಮಗೆ ನಿಮ್ಮೊಡನಿರುವ ದಿನ್ನೆಂದು
ತೆರಳಿದರು ತಿಳಿದತ್ತಲೊಮ್ಮೊಮ್ಮೆಯೊಮ್ಮೊಮ್ಮೆ ಕೋಪಿಸಿದರು ॥ ೩೫ ॥

ಹೇಳಿದರೆ ಕೇಳರೊಮ್ಮೊಮ್ಮೆ ತಾವೇ ಬಂದು
ಹೇಳದಾಕಾರ್ಯಮಂ ನೆರವೇರಿಸುವರೊಮ್ಮೆ
ಹಾಳುಗೊಂದಲಮಿದೆಮ್ಮಿಂದಾಗದೊಂದೆಡೆಯೊಳಸಮಲಿಂಗಾರ್ಚನೆಯನು
ಶೀಲಮೆನೆ ಮಾಳ್ಪೆವಾವೆಂದೊಡೀ ಸ್ವಾಮಿಗಳು
ಮೂಲಾದರೆಂದಾಡುತಿರ್ದರೊಮ್ಮೊಮ್ಮೆ ಶಿವ
ಲೀಲೆಯಿದು ಬೇರಲ್ಲವೆಂದು ಮನದೊಳು ಹಿಗ್ಗುತಿರ್ದರೊಮ್ಮೊಮ್ಮೆ ನೆನೆದು ॥ ೩೬ ॥

## ಅಂತೂ ಸಂಧಿ ೧೮ ಕ್ಕೆ ಪದಗಳು ೭೦೩

## ಶುಭಂ



॥ ಶ್ರೀ ಶಿವಯೋಗೀಂದ್ರ ಪ್ರಸೀದ ॥



# ಹತ್ತೊಂಬತ್ತನೆಯ ಸಂಧಿ ಪ್ರಾರಂಭ





ಸೂಚನೆ:--

ವೀರಶೈವ ಸಮಾಜದುತ್ಕರ್ಷ ಕಾರ್ಯಗಳ
ನಾರತಂ ತನಗೆ ಜೀವನವಾಗಿ ಸತ್ಕ್ರಿಯಾ
ಚಾರಾದಿ ಬಹುಧರ್ಮತತ್ತ್ವಮಂ ನೆರವೇರಿಸಿದನೀ ಕುಮಾರೇಶನು ॥

ಚಿರಣಿಯಾಯಲು ಹೊತ್ತು ಹೋಯಿತಲ್ಲದೆ ಮುಂದೆ
ಹರುಷದಿಂದಟ್ಟಣ್ಣಲಿಲ್ಲೆಂಬ ವಚನದಂ
ತರಿವಿಲ್ಲದಾಚಾರದೊಳ್ಕಾಲಮಂ ಕಳೆದೆನನುಭವಾಮೃತವ ಪಡೆದು
ಗುರುಲಿಂಗಚರ ಸುಪ್ರಸಾದರೂಪಿಂದದಂ
ಸುರಿದುಂಡು ಚಿರತೃಪ್ತಿಯಿಂ ಬಾಳ್ವ ಭಾಗ್ಯಮಂ
ಕರುಣಿಸೆಂದೆರಗಿ ಬಿನ್ನೈಸುವೆನು ನೋಡೈ ಕೃಪಾಪಾಂಗದಿಂದೀಸರಾ ॥ ೧ ॥

ತಾರೆಯೊಂಬೊಂದೆಮ್ಮ ವಾರಪತ್ರಿಕೆಯು ವೈ-
ಸೂರಲ್ಲಿ ಪೊರಮಡುತ್ತಿರ್ದತ್ತದಕ್ಕೀ ಕು-
ಮಾರೇಶನತಿಶಯ ಪ್ರೋತ್ಸಾಹಮಂ ಮಾಡಿ ಪತ್ರಗಳು ಬೆಳೆಯಲೆಂದು
ಧಾರವಾಡದೊಳು ಧರ್ಮತರಂಗಿಣಿಯೆನಿಪ್ಪ
ವೀರಶೈವರ ಮಾಸಪತ್ರಮಂ ಪೊರಮಡಲು-
ದಾರಾಶ್ರಯವನಿತ್ತು ಕನ್ನಡದ ಸೇವೆಯೊಳು ಬಿತ್ತರಿಸಿದಂ ಪದುಳದೆ ॥ ೨ ॥

ಕುರುಡರುಂ ಕುಂಟರುಂ ಮೊದಲಾದವಯವಹೀ-
ನರಿಗೆ ಸಂಗೀತರಸದೊಡವೆರೆದು ಶಿವಧರ್ಮ-
ಪರ ಗೀತೆಯಂ ಪಾಡಗಲಿಸಿ ಧರ್ಮಜ್ಞಾನಮಂ ಮಾಡಿ ಪಗಲಿರುಳೊಳು
ಮರೆದಾಡೊಡುಂ ದುರಾಚಾರಕೆಡೆಯಾಗದಂ-
ತಿರಿಸಬೇಕವರ ಸದ್ಧರ್ಮಗೀತಾ ಸದಾ-
ಚರಣೆಯಿಂದೆಚ್ಚರಿವರಖಿಲರೆಂದೀ ಮಹಾಸ್ವಾಮಿಯನುಕೂಲಿಸಿದನು ॥ ೩ ॥

ಕೆಲವೆಡೆಯ ದೇವತೆಯ ಜಾತ್ರೆಯೊಳು ಕುರಿಕೋಣ-
ಗಳ ಬಲಿಯಗೊಡುತ್ತಿರ್ದರಲ್ಲಿಗೀ ಶಿವಯೋಗಿ
ತಳರ್ದೆಲ್ಲ ಹಿರಿಕಿರಿಯರಂ ನೆರಿಸಿ ತಾನಹಿಂಸೋಪದೇಶವನು ಮಾಡಿ
ತೊಲಗಿಸಿಹನೀಯಸುರಕೃತ್ಯಮಂ ಮಧುರಪರಿ-
ಮಳಭಕ್ಷ್ಯಭೋಜ್ಯಂಗಳಂ ನಿವೇದಿಸಿ ನಮಿಸಿ
ಪಲವುತ್ಸವಂಗಳಿಂದಾ ಜಾತ್ರೆಯಂ ಮಾಳ್ಪರೀಗಳತಿಸಂಭ್ರಮದೊಳು ॥ ೪ ॥

ಮನುಜರಿಗವಶ್ಯಮಾದನುಕೂಲತೆಗಳು ಮೇ-
ಚ್ಛನಜಗದೊಳಗಿಹೆಲ್ಲ ಸಂಸ್ಕಾರಕಾರ್ಯಗಳು
ಮನವಾರೆ ವೀರಶೈವಸಮಾಜದೊಳು ನೆಲಿಸಬೇಕೆಂದು ಬಯಸಿರ್ಪನು
ವಿನುತಧರ್ಮನಿಷಿದ್ಧಮಾದ ದ್ರವ್ಯಂಗಳುಂ
ನೆನೆಯೆ ಕೇವಲಭಿನ್ನವಾಯುಗುಣದಿಂದ ಸಂ-
ಜನಿಸಿದ ವನಸ್ಪತಿಗಳುಂ ನೆರೆವವದರಿಂದ ಪಾಶ್ಚಾತ್ಯರೌಷಧಗಳು ॥ ೫ ॥

ಎಮ್ಮ ದೇಶದ ರೋಗನಿಗ್ರಹಕ್ಕವು ಸಲ್ಲ-
ವೆವೌಷಧಿಗಳೆಮಗೆ ತಕ್ಕವೆಂದೀ ಮಹಾ-
ತ್ಮಂ ಮೆಚ್ಚಿ ಕೊರತೆಯಿದು ತೊಲಗಬೇಕೆಂದು ಶಿವಯೋಗಮಂದಿರದೊಳೆಳಸಿ
ನೆಮ್ಮಿ ಬುಧಮತದೊಳಾಯುರ್ವೇದಶಾಲೆಯಂ
ನೆಮ್ಮದಿಯೊಳಲ್ಪಪ್ರಮಾಣದಿಂದೆಸಗಿದಂ
ಸಮ್ಮತಿಸಿದೋರ್ವ ವೈದ್ಯನನು ನಿಯಮಿಸಿದನನುಕೂಲತೆಯನೊಪ್ಪುಗೊಳಿಸಿ ॥ ೬ ॥

ಶಿವಯೋಗಮಂದಿರದ ಕೆಲ ಸಾಧಕರಿಗೆ ತಾ-
ನವನಿಂದ ಕಲಿಯಪೇಳ್ದಂ ಶಾಸ್ತ್ರರೀತಿಯಿಂ-
ವಿವಿಧಸಕಲಾಮಯ ಪರೀಕ್ಷಾಚಿಕಿತ್ಸಾದಿಗಳನು ಸರಿಯಾಗಿ ಕೆಲವು
ದಿವಸಮುಂ ನಡೆದುವೀರ್ಝಾಜನಂ ಕಲಿತುದು
ತ್ಸವದೊಳದು ಮುಂದೆ ಪಣವಿಲ್ಲದುದರಿಂದ ಸಾಗಿ-
ಸುವದಾಗದನಿತಕ್ಕೆ ನಿಂದುದನಿತಾವಶ್ಯಕಾರ್ಯನಿರ್ವಾಹದೊಳಗೆ ॥ ೭ ॥

ಗುರುವಾದೆಳಂದೂರ ಬಸವಲಿಂಗಯತೀಶ-
ಚರಣಸೇವೆಯೊಳಿರ್ದ ಕಾಲದೊಳು ಕೆಲರೋಗ
ಪರಿಹಾರಕರ ಚಿಕಿತ್ಸೆಗಳನುಂ ಬಹುವನಸ್ಪತಿಯ ಗುಣಧರ್ಮಗಳನು
ಅರಿದಿರ್ದನೀ ಕುಮಾರಂ ಮೊದಲಿಗದನೆ ಶಂ-
ಕರಯೋಗಮಂದಿರದ ಕೆಲಸಾಧಕರಿಗೊರೆದು
ಪರಿಪರಿಯ ರೋಗಗಳನವರಿಂದ ತವಿಸಿರ್ದನದರ ಸಂಸ್ಕಾರದಿಂದ ॥ ೮ ॥

ತೊನ್ನೆಂಬ ರೋಗಕೌಷಧವನೀ ಚರವರಂ
ತನ್ನಯ ಮಹಾಶೋಧದೃಷ್ಟಿಯಿಂ ಕಂಡು ಹಿಡಿ-
ದಿನ್ನಿದಕೆ ಸರಿಯಿಲ್ಲವೆನೆ ಮಾಡಿಕೊಟ್ಟು ಬಹುಜನರ ಚರ್ಮದ ಬಿಳುಪನು
ಚೆನ್ನಾಗಿ ಕಳೆದದರ ಮರ್ಮಮಂ ಕೆಲಬರಿಗೆ
ನನ್ನಿ ಮಿಗೆ ತಿಳಿಸಿರ್ಪನೇನೊಂದುಮಂ ಬೇಡ-
ದುನ್ನತಹಿತಾರ್ಥಮಿದನೀಯಬೇಕೆಂದೊರೆದು ತಾನೀಪ್ರಗಲ್ಭಮಾನಿ ॥ ೯ ॥

ಶಿವಯೋಗದಿಂ ತಮ್ಮ ರೋಗಮಂ ಕಳೆದುಕೊ-
ಳ್ಳುವದೊಳಿತದಿಲ್ಲದೊಡೆ ದೇಶೀಯ ವೈದ್ಯದಿಂ
ತವಿಪುದುಚಿತಂ ಪಾಶ್ಚಿಮಾತ್ಯೌಷಧಿಗಳಿಗಿಂದೆಮ್ಮ ವೈದ್ಯವೆ ತಕ್ಕುದು
ವಿವಿಧಾಶ್ರಯಂ ಪೆರ್ಚ್ಚಿ ದೊರೆಯಬೇಕಿದಕಿದಂ
ತವೆಕಲಿವ ದೀನವಿದ್ಯಾರ್ಥಿಗಳಿಗತಿಸಹಾ-
ಯವ ಮಾಡಬೇಕೆಂದು ಪೇಳುತಿರ್ದಂ ಮಾಡುತಿರ್ದನಂತೀ ಯತಿಪನು ‖ ೧೦ ‖

ಹಳಹಳಿಸಿದಂ ವೈದ್ಯಶಾಲೆನಿಂದುದಕೆ ತ-
ನ್ನೊಳು ಬಿಡದೆ ಕೆಲವೌಷಧವನು ಶೋಧಿಸಿ ಮಾಡಿ
ಕಲಿಸಿದಂ ಪಳ್ಳಿಗಳ ವೈದ್ಯರಿಗೆ ಮೇಣ್ಕೆಲವು ವೈದ್ಯವಿದ್ಯಾರ್ಥಿಗಳಿಗೆ
ಪಲವುಬಗೆಯಿಂದಾಶ್ರಯಂಗೊಟ್ಟು ಪ್ರೀತಿಯಿಂ
ಕಳಿಸುತಾರ್ಯಾಂಗ್ಲವಿದ್ಯಾಲಯಪರೀಕ್ಷೆಯೊಳು
ವಿಲಸಿತೋತ್ತೀರ್ಣತಾ ಪತ್ರವೊದಗುವ ಪ್ರಯತ್ನಂಗೈವುತಿರ್ದನೊಪ್ಪಿ ‖ ೧೧ ‖

ಪರಮಕೃಷಿಕರ್ಮಮಂ ಶಾಸ್ತ್ರೀಯರೀತಿಯಿಂ-
ದರಿದು ಮಾಡಿಸಲೆಂದು ಬಗೆದು ಕೃಷಿಚತುರರಂ
ಬರಿಸಿಕೊಂಡೊಳ್ಪು ಮಿಗೆ ಶಿವಯೋಗಮಂದಿರದೊಳೆಲ್ಲ ಹೊಲಗಳನು ತೋರಿ
ಸರಿಗಂಡು ಪೊಲದೊಳವರೊರೆದಂತೆ ಹದಗೊಳಿಸಿ
ಪರಿಪರಿಯಬೆಳೆಗೊಂಡನೊಪ್ಪಿ ಬೇಸಾಯುಗಾ-
ರರು ನಾಣ್ಬುವಂದದಿಂದದರ ಮರ್ಮವನಲ್ಲಿ ಸಭೆಗರೆದು ಪೇಳಿಸಿದನು ‖ ೧೨ ‖

ಮೆರೆವ ಕಪ್ಪನಹಳ್ಳಿಯೊಳಗೆ ಶಿವಯೋಗಮಂ-
ದಿರದ ಶಾಖಾಶ್ರಮುವದುಂಟಲ್ಲಿ ನೀರ್ಗೊಡು-
ತ್ತಿರುವ ಜಲಯಂತ್ರದಿಂ ಕಬ್ಬುನೆಲ್ಲುಗಳ ಬೆಳೆಗೊಡುವಂತೆ ಮಾಡಿರುವನು
ಪರಿಪರಿಯ ಕುಸುಮ ಫಲತರುಗುಲ್ಮ ಲತೆಯ ಸುಂ-
ದರ ವಾಟಿಕೆಯನೆಸಗಲೆಂದು ಶಿವಯೋಗಮಂ-
ದಿರದ ತಟನೀತಟದೊಳೊಂದು ನೀರಿನಯಂತ್ರಮಂ ನಿಮಿರ್ಚಿದನೀತನು ‖ ೧೩

ದನಗಾವರಿಂದ ಕರಣಿಕಕಾರಭಾರಿಗಳ-
ತನಕ ಶಿವಯೋಗಮಂದಿರದಲ್ಲಿ ದುಡಿವೆಲ್ಲ
ಜನರು ಶಿವಭಕ್ತರಿರಬೇಕವರಿಗುತ್ತಮಾಚಾರಮಂ ಕಲಿಸಬೇಕು
ಘನವೀರಶೈವಧರ್ಮವ ತಿಳಿಸಬೇಕೆಂದು
ಮನವೊಪ್ಪಿ ಬಲ್ಲ ಜನರಿಂದದಕೆ ತಕ್ಕ ಸಾ-
ಧನವ ಮಾಡಿಸುತಿರ್ದನೀ ಕುಮಾರೇಶ್ವರಂ ದಂಭನೊಂದಿನಿಸಿಲ್ಲದೆ ॥ ೧೪ ॥

ಪ್ರೀತಿಸಂ ಪ್ರಾಥಮಿಕಶಿಕ್ಷಣವನೀ ಪರಂ-
ಜ್ಯೋತಿಸ್ವರೂಪ ಶಿವಯೋಗಿವರ್ಯಂ ಧರಿ-
ತ್ರೀತಲದೆ ಸಾಮಾನ್ಯಜನವ ತಿದ್ದುವ ಮೂಲಸಾಧನಮಿದೆಂದು ನಂಬಿ
ಸಾತಿಶಯಮೆನೆ ಶಿವಮತೀಯ ಶಿಕ್ಷಕಜನರ-
ನೋತು ತಾನಿರ್ಪೆಡೆಗೆ ಬರಮಾಡಿಕೊಂಡು ಪರಿ-
ಪೂತ ಧರ್ಮಾಭಿವೃದ್ಧಿಯನು ಸಾಲೆಯೊಳೆಸಪುದಂ ಬೋಧಿಸುತ್ತಿರ್ದನು ॥ ೧೫ ॥

ಇನಿತರಕೀತಂ ತೃಪ್ತನಾಗದೀ ಶಿಕ್ಷಕೋ-
ಜ್ಜನರ ಸಮ್ಮೇಲನವ ಶಿವಯೋಗಮಂದಿರದೊ-
ಳನುವಿನಿಂ ಪ್ರತಿವರ್ಷಮುಂ ಮಾಳ್ಪ ಕಾರ್ಯವನುಪಕ್ರಮಿಸಿದಂ ಮುದದೊಳು
ಕೊನೆಗಾಣಿಸಿದನೆರಡುವರ್ಷಮದರಂತಲ್ಲಿ
ಮನದೊಳ್ಸಮಾಜಾಭಿಮಾನವಿಲ್ಲದುದರಿಂ
ಧನದೊಂದು ಕೊರತೆಯಿಂದೀ ಪ್ರಯತ್ನದೊಳು ಸಂತೃಪ್ತಿಗಾಣದೆ ಪೋದನು ॥ ೧೬ ॥

ಆದೊಡುಂ ಮನದೊಳು ಹತಾಶನಾಗದೆ ಸುಜನ-
ರಾದ ಶಿಕ್ಷಕರನೀ ಶಿವಯೋಗಮಂದಿರದೊ-
ಳಾದರಂ ಮಿಗೆ ಸಿದ್ಧಗೊಳಿಸಿ ಮೊಗಲಾಯಿಯೊಳು ಸಾಲೆಯಿಲ್ಲದ ಹಳ್ಳಿಗೆ
ಓದುಬರಹಂಗಳಂ ಕಲಿಸಲವರಂ ಕಳುಪಿ
ಮೋದದಿಂ ವಿದ್ಯಾಪ್ರಸಾರಮಂ ಮಾಡಲೆಂ-
ದೀ ದಯಾಘನನೆಸಗಿದಂ ಪ್ರಯತ್ನವನದುಂ ನಡೆದುದತ್ಯಲ್ಪವೆನಿಸಿ ॥ ೧೭ ॥

ವೀರಶೈವಮತೀಯರಹ ಶಿಕ್ಷಕರು ಕಾಣ್ಯ
ಶೂರರಿರ್ದೊಡೆ ನೋಡಿ ಹರ್ಷಪರವಶರಾಗಿ
ಮೀರಿದುತ್ಕರ್ಷ ಚಿಂತನನೆಸಗುತಿರ್ದನವರಿಗತಿಕರುಣದಿಂದ
ಆರೀ ಸಮಾಜಗೌರವಕೆ ಕಾರಣರಾಗಿ
ರಾರಾಜಿಸುವರವರಭಿಪ್ರಾಯದಂದದೆ ಸು-
ಧಾರಿಸಿದನೆಮ್ಮ ಮತಧಾರ್ಮಿಕೌದ್ಯೋಗಿಕ ಕ್ರಿಯೆಗಳಂ ಸಂತಸದೊಳು ॥ ೧೮ ॥

ನೀರಶೈವರಿಗುಂಟು ಬ್ರಾಹ್ಮಣತೆಯವಿರತಂ
ತೋರದಿವರಲ್ಲಿ ಚಾತುರ್ವರ್ಣ್ಯಬಂಧನಂ
ವೀರಶೈವಂ ಭಕ್ತಮಾಹೇಶರೆಂಬೆರಡು ವರ್ಗಂಗಳಿಂ ಮೆರೆವುದು
ವೀರಮಾಹೇಶ್ವರಂ ಭಕ್ತಾದಿಷಟ್ಸಲ್ಥದೊ-
ಳಾರಾಧ್ಯನಾಗಿಯಿರಬೇಕು ಭಕ್ತಂ ನಿಚ್ಚ-
ಮಾರಾಧಕತ್ವದಿಂದೈಕ್ಯಾಂತಮಾಚರಿಪುದೆಂದೊರೆವನೀ ಮಹಿಮನು ॥ ೧೯ ॥

ಜಾತಿಭೇದಂ ವೀರಶೈವರೊಳಗಿಲ್ಲೆಂಬ
ಮಾತಿದು ಪ್ರಸಂಗೋಕ್ತಮೆಂದು ವಿಖ್ಯಾತಸಗಿ-
ಪೂತಗುರುವಂಶಜ ವಟೂತ್ತಮರಿಗಾಚಾರ್ಯ ಚರಪಟ್ಟವೀವುದೆಂದು
ನೀತಿಧರ್ಮಗಳಿಲ್ಲದಾತನುತ್ತಮ ವಂಶ-
ಜಾತನಿರಲೇನುಫಲವಧಿಕಾರಕೊಪ್ಪನೆಂ-
ದೀ ತೆರದೊಳಾಡಿ ಮಾಡುತ್ತಿರ್ದನೀ ವಿಮಲವಂಶವೃತ್ತಿಪ್ರೀತನು ॥ ೨೦ ॥

ಪಗಲಿರುಳೆ ಕುಳಿತೆಡೆಗಳೊಳು ಕೂಡಿದೆಲ್ಲರಿಗೆ
ಸೊಗಸಾಗಿ ಧರ್ಮನೀತಿವಿಚಾರಗಳನೊರೆವ
ಸುಗುಣವೀ ಯತಿಪಗೆ ನಿಸರ್ಗಮೆನಿಸಿರ್ದುದಿದನೆಲ್ಲರುಂ ಬಲ್ಲರೊಮ್ಮೆ
ನಿಗಮಾಂತಶಿವತತ್ತ್ವಗಳನು ಬಲ್ಲೋರ್ವ ಸ-
ಭ್ಯಗಣೇಂದ್ರನೋ ಮಹಿಮ ಗುರುಲಿಂಗಜಂಗಮರ
ಬಗೆಯನವರಗಲಿಕೆಯೊಳೆಸಗುವಾಚಾರಮಂ ಪೇಳ್ವುದೆಂದಡಿಗೆರಗಲು ॥ ೨೧ ॥

ಕೇಳು ಮಾಹೇಶ್ವರನೆ ಗುರುವರಂ ಕರುಣದಿಂ
ಪಾಲಿಸಂ ತನ್ನೊಂದೆ ಸೂತ್ರದವರಂ ಧರಿಸಿ-
ದೀ ಲಿಂಗವೇ ಧರಿಸಿದವನನೋರ್ವನ ಕಾಯ್ಪುದಮಲಜಂಗಮದೇವನು
ಲೀಲೆಯಿಂದೆಲ್ಲ ಸೂತ್ರದ ಜನಗಳಂ ಪೊರೆವ
ನಾಲೋಚಿಸಾದೊಡೀ ಗುರುಲಿಂಗಚರರೆಲ್ಲ
ಕಾಲದೊಳು ವೀರಶೈವಮತೀಯರೆಲ್ಲರಿಗವಶ್ಯಮನವಶ್ಯಮಲ್ಲ ॥ ೨೨ ॥

ಗುರುವಿರ್ದು ಚರವರ್ಯನಿಲ್ಲದೊಡೆ ಭಕ್ತನಾ
ಗುರುವಿನೊಳೆ ಜಂಗಮತ್ವವನೆ ಭಾವಿಸಿ ಬಿಡದೆ
ಚರಣತೀರ್ಥಪ್ರಸಾದಂಗಳಂ ಪಡೆಯಬೇಕಾಚಾರ್ಯಚರರೀರ್ವರು
ಇರುವಾಗ ಜಂಗಮಪದಾಂಬುಪ್ರಸಾದಗಳ-
ನುರೆ ಪಡೆಯಬೇಕು ಗುರುಚರರಿಲ್ಲದೊಡೆ ಗುರುಚ-
ರರನು ಲಿಂಗದೊಳು ಭಾವಿಸಿ ಲಿಂಗತೀರ್ಥಪ್ರಸಾದಗಳ ಪಡೆಯಬೇಕು ॥ ೨೩ ॥

ನಡತೆಗೆಟ್ಟಿರ್ಪ ಗುರುಜಂಗಮರ ತೀರ್ಥಮಂ
ಪಡೆವುದನುಚಿತವೆಂದು ಹಲಕೆಲವು ಪವಣಗಳು
ನುಡಿವುವಾದೊಡೆ ಸದಾಚಾರಸಂಪನ್ನರಾದಾಚಾರ್ಯಚರವರ್ಯರು
ಪುಡುಕಲೊದಗದುದರಿಂದೊರೆದ ಗುರುಚರರಿಂದ
ಪಡೆಯಬೇಕಾ ತೀರ್ಥಮವರದಲ್ಲಂ ತಿಳಿಯೆ
ಕಡುಪೂಜ್ಯರಾದಾದಿಗುರುಜಂಗಮರುದಿರ್ಪುದವನುಪೇಕ್ಷಿಸಲಾಗದು ॥ ೨೪ ॥

ಆದಿ ಗುರುಚರಪರಂಪರೆಯಿಂದ ಬಂದ ಸೌ-
ಖ್ಯೋದಯಮಹಾತೀರ್ಥದೊಳು ದೋಷಮಿಲ್ಲ ಜಡ-
ವಾದ ನಡತೆಯನಾಂತು ಬಾಳ್ವ ಗುರುಜಂಗಮರೊಳಿರಲಹುದು ದೋಷಗಳವು
ಪಾದತೀರ್ಥಪ್ರಸಾದಂಗಳಿಗೆ ಸಂಬಂಧ
ಮಾದಪವೆ ಪರಮಶಿವಭಕ್ತಂಗೆ ತೀರ್ಥಪ್ರ-
ಸಾದಗಳೆ ಫಲಮೆಂದು ಷಟ್ಸ್ಥಲಮಹಾಶಾಸ್ತ್ರಮೊಲೆದುಲಿಗುಮನವರತವು ॥ ೨೫ ॥

ಮನವರಿದ ವ್ಯಕ್ತಿಯೊಳು ಸಾಮರಸ್ಯವ ಮಾಳ್ಪ-
ದೆನುತುಲಿವ ಪವಣದಂತಾಚರಿಸುದೊಂದು ಪಥ-
ವನುರಾಗದಿಂದೆಲ್ಲರನುಮತಿಯೊಳಧಿಕಾರಮಂ ಪಡೆದಗುರುಚರರೊಳು
ವಿನುತಗುಣವಿಲ್ಲದೊಡೆ ತದ್ದೋಷಗಳನಿನಿಸು
ನೆನೆಯದೆ ತದಂಘ್ರಿತೀರ್ಥಪ್ರಸಾದವ ಸುಭಾ-
ವನೆಯಿಂದ ಸ್ವೀಕರಿಪುದೊಂದು ಪಥವಿವು ಸಾಧಕರ ಸಿದ್ಧರೊಪ್ಪುಗೆಗಳು ॥ ೨೬ ॥

ಪಡೆವವನ ಭಾವನೆಯೊಳುನ್ನತಾವನತಿಗಳ
ತೊಡಕಿರುವದಲ್ಲದಾ ತೀರ್ಥಪ್ರಸಾದದೊಳು
ಕೆಡುಕಿಲ್ಲ ಸರ್ವದಾಸುಜ್ಞಾನಸುಖಪೂರ್ಣವಾಗಿರ್ಪವಿವೆ ಫಲಗಳು
ಮೃಡನೊಲವೆನಿಪ್ಪ ಘನತೀರ್ಥಪ್ರಸಾದದೊಳು
ಕಡುನಂಬುಗೆಯ ಭಾವನೆಯನಿಟ್ಟು ಭಕ್ತಿಯಿಂ
ಬಿಡದೆ ಸ್ವೀಕರಿಸಬೇಕನವರತಮೆಂದು ನಿರವಿಸಿದನೀ ಶಿವಯೋಗಿಯು ॥ ೨೭ ॥

ಪರಶಿವನ ಪಂಚಮುಖದಶಭುಜತ್ವಾದಿ ಸುಂ-
ದರಮಹಾಸ್ಥೂಲ ರೂಪವನುಪಾಸಿಸುವದದು
ಪಿರಿದಲ್ಲ ಪರತರಾಖಂಡರೂಪವನು ಜಾನಿಪುದೆಮ್ಮ ಶಿವಮತಕೆ
ಸರಿಯಾದುದೆಂದು ಮೇಣಿಷ್ಟಲಿಂಗಂ ಸ್ಥೂಲ-
ತರರೂಪವಲ್ಲ ಪರಿಪೂರ್ಣಸಚ್ಚಿತ್ಸುಖಾ-
ಕರವಸ್ತುವೆಂದು ಬೋಧಿಸುತಿರ್ದನೀ ಧರ್ಮತತ್ವಜ್ಞನಾದ ಯತಿಯು ॥ ೨೮ ॥

ಮನುಜನ ವಯೋಮಾನದಿಂ ಭೋಗರೋಗಂಗ-
ಳನುಸರಣೆಯಿಂದ ಗುಣಕಾರ್ಯಂಗಳೇರಿಳಿತ-
ವನು ತಿಳಿವುದುಂಟೇ ಕುಮಾರೇಶನೆಲ್ಲವಸ್ಥೆಗಳೊಳೇರಿಳಿತಗಳಿಗೆ
ಅನುವನೀಯದೆ ಸಮಾಜೋನ್ನತಿಯ ಕ್ರಿಯೆಗಳಂ
ಕೊನೆಮುಟ್ಟುವನ್ನವೊಂದೇ ಬಗೆಯೊಳಿಂತೆಸಗಿ-
ದನವುಗಳನೆಣಿಸಲಸದಳವು ಬಣ್ಣಿಸಲವುಂ ಸಾಲ್ಗುಮೇ ಮೇದಿನಿಯೊಳು ॥ ೨೯ ॥

**ಅಂತು ಸಂಧಿ ೧೯ ಕ್ಕೆ ಪದಗಳು ೭೩೨ ಶುಭಂ**

-:- ಶ್ರೀ ಗುರುಬಸವಲಿಂಗಾಯ ನಮಃ -:-



# ಇಪ್ಪತ್ತನೆಯ ಸಂಧಿ ಪ್ರಾರಂಭ





**ಸೂಚನೆ:---**

ಪರಮಪ್ರಸಿದ್ಧತರ ಷಡ್ದರ್ಶನಂಗಳಂ
ಹರುಷದಿಂದೆಲ್ಲ ಶಿವಯೋಗಸಾಧಕಸಮಿತಿ
ಗರುಪಿದಂ ನಿಗಮಾಗಮಾನುಸಾರಂ ಕುಮಾರಂ ಯೋಗಮಂದಿರದೊಳು ||

ವರಪಂಚಭೂತಗಳು ಪಂಚತನ್ಮಾತ್ರಗಳು
ನೆರೆದೈದು ಕರ್ಮೇಂದ್ರಿಯಂಗಳುಂ ಪಂಚಭಾ-
ಸುರಚಿದಿಂದ್ರಿಯಗಳುಂ ಮಾನಸಾಹಂಕಾರ ಬುದ್ಧಿಗುಣ ರಾಗ ವಿದ್ಯೆ
ಸುರುಚಿರನಿಯತಿಕಲಾಕಾಲಪ್ರಕೃತಿಗಳುಂ
ಪುರುಷಮೀಶ್ವರಸದಾಶಿವಶಕ್ತಿಶಿವಗಳೆಂ-
ಬುರುತರದೊಳೆಸೆವ ಮೂವತ್ತಾರು ತತ್ತ್ವಗ್ರದೊಳ್ಪೊಳೆವ ಶಂಭು ಸಲಹು || ೧ ||

ಒಂದುದಿನವೆಮ್ಮೀ ಸಮಾಜಬಾಂಧವನೆಮ್ಮ
ತಂದೆಯೆಮ್ಮ ಕುಮಾರ ಶಿವಯೋಗಿಯೆಮ್ಮ ಯತಿ
ವೃಂದಸಮ್ರಾಟನೆಮ್ಮಯ ಸದಾಶಿವನಿರಾಭಾರಿಗುರುಶಾರ್ದೂಲನು
ಬಂದು ಶಿವಯೋಗಮಂದಿರಲತಾಮಂಟಪದೊ
ಳೊಂದಿರ್ದ ಸಕಲಶಿವಯೋಗಸಾಧಕರಿಗೊಲ-
ವಿಂದ ಕೆಲಮತತತ್ವಶಾಸ್ತ್ರಂಗಳಂ ಭೋಧಿಸಿವನು ನೆರೆ ತಿಳುಪಿಗಾಗಿ ॥ ೨ ॥

ಕೇಳಿರೈ ಸುಕೃತಿಗಳೆ ದರ್ಶನಗಳಂದಮಂ
ಪೇಳುವೆನು ಮನಮೊಡಂಬಡೆ ನಿಮಗೆ ನಿಗಮಾನು-
ಕೂಲನಾಗಿ ಪ್ರಮಾಣಪೂರ್ವಕಂ ತಿಳಿದದಂ ಮರೆಯದಿರಿ ಭಾರತದೊಳು
ಮೇಲೆನಿಸಿ ಮೆರೆದ ಹಿಂದಿನ ಜಾಣರೆಲ್ಲ ಒಹು
ಕಾಲದಿಂ ಮಾಡಿರುವ ವಿಖ್ಯಾತತತ್ವಪರಿ
ಶೀಲನವೆ ದರ್ಶನವೆನಿಪ್ಪಪೆಸರಿಂದೊಪ್ಪುತಿರ್ಪದತಿ ಮೇಲ್ಮೆವಡೆದು ॥ ೩ ॥

ಇನಿತು ಕಲ್ಪಿತವಲ್ಲದಿಹ ತತ್ವವೇ ವಸ್ತು
ವೆನಿಸಿರ್ಪದಾವಸ್ತು ಚಿತ್ರಗತಿಗಳಿಗಾಗಿ
ಮಿನುಗುವದು ವಸ್ತುವಿಚಾರವೇ ದರ್ಶನಗಳೆನಿಸಿರ್ಪುದು
ಘನತರದ ಷಡ್ದರ್ಶನಂಗಳಿರವಂ ನಿಮ್ಮ
ಮನವೊಡಂಬಡುವಂತೆ ಪೇಳುವೆನು ನಾನೀಗ-
ಳನಿತೆಲ್ಲ ದರುಶನಗಳಂದಮಂ ನೀವಿಂತು ಕೇಳಿ ಮನನಂಗೈವುದು ॥ ೪ ॥

ಪೂರ್ವಮೀಮಾಂಸೆಯುತ್ತರದಮೀಮಾಂಸೆ ಮೇಣ್
ತೋರ್ಪಯೋಗವು ನ್ಯಾಯಸಾಂಖ್ಯವೈಶೇಷಿಕವು
ಸಾರ್ವಜನಿಕೋಪಯುಕ್ತಗಳೆನಿಸಿ ಮೆರೆವಾರು ದರ್ಶನಂಗಳುಮಿರ್ಪವು
ಪೌರ್ವಾತ್ಯರಪ್ಪ ಜೈಮಿನಿಯು ವ್ಯಾಸಯತಿ ಮೇ-
ಣೋರ್ವನು ಪತಂಜಲಿಯು ಗೌತಮ ಕಣಾದಮುನಿ
ಸಾರ್ವಭೌಮರಿ ಪೇಳ್ದರಿವರಾರುಜನರು ಷಡ್ದರ್ಶನಗಳನ್ನು ಕ್ರಮದೆ ॥ ೫ ॥

ಆದಿವರ್ತನವು ಜ್ಯೋತಿಷ್ಟೋಮಯಾಗಾದಿ
ಭೇದಮಂ ತತ್ಕರಣವಿಧಿಯ ತತ್ಫಲಮನುರೆ
ಬೋಧಿಸುತೆ ಕರ್ಮಕಾಂಡಿಗಳಿಗನುಕೂಲಮೆನಿಸಿಕೆಯೊಳಗೆ ಮೆರೆವುತಿಹುದೈ
ವೈದವಿಸ್ತರಿಸಿದನಬ್ರಹ್ಮಸೂತ್ರಮುದು ಪ್ರತಿ-
ಪಾದಿಪುದು ಕೇವಲಾದ್ವೈತವನು ನ್ಯಾಯಮುದು
ವಾದಿಪುದು ಷೋಡಶಪದಾರ್ಥಮಂ ಜಗಕೀಶನೇ ಕರ್ತನೆಂಬುದನ್ನು ॥ ೬ ॥

ಸಾರವೈಶೇಷಿಕಂ ಸಪ್ತ ಸುಪದಾರ್ಥಮಂ
ಬೀರುತಂ ವಿಶ್ವಸ್ವರೂಪಮಂ ಬೋಧಿಪುದು-
ದಾರಯೋಗವು ಮನೋನಿಶ್ಚಲತೆಯಂಗೈದು ಪಕ್ವಾಂತರಂಗಜನಕೆ
ವಿರಿಪಮೃತಾನುಪನು ಸೌಖ್ಯಮಂ ಸಾರ್ಚ್ಚಗುಂ
ಚಾರು ಸಾಂಖ್ಯಮಸಂಗ ವಸ್ತುವಿನ ಸನ್ನಿಧಿಯ
ಸೇರಿ ತ್ರಿಗುಣಾತ್ಮಕಪ್ರಕೃತಿವಿಶ್ವದ ರಚನೆಯನು ಮಾಳ್ಗು ಮೆಂದೊರೆವುದು ॥ ೭ ॥

ಶೈವವೈಷ್ಣವಪಾಶುಪತವಾದಿಯಾದಾರು
ಭೂವಿನುತಮತಗಳಿಹವಾಮತೀಯರು ತಮ್ಮ
ದೈವಂಗಳಂ ಭಜಿಸುತಿಷ್ಟಸಿದ್ಧಿಯ ಪಡೆವರೆನಲಿಹುದು ಶಾಸ್ತ್ರವಿಂತು
ಶೈವಮತವೇಳುತೆರವಿಹುದಾವೆನಲನಾದಿ
ಶೈವವಾದಿಮಶೈವಮದು ಮಹಾಶೈವಮನು-
ಶೈವವಂತರಶೈವಮದುಮವಾಂತರಶೈವವಾ ಪ್ರವರಶೈವವೇಳು ॥ ೮ ॥

ಶ್ರೀ ಪರಾತ್ಪರ ಶಿವನೆ ತಾನನಾದಿಯಶೈವ-
ನಾಪರಮ ಶಿವನ ಮುಖಪಂಚಕದಿ ದೀಕ್ಷಿತರು
ತಾಪಸರು ಕೌಶಿಕಪ್ರಮುಖರಿವರಾದಿ ಶೈವರ್ಕಳೆಸೆದಿರ್ಪರವರು
ಆಪಾರಿಕಾಂಕ್ಷಿಗೋತ್ರಜರು ದೀಕ್ಷಿತರು ನಿ-
ಷ್ಪಾಪರಹ ದ್ವಿಜರೇ ಮಹಾಶೈವರಾಗಿಹರು
ಭೂಪವಿತ್ರಶಿವಸಂಸ್ಕಾರಸಂಯುತರು ಭುಜಭವರೆ ಅನುಶೈವರಹರು ॥ ೯ ॥

ಶಿವದೀಕ್ಷೆಯಿಲ್ಲದಂತರಶೈವರಹರವದು
ಶಿವದೀಕ್ಷೆಯುಳ್ಳ ವೈಶ್ಯರೆ ಆವಾಂತರಶೈವ-
ರವರು ಶಿವಸಂಸ್ಕಾರಿ ಶೂದ್ರಾದಿಗಳೆ ಪ್ರವರಶೈವರು ಪಿಚಾರಿಸೆ ಗಪಾ
ತವೆ ಶೈವಪದು ಪತ್ತೆ ಸಾಮಾನ್ಯ ಮಿಶ್ರ ಶು-
ದ್ಧವು ವೀರಶೈವವೀ ನಾಲ್ದೆರವದಾಗಿರ್ಪು-
ದವರೊಳಗವಾವನುರುಭಸ್ಮಧಾರಣದಿಂದ ಶುದ್ಧಾತ್ಮನಾಗಿಪವನು ‖ ೧೦‖

ಪ್ರಥಿತಸ್ವಯಂಭವದ ಲಿಂಗವಂ ಮೇಣು ದೇ-
ವತತಿ ಯಜಿಸಿದ ಲಿಂಗವನು ನೋಡಿ ಸಂಪೂಜಿ-
ಸುತೆ ಸಾರಶಿವಭಕ್ತಿಯುಕ್ತನೆನಿಸಿದನೆ ಸಾಮಾನ್ಯ ಶೈವನೆನಿಸುವನು
ಪೂತಪೀಠಸ್ಥಲಿಂಗದ ಪೂಜೆಯೊಡನೆ ಕಂ-
ಜಾತನಾಭನುಮೆಶಿಖಿವಾಹನಂ ಗಣಪತಿಯು
ಮಾತರಣಿಯೆಂಬೈಯ್ವರಂ ಯಜಿಸಿ ಶಿವಭಕ್ತರೆಂಗೆತ್ತು ಹರಿಮುಖ್ಯರಾ ‖ ೧೧ ‖

ಇಂತು ಸಮಭಕ್ತಿಯುಕ್ತನೆ ಮಿಶ್ರಶೈವನವ-
ನಂತಕಾಂತಕನಿಂದೆ ದೀಕ್ಷೆಯಾಂತಿರ್ಪಮುನಿ
ಸಂತತಿಯಸದ್ವಿಜನೆ ಗಡ ಶುದ್ಧಶೈವನೆಂದೆನಿಸುವನು ಪೂತಾತ್ಮನು
ಪಿಂತೆ ಶೈವ ಸ್ಮಾರ್ತಶಂಕರಾಚಾರ್ಯನೋ-
ರಂತೆ ತಾನದ್ವೈತವಿದ್ಯೆಯಂ ನಿಲಿಸಿದನು
ಮುಂತೆ ಮಧ್ವಾಚಾರ್ಯನೆಂಬ ಘನವೈಷ್ಣವಂ ದ್ವೈತಮಂ ಬೀರಿದನು ತಾಂ ‖ ೧೨ ‖

ಮತ್ತೆ ಶ್ರೀವಿಷ್ಣುವಂ ರಾಮಾನುಜಾಚಾರ್ಯ-
ನುತ್ತಮೋತ್ತಮವಿಶಿಷ್ಟಾದ್ವೈತ ತತ್ವಮಂ
ಬಿತ್ತರಿಸಿದನು ಬಳಿಕ್ಕುಳಿದ ಮತಗಳ ನಾಲ್ಕನುಸುರಿರ್ಪರಾಚಾರ್ಯರು
ಚಿತ್ತಗೊಟ್ಟಾಲಿಸಿರಿ ಮತ್ತೆ ಪೇಳ್ದಿನು ನಾನು
ವಿತ್ತಪತಿಸಖ ಶಿವನ ಮತವನ್ನು ಶಿವಯೋಗ
ಸತ್ತಮರು ತಿಳಿದೊಳಗೆ ಪೊರಗೆ ತಾವಾಚರಿಸಿ ಮುಕ್ತರಾದುದ ಪರಿಯನು ‖ ೧೩ ‖

ಶೈವಸಪ್ತಕದ ಮತ್ತದರ ಮೂರರನುವನು
ಶ್ರೀವಿರತಶಿವಯೋಗಿ ನಿಜಗುಣನು ಪೇಳ್ದಂತೆ
ಭಾವಿಸುತ್ತರುಪಿದೆನು ಸಾಧಕರೆ ನಾಲ್ಕನೆಯ ವೀರಶೈವದ ರೀತಿಯ
ಸಾವಧಾನದೊಳಿನ್ನು ಕೇಳಿರೈ ಶೈವವೇ
ಭೂವಿಶ್ರುತಾಚಾರಭೇದದಿಂ ಪರಿಣಮಿಸು-
ತಾ ವೀರಶಬ್ದಮಂ ತಾಳಿ ಮೆರೆವುಸು ವೀರಶೈವವೆಂದಭಿಧಾನದಿ ॥ ೧೪ ॥

ಈ ಮತದ ಸಂಭೂತಿಯಂ ಕೇಳಿರೈ ಪೇಳ್ವೆ
ಶ್ರೀ ಮಹಾಶಿವನಿಂದಲಾದುದೆಂತೆನೆ ಪೇಳ್ವೆ
ತಾಮರಸಜಾತಂಗೆ ಸೃಷ್ಟಿದೋರುವಮಿಷದಿ ಪಂಚಾನನಂಗಳಿಂದೆ
ಶ್ರೀಮಹೇಶನು ಪ್ರಮಥರುತ್ಪತ್ತಿಯಂ ಮಾಡೆ
ನಾಮವಾಯ್ತದಕೂರ್ಧ್ವಸೃಷ್ಟಿಯೆಂದಾ ಬಳಿಕ
ತಾ ಮಾಡಲಾ ಬ್ರಹ್ಮನದಕಧಃಸೃಷ್ಟಿಯಭಿಧಾನವದು ಸಂಭವಿಸಿತು ॥ ೧೫ ॥

ಶಿವನಿಂದೆ ಪುಟ್ಟಿಸ್ವಕತದಿಂದ ಶ್ರೀವೀರ
ಶೈವವದು ಶ್ರೇಷ್ಠತರವೆನಿಸಿರುವುದೆಲ್ಲದೊಳ-
ಗವಿತಥಂ ಕೇಳಿರಿದರಂದವಹ ಲಕ್ಷಣವ ಮೂವಿಧದ ದೀಕ್ಷೆಯಿಂದೆ
ಭವಿಯುಮಾಭಕ್ತಮಣಿಯಾಗೆ ಮುನ್ನಿನ ಕುಲವು
ತವೆಯುಳಿದು ಶಿವಕುಲವದುಂಟೆನಿಕುಮಾತನುಂ
ಶಿವಲಿಂಗವದು ಪ್ರಾಣವೆಂದರಿದು ವರ್ತಿಪುದು ವೀರಶೈವದ ಲಕ್ಷಣ ॥ ೧೬ ॥

ಶಿವಲಿಂಗವದು ಪ್ರಾಣವೆನಿಸಲದನರೆಗಳಿಗೆ-
ಯವಿರತಂ ಬಿಡದಂತೆ ಧರಿಸಿಕೊಂಡರ್ಚನೆಯ-
ನವಧಾನದಿಂ ಗೈದು ತದ್ಭೋಗಭೋಗವನ್ನು
ಸವಿವುತಂ ಶಿವನಿಂದೆಯಂ ಪರಮಶಿವಶರಣ-
ರವಧೀರಣೆಯ ಲಿಂಗಜಂಗಮರ ಕುತ್ಸೆಯಂ
ಕಿವಿಯಿಂದೆ ಕೇಳದಿರ್ಪುದೆ ವೀರಶೈವಮತಲಕ್ಷಣವಿದೆಂದರಿಯಿರೈ ॥ ೧೭ ॥

ಇಂತು ಘನಲಕ್ಷಣಾಂಕಿತ ವೀರಶೈವತ-
ತ್ವಾಂತರಂಗಮನಂತಕಾರಿಯಾಗಮುಗಳಿಂ
ಮುಂತರುಹಿದುದನಗಸ್ತ್ಯನಿಗರುಹಿದನು ರೇಣುಕಾಚಾರ್ಯನವತಾರಿಯು
ಸಂತರಲ್ಲಮ ಬಸವಮೊದಲಾದ ಸನ್ಮಹಿಮ-
ವಂತರಾದೊಡುಮದನೆ ನಡಿದು ನಡೆದರು ಸದಾ-
ನಂತರನ್ಯರು ಬಾಲಲೀಲೆಯ-ಮಹಾಂತೇಶ ಮುಪ್ಪಿನಷಡಕ್ಷರಾರ್ಯ ॥ ೧೮ ॥

ವೈಲಾರಬಸವಲಿಂಗಾಖ್ಯಶರಣರು ವೇಣು
ಮೇಲಾಗಿ ಮೆರೆಯುವಾಘುನಿಕರಪ್ಪಘಣಿ ಬಿದ-
ರೀ ಲೋಲಶಿವಯೋಗಿಶೇಖರರು ಮುಂತಾಗಿ ಹಲವರಾಚರಿಸುತಿಹರು
ಶ್ರೀಲವಹ ವೀರಶೈವದೊಳಂಗಲಿಂಗಸ್ಥ-
ಲಾಳಿಯೆಸೆದಿರ್ಪವಾವೆನಲು ನಿಷ್ಮಯ ತಿಳುಪಿ-
ಗಾಲಯುಗಳೆನಿಪ ಭಕ್ತ್ಯಾದಿಯೈಕ್ಯಾಂತಮಾದಾರಂಗಗಳು ಕೇಳ್ದೈ ॥ ೧೯ ॥

ಕಂಗೊಳಿಸುವಾಚಾರಲಿಂಗ ಗುರುಲಿಂಗ ಶಿವ
ಲಿಂಗ ಜಂಗಮಲಿಂಗ ತತ್ಪ್ರಸಾದ ಸುಲಿಂಗ
ಮಂಗಲ ಮಹಾಲಿಂಗವೆಂದಿಂತು ಲಿಂಗಂಗಳಾರುಂಟು ಶಾಸ್ತ್ರದೊಳಗೆ
ಪಿಂಗದೀ ಅಂಗಲಿಂಗಗಳಿಂಗಿತವನರಿದು
ಭಂಗಮಯಭವಗಳೆವ ಲಿಂಗಾಂಗ ಸಮರಸವ-
ನಂಗವಿಸಿ ಸಂಗಳಿಸಿ ಶಿವಶರಣಜನವೆಲ್ಲ ಮುಕ್ತವಾದುದು ತಿಳಿಯಿರ್ದೈ ॥ ೨೦ ॥

ಸಮಾಸ್ಯವು ವಿಶೇಷವನುಪಮನಿರಾಭಾರಿ
ನೇಮದಿಂ ಮೂರು ತೆರವೀ ವೀರಶೈವವದು
ಭೂಮಿಯೊಳಗಪ್ರತಿಮವತ್ಯಧಿಕವೈ ಸತ್ಯಸತ್ಯವೈ ಶಿವವಚನವು
ಪ್ರೇಮಿಸದ್ಗುರು ತನ್ನ ಕರವ ಮಸ್ತಕಮುಪರಿ
ಪ್ರೇಮದಿಂದಿರಿಸೆ ಪಾವನಭಸಿತಪಟ್ಟದಿಂ-
ದಾ ಮಂತ್ರದುಪದೇಶದಿಂ ಲಿಂಗಸಂಗಿಯಾಗುತ್ತೆ ಷಟ್ಸ್ಥಾನಗಳೊಳು ॥ ೨೧ ॥

ಶಿವಲಿಂಗಮಂ ಧರಿಸಿ ತಾನೇಕಕಾಲದೊಳ-
ಗವಿರತಂ ತ್ರೈಕಾಲದೊಳಗಾಗಲಾವನಾ
ಪ್ರವಿಮಲಿನಲಿಂಗಾರ್ಚನಾಸಕ್ತನಾಗುತ್ತೆ ಗುರು ಲಿಂಗ ಭಸ್ಮಗಳೊಳು
ತವೆ ಭಕ್ತನೆಂದೆನಿಸಿ ಕಂಗೊಳಿಪನವನೆ ಗಡ
ಭುವಿಯೊಳಗೆ ಸಾಮಾನ್ಯವೀರಶೈವನು ತಾನು
ನವಕೀರ್ತಿಯುತನಾಗಿ ಭವಭೀತಿಯುತನಾಗಿ ವರ್ತಿಪನು ಜಗದೊಳವನು ॥ ೨೨ ॥

ಚಾರುತರಷಟ್ಸ್ಥಲದ ಭೇದೋಪಭೇದಮಂ
ಸಾರೆಯಾಗುವ ತೆರದೊಳಾಶೈವತಂತರದಿ
ನೂರೊಂದುಸ್ಥಳಕುಳದ ಮರ್ಮವರಿದಾಚರಿಸಿ ಲಿಂಗಾಂಗಸಮರತಿಯ-
ಪಾರಗಂಡು ವಿಚಾರಮುಖದಿಂದ ಗುರುಲಿಂಗ
ಸಾರಜಂಗಮರಿಗಾ ತನುಮನೋಧನಗಳನು
ವಾರಿ ವಂಚಿಸದೀವನಾವನವನೆ ವಿಶೇಷವೀರಶೈವನು ಧರೆಯೊಳು ॥ ೨೩ ॥

ಪೊರಗೆ ಮನೆಮಾರು ಸತಿಮಕ್ಕಳಂಗಳ ತೊಡರ
ಹರಿವವರೊಳಿನಿಸಾನುಮನುರಾಗವಿಡಿಯದಲೆ
ಪರಿಕಿಸಲು ಸದ್ವಿದ್ಯೆಯೇ ಮಡದಿ ಸಂತಸವೆ ಸುತನು ಘನಭಕ್ತಿ ಮಾತೆ
ವಿರತಿಯೇ ಸದ್ಬಂಧು ಕ್ಷಮೆಯೆ ಪರಿಚಾರಕನು
ಪರಶಾಂತಿಯೇ ಸಖ ಸುಮಾಚಾರವೇ ಪಿತನು
ನಿರುತಸಾಪತ್ಯವೇ ಪುತ್ರಿ ಶ್ರದ್ಧೆಯೇ ಸೊಸೆಯು ಮೈತ್ರ್ಯಾದಿಗಳೆ ಪೌತ್ರರು ॥ ೨೪ ॥

ಜ್ಞಾನವೇ ಗೇಹವು ವಿಚಾರವೇ ಕ್ಷೇತ್ರವದು
ನ್ಯೂನವಾಗದಹಿಂಸೆ ದಾಸಿಯಸ್ತೇಯ ದಾ-
ಸಾನುದಾಸನು ಧರ್ಮವೇ ಯಾನಮುದದಮವೆ ಆಚಾರ್ಯನಂತಲ್ಲದೆ
ಘನಮುಕ್ತಿಯೇ ದೇಶವೆಂಬಿಂತು ಪರಮಾರ್ಥ
ದನುಪಮಕುಟುಂಬದೊಡವೆರೆದು ಮತ್ತಂ ಕೇಳಿ-
ರನುದಿನವು ಕಂಥೆ ದಂಡವು ಕಮಂಡುಲುವದಂ ಕರಗೊಳಗೆ ಶೋಭಿಸಿರುವ ॥ ೨೫ ॥

ಪಾಣಿ ಪಾತ್ರಂ ಭಸ್ಮ ಘುಟಿಕೆ ಮುದ್ರೆಗಳ್ಗೆದ-
ನೂಹೆಯಿಲ್ಲದೆ ಪೊರಗಣಂಗದೊಳು ಧರಿಸುತ್ತೆ
ಮಾಣದತಿಸಮತೆಯೇ ಕಂಥೆ ಸದ್ಜ್ಞಾನವೇ ದಂಡವು ಕಮಂಡಲು ದಯೆ
ಮೇಣು ವಿರತಿಯೆ ಪಾತ್ರ ಕ್ಷಮೆಯೆ ಭಸ್ಮದಘುಟಿಕೆ
ಪ್ರಾಣವೆಂದಿವನೊಳಗೆ ಧರಿಸಿ ಜ್ಞಾನಕ್ರಿಯೆಗೆ
ತಾಣನಾಗುತೆ ಭೈಕ್ಷ್ಯವೃತ್ತಿಯುಳ್ಳವನಾಗಿ ಲಿಂಗಾರ್ಚನೆಯಂ ಗೈವುತೆ ॥ ೩೬ ॥

ಮಿಕ್ಕಿರುವ ವಿಷಯಮಂ ವಿಷಮೆಂದು ತಿಳಿದು ಭವ
ದುಃಖವಿಪಿನದ ಲೋಭಜಂ ಬಾಲಮಂ ಪುಗದೆ
ಸೊಕ್ಕಿದಿಂದ್ರಿಯ ವೈರಿವರ್ಗಮಂ ಲೆಕ್ಕಿಸದೆ ಮೋಹಭೂತಕ್ಕಳ್ಕದೆ
ಉಕ್ಕಿಬಹ ಮುಳಿಸೆಂಬ ಪುಲಿಗೆ ಸಿಕ್ಕದೆ ಮತ್ತೆ
ಚಿಕ್ಕಹರೆ ಮಮಕಾರವೆಂಬ ಸರ್ಪವ ಸದೆದು
ನ್ಯಕ್ಕರಿಪ ಮದನತಸ್ಕರನಿಗೊಳಗಾಗದತಿವ ದತಿಮಿರದೊಳು ಬೀಳದೆ ॥ ೩೭ ॥

ಝೋಂಕಿಸುವಹಂಕಾರ ಹುಂಕೃತಿಗೆ ಕಂಗೆಡದೆ
ಸೋಂಕಲಡರುವಸೂಯೆಯೆಂಬ ಲತೆಯಂಟದಲೆ
ಭೋಂಕನೀ ಪರಿತಾನು ಸರ್ವಾವಧಾನದಿಂ ಬಾಹ್ಯಾವಲಂಬವಿರದೆ
ಓಂಕಾರರೂಪವಹ ಜಂಗಮಸ್ಥಲಕೆ ಸದ-
ಲಂಕಾರನಾಗಿರ್ಪನಾವನವನೇ ನಿರಾ-
ತಂಕನು ನಿರಾಭಾರಿವೀರಶೈವನು ನೀವು ಸಾಧಕರೆ ಬಗೆಗೊಳ್ಳಿರೈ ॥ ೩೮ ॥

ಇಂತು ಷಡುದರುಶನಗಳಂ ಮತ್ತೆ ಷಣ್ಮತಗ-
ಳಂ ತಿಳುಹಿ ಮೂದೆರದ ವೀರಶೈವದ ಭೇದ-
ಮಂತೋರಿದೆನು ನಿಮಗೆ ಮನವರಿಕೆಯಾಗುವಂತಿನ್ನು ಸಾಧಕರೆ ಕೇಳಿ
ಚಿಂತನಂಗೈವುತಾಚರಿಸಿದಡೆ ನಿಮಗದೋ
ರಂತೆ ಸಿದ್ಧಿಪುದು ಶಿವಯೋಗದುರುಸುಖವು ದಿಟ-
ವಂತರದೊಳನುಭವಿಗಳಾದಡತಿಧನ್ಯರ್ಕೈ ನೀವೇತಕೆನಲುಸುರುವೆಂ ॥ ೩೯ ॥

ಗುರು ಲಿಂಗ ಜಂಗಮ ವಿಭೂತಿ ರುದ್ರಾಕ್ಷ ಪದ-
ವಾರಿ ಪ್ರಸಾದ ಮಂತ್ರಗಳೆಂಬವೆಂಟರಾ
ವರಣವಂಗವದಾಗೆ ಸಾರಪಂಚಾಚಾರವೇ ಪ್ರಾಣವಾಗಿರುತಿರೆ-
ಪರಮಲಿಂಗಾಂಗದನುಭವರಿದು ಭವಭಯದೊರೆದು
ಸರಸಲಿಂಗಾನಂದ ಸಾಮ್ರಾಜ್ಯವಾಳುವನೆ
ಧರೆಯೊಳವತಾರಿ ಸುಖಕಾರಿಯುಪಕಾರಿ ಭವಹಾರಿ ಚರಮಶರೀರಿಯು ॥ ೩೦ ॥

ಭವಪಾಶಮಂ ಪರಿದು ಪ್ರಕೃತಿಕಾರ್ಯವತರಿದು
ಜವದಿ ಮೋಹವ ಕಳೆದು ಭ್ರಾಂತಿಯಂ ನೆರೆಸೆಳೆದು
ತವೆ ಶಾಂತಿಸಂಪದವನಾಗಿಸುವ ಚಿರಸೌಖ್ಯಸಂಪತ್ತಿಯಂ ನೀಡುವ
ಶಿವನು ಮೊದಲವನಿ ಕಡೆಯಾದ ಮೂವತ್ತಾರೆ-
ಸೆವ ತತ್ವಗಳು ವೀರಶೈವರೊಳಗುಂಟವನೆ
ವಿವರಿಸುವೆನಾಂ ನಿಮಗೆ ಸದನುಭವದುದಯಕ್ಕೆ ಲಿಂಗಾಂಗಸಮರಸತೆಗೆ ॥ ೩೧ ॥

ಮತ್ತಮೈವತ್ತೊಂದು ಶುದ್ಧಗೆ ಯುವಾರ್ಣಾಧ್ವ
ಉತ್ತಮಶಿವಾಯನಮ ಆದಿಯು ಪದಾಧ್ವವೆಂ
ಭತ್ತೊಂಮ ಹೃದಯಾಯನಮ ಆದಿಹನ್ನೊಂದು ಮಂತ್ರಾಧ್ವವೆಂದರಿಯಿಕ್ಕೆ
ಚಿತ್ತಗೊಡಿ ಶಿವಮೊದಲು ಭೂಮಿಕಡೆಯಾದಮೂ-
ವತ್ತಾರು ತತ್ವಾಧ್ವ ಕಾಲಾಗ್ನಿಮೊದಲನೇ-
ಕತ್ವಮದು ಭುವನಾಧ್ವವಾನಿವೃತ್ತ್ಯಾದಿಪಂಚಕವೆ ಅದು ಸುಕಲಾಧ್ವವು ॥ ೩೨ ॥

ಈ ರೀತಿಯಿಂ ಮೆರೆಸುವಾರಧ್ವಗಳೊಳು ತಾಂ
ರಾರಾಜಿಸುತ್ತಿ ತತ್ವಾಧ್ವಮಿರುತಿಹುದದರು-
ದಾರವಹಶಿವನು ಮೊದಲವನಿಕಡೆಯಾದ ಮೂವತ್ತಾರು ತತ್ವಗಳಿವೆ
ವೀರಶೈವಾಚಾರವುರುಶಿವಾಗಮಸಾರ
ಪಾರಮಾರ್ಥದ ಮೆಟ್ಟುವಚನಂಗಳೆದೆಗುಟ್ಟು
ಧೀರಶರಣರ ಸತ್ವವಿವು ಬಗೆಯೆ ಪರತತ್ವಮಾರ್ಗವೆನಿಸೆಸೆದಿಪ್ಪುವು ॥ ೩೩ ॥

ಎಂತೆನಲ್ಕುಸುರುವೆಂ ಸಾಧಕರೆ ಕೇಳಿರೈ
ಎಂತುಮ ಶಿವಜ್ಞಾನಮಿರಲು ವಿಷ್ಣ್ವಾದಿಗಳ
ಸಂತತಿಯು ಮಾಯಾದಿಪಾಶಬದ್ಧವದಾಗಿ ಪಶುವೆನಿಸಿಕೊಂಡಿಪ್ಪುದು
ಇಂತು ಪಶುತಾಪಾಶಮೋಚನವೆದಂತೆನಲ-
ನಂತರಿಗೆ ಪತಿಯಪ್ಪ ಪಶುಪತಿಯಸುಜ್ಞಾನ
ವಂತರದೊಳಿರೆ ಪಾಶಪಶುಭಾವಮೋಚನವು ತಾನಪ್ಪುದವನುಸುರುವೆಂ ॥ ೩೪ ॥

ಸತ್ವದ ಶಿವಜ್ಞಾನದಾಪ್ತಿ ಮೂವತ್ತಾರು
ತತ್ವಗಳ ಸಂಶೋಧದಿಂದಹುದೆನಲ್ಕದನೆ
ಸತ್ವರಂ ನಿಮಗುಸುರ್ವೆನುರುಯೋಗಸಾಧಕರೆ ಶಿವತತ್ವಪರಿಶೀಲರೆ
ತತ್ವಸಂಕಲದಿಂದೆ ಬ್ರಹ್ಮಾಂಡಸಂಹತಿವಿ-
ಸ್ತೃತ್ವರವದೆನಿಸುದಿಸಿ ಬಾಳಿ ಲಯಿಸುಗುಮದಾ-
ತತ್ವಚಯ ಭೇದಮಂ ನಿಮಗರುಪಲಿಷ್ಟಾರ್ಥ ಪರ್ಯಾಪ್ತಿಯಾದಪ್ಪುದು ॥ ೩೫ ॥

ಪಾಶತ್ರಯಾನ್ವಿತರು ಸಕಲರೆನಿಸಿಪ್ಪರೈ
ಪಾಶಯುಗಸಂಕಲಿತರವರೆ ಪ್ರಳಯಾಕಲರು
ಪಾಶೈಕಯುತರವರವರೆ ವಿಜ್ಞಾನಕೇವಲರು ಮೂವಿಧದ ಮೂವರಿವರು
ಪಾಶಗಳೆಯಲು ಸಾಧಿಕರಣ ಸುಸ್ಥಿತಿಕರಣ-
ದಾ ಶಿವನದೀಕ್ಷೆಯಿಂ ಪರಿವಿಡಿದು ಸರ್ವರು ಸ
ದಾಶಿವನ ಸವಿಕಲ್ಪ ನಿರ್ವಿಕಲ್ಪಕದ ಘನಸಾರೂಪ್ಯವಡೆವರವರು ॥ ೩೬ ॥

ಶಿವನು ಶಕ್ತಿಯು ಸದಾಶಿವನೀಶ್ವರನು ವಿದ್ಯೆ
ಯಿವುವೈದು ತತ್ವಗಳು ಬಿಂದುಮಯಶುದ್ಧಾಧ್ವ
ವವಿಕಲದ ವಿಜ್ಞಾನಕೇವಲಾತ್ಮತನುಭೋಗ ಸಾಧನಗಳಹವು
ತವೆ ಕಾಲ ನಿಯತಿ ಕಲೆ ವಿದ್ಯೆ ರಾಗವು ಪುರುಷ-
ನಿವು ಪ್ರಕೃತಿವೆರಸೇಳು ತತ್ವಗಳು ಮಿಶ್ರಾಧ್ವ
ಭವನಂಗಳಾಗಿ ತತ್ಪ್ರಳಯಾ ಕಲಾತ್ಮರ್ಗೆ ಕರಣಾದಿಭೋಗದಗಳು ॥ ೩೭ ॥

ಗುಣ ಬುದ್ಧ್ಯಹಂಕಾರ ಚಿತ್ತ ಕರ್ಣ ತ್ವಚಾ
ಘ್ರಾಣ ಜಿಹ್ವಾಕ್ಷಿ ವಾಕ್ ಪಾದ ಪಾಯೂಪಸ್ಥ
ಪಾಣಿ ಶಬ್ದ ಸ್ಪರ್ಶ ರೂಪ ರಸ ಗಂಧಾಭ್ರವಾಯ್ವಗ್ನಿ ಜಲಭೂಗಳು
ಪ್ರಾಣದಾ ಪ್ರಕೃತಿಕಾರ್ಯಂಗಳಿಪ್ಪತ್ತುನಾ
ಲ್ಕೂಣೆಯಿರದಿಪ್ಪ ಶುದ್ಧಾಧ್ವತತ್ವಂಗಳುಂ
ಪ್ರಾಣನೆಂದೆನಿಸಿ ಸಕಲಾತ್ಮರ್ಗೆ ಭುವನಾದಿ ಭೋಗಸಾಧನಗಳಹವು ॥ ೩೮ ॥

ಶೈವಾಗಮಂಗಳೊಳು ವಿಸ್ತರಿಸಿ ಪೇಳ್ದರಾ
ಜೀವಜಾಂಡಗಳ ಶತಕೋಟಿಗಾಲಯಮಾದ
ಜೀವರ್ಗೆ ಘನಭುಕ್ತಿಮುಕ್ತಿಯಂ ಕೊಡುವ ಮೂವತ್ತಾರುತತ್ವಗಳಿವು
ನೀವಿಂತು ತತ್ವಗಳ ಘನರಹಸ್ಯವ ತಿಳಿದು
ತವಿಸುತಿಹ ದುರ್ಮಲದ ಮಾಯೆಯ ಕುಕರ್ಮದುರಿ
ವಿವಿಧತಾಪಂಗಳಿವ ಲಿಂಗಾಂಗತತ್ವದಾನೆಲೆಗಂಡು ಸುಖದೊಳಿಹುದು ॥ ೩೯ ॥

ಅದು ನಿಮಿತ್ತಂ ನೀವು ಮನದೊಳು ವಿಚಾರಿಸಿದ
ಡಿದಕೆ ಶಿವಯೋಗಮಂದಿರವೆಂಬ ಪೆಸರಿದಕೆ
ಸದುಹೃದಯರಪ್ಪ ಸಾಮಾಜಿಕರ ಸಾಹಾಯ್ಯವದರಿಂದ ಸಾಧಕರಿಗಾ
ಇದರಲ್ಲಿ ವಾಸಿಪಭ್ಯಸಿಪ ನೀವೆಲ್ಲರಾ
ಸದಮಲದ ಶಿವಯೋಗಸೌಖ್ಯಸಾಧನದಿ ಬ-
ಲ್ಲಿದರಾದದಾಗ ಸಾಮಾಜಿಕರ ಋಣ ಪೋಪುದಿದು ಸತ್ಯಮಿದು ಸತ್ಯವು ॥ ೪೦ ॥

ಆವ ಸ್ಥಳದೊಳಿರುವೊ ಶಿವಯೋಗಸನ್ಮಂದಿ-
ರಾವಸಥನೊಳಗಿರ್ದು ಶಿವಯೋಗಸಾಧನವ
ನೀವೆಲ್ಲರೆಸಗಿರ್ಪಿರದರಿಂದೆ ಶಿವಯೋಗಸಾಮ್ರಾಜ್ಯದಾ ಸೌಖ್ಯವು
ಕೈವಿಡಿವುತಿರಲು ನೀವೆಲ್ಲರೀ ಜನ್ಮದೊಳು
ಕೈವಲ್ಯಮಂ ಪಡೆಯುವಿರಿ ನೀವುಮಿಂತಲ್ಲ-
ದೀ ವಸುಧೆಯೊಳು ನಿಮ್ಮ ಕುಲಕೋಟಿಯುದ್ಧೃತವದಪ್ಪುದಿದು ಸತ್ಯವೈಸೆ ॥ ೪೧ ॥

ಈ ವಿಧದಿ ಬೋಧಿಸಿದ ಗುರುಕುಮಾರೇಶನಡಿ
ದಾವರೆಗೆ ಸೈಗೆಡೆದು ಸಾಧಕರ ವರ್ಗವದು
ಸಾವಧಾನದೊಳಂದು ಬಿನ್ನೈಸಿದುದು ತಾನು ಚಿನ್ನಿಧಿಯ ಸನ್ನಿಧಿಯೊಳು
ಈ ವಿಶ್ವಕುಪಕಾರಿಯಪ್ಪ ನಿಮ್ಮಂತಪ್ಪ
ಭೂವಿಶ್ರುತವ ಬೋಧದಿಂದೆಲ್ಲರೀ ನಾವು
ಪಾವನರು ವರಭಾಗ್ಯಜೀವನರುಮಾದೆವೈ ಜಂಗಮಕುಲೋತ್ತಂಸನೆ ॥ ೪೩ ॥

ಎಂದು ಮನಬಂದಪರಿಯಂದ್ದದೊಳು ಸಾಧಕರ
ವೃಂದಮದು ಬಣ್ಣಿಸುತೆ ಗುರುವಿನಾಣತಿ ಪಡೆದು
ಸಂದಿಹುದು ತಂತಮ್ಮ ಕಾರ್ಯದೊಳಗಾ ಬಳಿಕ ಚರವರ ಕುಮಾರೇಶರು
ಎಂದಿನಂದದಿ ಲಿಂಗಪೂಜೆಯೊಳು ಮನನಟ್ಟು
ಮಂದಿರದ ಸತ್‌ಕಾರ್ಯಕೆದೆಗೊಟ್ಟು ಬದಿಗಿಟ್ಟು
ಬಂಧ್ಧಿತಥ ಕಾರ್ಯಮಂ ನಿಂದು ಕಾಲಂಗಳೆವುತಿರ್ದರಾ ಮಹಿಮರಿಂತು ॥ ೪೪ ॥

ಅಂತು ಸಂಧಿ ೨೦ ಕ್ಕೆ ಪದಗಳು ೫೪

ಶಿವಂ



## ಇಪ್ಪತ್ತೊಂದನೆಯ ಸಂಧಿ ಪ್ರಾರಂಭ



ಸೂಚನೆ--

ಶಿವಯೋಗ ಮಂದಿರದ ನವಲತಾಮಂಟಪದೆ
ಶಿವಯೋಗಿ ಗುರುಕುಮಾರಂ ಮುದದಿ ಕುಳ್ಳಿರ್ದು
ಶಿವಯೋಗ ಸಾಧಕರಿಗರುಪಿದಂ ಶಿವಯೋಗತತ್ವಮಂ ಕರುಣೆಯಿಂದ ||

ನೆಲನೀರುಬೆಂಕಿಗಳ್ ಗಾಳಿಯಾಗಸವಾತ್ಮ
ಮಲಘುರವಿಚಂದ್ರಮರ್ ತನುಗಳೆಂದುಲಿವ ಶ್ರುತಿ
ಕುಲದ ವಚನವ ಕೇಳ್ದು ಶೋಧಿಸಲ್ ತೊಡಗಿರುವೆನರಿಕೆಯಾಗದು ಶಂಕರಾ
ನಲಿದು ನಿನ್ನಯ ರೂಪದರಿವನೆನಗಿತ್ತು ನೀ-
ನೊಲಿದು ಕರುಣಿಸು ದೇವ ಗುರುವಾಗಿ ಬಂದೆನ್ನ
ಕಲುಷಿತಾಜ್ಞಾನಮಂ ಪರಿಹರಿಸಿ ಕಾವುದೈ ಭಕ್ತಬಂಧು ಮಹೇಶ್ವರಾ ||೧||

ಒಂದು ದಿನದೊಳ್ ಗುರುಕುಮಾರಯೋಗಿಯು ಮೋದ-
ದಿಂದೆ ಕುಳ್ಳಿರ್ದುರು ಲತಾಮಂಟಪದೊಳಲ್ಲಿ
ಚಂದದಿಂ ನೆರೆದಿರ್ದ ಶಿವಯೋಗಸಾಧಕರ ನೋಡಿ ಬೋಧಿಸಿದನಿಂತು
ಇಂದಿನ ಶಿವಾನುಭವದಲ್ಲಿ ಸಾಧಕರೆ ನೀ-
ವಂದಮೆನೆ ತಿಳಿಯಿರ್ಕೈ ಶಿವಯೋಗ ತತ್ವಮಂ
ಸುಂದರಮೆನಲ್ ಪೇಳ್ದನಾ ನಿಜಗುಣಂ ನಿಮಗೆ ಪೇಳ್ವೆನಾನೀಗಳದನೆ ॥ ೨ ॥

ಶಿವಯೋಗತತ್ವಮಂ ತಿಳಿಯಬೇಕಾದಡಾ-
ತವೆಯೋಗಶಾಸ್ತ್ರಮಂ ನೀವು ತಿಳಿಯಲ್ ವೇಳ್ಕು
ಕವಿ ಪೇಳ್ವನಾಯೋಗ ಶಬ್ದಕರ್ಥವ ಚಿತ್ತ ವೃತ್ತಿಯ ನಿರೋಧವೆಂದು
ಅವನೆ ಹಠಯೋಗ ಮಂತ್ರಸುಯೋಗ ಲಯಯೋಗ
ಭುವನನುತ ರಾಜಯೋಗೋರು ಶಿವಯೋಗಂಗ-
ಳಿವು ಯೋಗ ಭೇದಂಗಳೆಂದೊರೆದಿದನರಿಯಿರ್ಕೈ ವಿವರಿಪೆಂ ಸಂಕ್ಷೇಪದೆ ॥ ೩ ॥

ಹಠಯೋಗಮಷ್ಟಾಂಗರೀತಿಯಂ ಪಿಡಿದಿಹುದು
ಕಠಿಣ ಜಪವಿಧಿಯನೈದಿಹುದು ಮನುಯೋಗಮದು
ಮಠಘಟಾಶೆಯನುಳಿದು ಬಿಂದುನಾದಗಳಲ್ಲಿ ಬೆರೆಯೆ ಲಯಯೋಗಮಹುದು
ಪಟುತರ ಜ್ಞಾನದಿಂ ಬ್ರಹ್ಮದೊಳ್ ಬೆರೆಯುತಾ
ಸ್ಫುಟರಾಜಯೋಗಮಿಹುದಿನ್ನೊರೆವೆನರಿಯಿರ್ಕೈ
ದಿಟದೆ ಶಿವಯೋಗಮಂ ತಿಳಿದು ನೀವಾಚರಿಸಿ ಮುಕ್ತಿಭಾಜನರಾಗಿರ್ಕೈ ॥ ೪ ॥

ಶಿವಪೂಜನಂ ಶಿವಜ್ಞಾನಂ ಶಿವವ್ರತಂ
ಶಿವಭಕ್ತಿಯುಂ ಪರಶಿವಾನುಸಂಧಾನಮುಂ
ತವೆ ತನುಮನೋಭಾವದೊಳ್ನೆಲಿಸೆ ಶಿವಯೋಗಮಹುದು ಸಾಧ್ಯಂ ಧರಣಿಯೊಳ್
ಇವುಗಳೊಂದೊಂದರೊಳಗುಂಟು ಹಠಮುಖ್ಯ ಯೋ-
ಗವಿಭವವ ಕೊಡುವ ಸಾಮರ್ಥ್ಯಮದರಿಂದೆ ನೀ-
ವವಿರತಂ ಸಾಧಿಸಿರಿ ಶಿವಯೋಗಮಂ ಬಿಡದೆ ದೊರೆವುದಿಚ್ಛಿತ ಸಿದ್ಧಿಯು ॥ ೫ ॥

ಇಷ್ಟಸಂಪಾದನಕೆ ಶಿವಪೂಜೆಯೇ ಮಾರ್ಗ
ಮಿಷ್ಟಲಿಂಗಂ ಶಿವನ ಸಾಕಾರಮಾಗಿಹುದು
ಸ್ಪಷ್ಟಮಿದು ಲಿಂಗಪೂಜೆಯೆ ಶಿವನ ಪೂಜೆಯಾಲಿಂಗಕಳೆ ತಾನೆಂಬುದೇ
ಶಿಷ್ಟರೊಪ್ಪುವ ಶಿವಜ್ಞಾನಮಿನ್ನರಿಯುತ್ತೈ
ದೃಷ್ಟದಜಗಮಿದು ಲಿಂಗರೂಪಮೆಂದರಿಯುತ್ತೆ
ಕಷ್ಟಮಂ ಮರೆದು ಲೋಕಸೇವೆಯಂ ಗೈವುದೇ ಶಿವವ್ರತಮುಪ್ಪುದು ॥ ೬ ॥

ಶಿವನ ಮರೆಯದಲಿಹುದೆ ಸುಶಿವಾನುಸಂಧಾನ-
ಮುಪಸಿಯೊಳ್ ಶಿವನಿಂದಲಧಿಕರಿಲ್ಲೆಂದು ನಂ-
ಬುವದೆ ಶಿವಭಕ್ತಿಯಿದುಮಿಲ್ಲದಿರ್ದೊಡೆ ಲಿಂಗಪೂಜಾದಿಗಳ್ ಘಟಿಸವು
ತವೆ ಭೋಗ ಮೋಕ್ಷಗಳೀ ಭಕ್ತಿಯಿಂದೆ ದೊರೆ-
ಯುವವು ಮತ್ತಣಿಮಾದಿಸಿದ್ಧಿಗಳವಲ್ಲದಲೆ
ಶಿವನನೆಳೆತಂದು ನಿಲ್ಲಿಸುವದೀಭಕ್ತಿಯಿವರಿಂದೆ ಮಿಗಿಲಿಲ್ಲಮಿಳೆಯೊಳ್ ॥ ೭ ॥

ಅರಿಯಿರ್ಕೈ ಸದಮಲಪ್ರೀತಿಯೇ ಭಕ್ತಿಯಾ
ಪರಭಕ್ತಿಯುಕ್ತನೇ ಭಕ್ತನೆನಿಸುವನವಗೆ
ಮೆರೆವಖಿಳ ಭುವನಂಗಳೊಳ್ ಸಮಾನರ್ ದೊರೆಯರವನೆ ಮಿಗಿಲೀಶನಿಂದಾ
ಹರನೆ ಮದ್ಭಕ್ತ ಏವಾಧಿಕೋ ಮಮ ಎಂದು
ನೆರೆ ಪೇಳ್ದನಾಗಮದೊಳಿದನರಿದು ಭಕ್ತರಾ-
ಗಿರಿ ನೀವಹಂಕಾರರಹಿತ ನಿಶ್ಚಲ ಮಹಿತ ನಿತ್ಯಭಕ್ತಿಯ ಸಾಧಿಸಿ ॥ ೮ ॥

ಸಹಜ ನಿಷ್ಕಾಮಸದ್ಭಕ್ತಿಯುಳ್ಳವನೆ ಭೂ-
ಮಹಿತ ಭಕ್ತಂ ತಿಳಿಯಿರವನ ಪ್ರಾಣಂಗಳಾ
ನಿಹಿತ ಪಂಚಾಚಾರಗಳ್ ದೇಹಮಾತಗಷ್ಟಾವರಣಗಳ್ ನಿಜಮಿದು
ಗಹನಮಾಗಿಹ ಪರಮ ಶಿವಯೋಗಸಾಧಕ್ಕೆ
ಮಹನೀಯ ಭಕ್ತನೆ ಪ್ರಥಮ ಸೋಪಾನಮಾ
ಗಿಹುದನರಿದು ಭಕ್ತರಾಗುವದು ಪಂಚಾಚಾರಮಂ ಮಹಾಷ್ಟಾವರಣಮಾ ॥ ೯ ॥

ಕೇಳಿ ಪಂಚಾಚಾರಗಳ ನಿಮಗೆ ಮೊದಲೊಳಾಂ
ಪೇಳುವೇಂ ನೆರೆ ಸದಾಚಾರ ಭೃತ್ಯಾಚಾರ
ಮೂಲಲಿಂಗಾಚಾರ ಪರಶಿವಾಚಾರ ಪರತರಗಣಾಚಾರಗಳಿವೇ
ಮೇಳಯಿಸಿ ಮೆರೆವ ಪಂಚಾಚಾರಗಳ್ ತಿಳಿಯಿ
ರಾಳಮೆನೆ ಸತ್ಯಾದಿಗುಣವರಿತು ಚರಿಪುದೆ ವಿ-
ಶಾಲಮಾಗಿಹ ಸದಾಚಾರಮಾ ಶಿವಭಕ್ತರಂ ಶಂಭುವೆಂದರಿಯುತಾ ॥ ೧೦ ॥

ಸೇವಿಪುದೆ ಸರಸ ಭೃತ್ಯಾಚಾರಮೆನಿಪುದೈ
ದೈವತಂ ಲಿಂಗಮೆಂದಾಗಳುಂ ತಿಳಿವುದೇ
ಕೋವಿದರೆ ಪರಮ ಲಿಂಗಾಚಾರಮೆನಿಸುವದು ಶಿವನೆ ಜಗವೆಂದರಿವುದೆ
ಪಾವನ ಶಿವಾಚಾರಮಪ್ಪುದುರೆ ಭವಿಗಳನ-
ದಾವಗಂ ಕಾಣೆನೆಂಬುದೆ ಗಣಾಚಾರಮಿದೆ
ಭಾವುಕ ಪವಿತ್ರ ಪಂಚಾಚಾರ ಪದ್ಧತಿಯಿದೇ ವಿಶ್ವಮತ ನೀತಿಯು ॥ ೧೧ ॥

ಆಚಾರಲಿಂಗವೆಂದಿದನೆ ಗೌರವಿಸಿಹರ್
ಪ್ರಾಚೀನರಾದಿಯಾಗೆಲ್ಲ ಶಿವಯೋಗಿ ವರ-
ರಾಚಾರ ಶೀಲರಾಗೀ ಜಗಕೆ ವಂದ್ಯರಹರವರಂತೆ ನೀವಾಗಿರೈ
ಆಚಾರದಿಂ ಧರ್ಮಮಾಚಾರದಿಂ ತಪಮು-
ದಾಚಾರದಿಂ ಜ್ಞಾನಮಾಚಾರದಿಂ ಭೋಗ-
ಮಾಚಾರದಿಂ ಸಿದ್ಧಿಯಾಚಾರದಿಂ ಮೋಕ್ಷಮಾಚಾರದಿಂ ಕೀರ್ತಿಯು ॥ ೧೨ ॥

ಶಿವಯೋಗ ಸೌಧದಡಿಗಲ್ಲುಮಾಚಾರಮಿದು
ಶಿವಯೋಗ ಸಾಧಕರಿಗಿದುವೆ ಸನ್ನೀತಿಯಿದ
ನವಿರತಂ ಚರಿಸುತಷ್ಟಾವರಣಗಳ ಸಾಧಿಸುವದೊರೆವೆನದನೆ ಕ್ರಮದೆ
ಶಿವನೆ ಗುರು-ಲಿಂಗ-ಚರ-ಭೂತಿ-ರುದ್ರಾಕ್ಷಿ ಮಂ-
ತ್ರವಿಲಸತ್ ತೀರ್ಥಪ್ರಸಾದ ನಾಮದೊಳೆ ಮೆರೆ-
ಯುವ ಶುಭಾಷ್ಟಾವರಣಗಳ ರೂಪದಿಂ ತೋರ್ದನೆಂದಾಗಮುಗಳೊರೆವವು ॥ ೧೩ ॥

ಗುರುಲಿಂಗ ಜಂಗಮರೆ ಭಕ್ತರಿಗೆ ಪೂಜ್ಯರಹ
ರುರು ಭೂತಿ ರುದ್ರಾಕ್ಷಿ ಮಂತ್ರಗಳೆ ಸಾಧನಗ-
ಳುರೆ ತೀರ್ಥಸುಪ್ರಸಾದಗಳೆ ಫಲಗಳ್ ತಿಳಿಯಿರಿನ್ನು ವಿವರಿಸುವೆನಿವನೆ
ಹರನೆ ನಿಜ ಪಂಚಮುಖಗಳೊಳೊಗೆದ ಪ್ರಮಥರ್ಗೆ
ಗುರುವಾಗಿ ಶಿವಯೋಗ ತತ್ವಮಂ ಬೋಧಿಸುತೆ
ಧರೆಯ ಭಕ್ತರ್ಗದನೆ ಬೋಧಿಸಲ್ಕಪ್ಪಣೆಯನಿತ್ತು ಕಳುಹಿದನಾಗಳೆ ॥ ೧೪ ॥

ಪರಮ ಸೋಮೇಶಾದಿ ಪಂಚಲಿಂಗಂಗಳಿಂ
ಧರದೊಳುದ್ಭವಿಸಿ ರೇಣುಕದಾರುಕಾದಿಗಳ್
ನಿರಘ ಪಂಚಾಚಾರ್ಯರೆನಿಸುತ್ತೆ ಪಂಚಪೀಠಂಗಳಂ ಸ್ಥಾಪಿಸಿ ಸದಾ
ಸರಸವೆನೆ ಪಂಚತತ್ವಗಳ ಸೂತ್ರವ ಪಿಡಿದು
ನಿರುತಮುರು ಶಿಷ್ಯ ಸಂಗ್ರಹವಗೈಯುತ್ತಲುರು
ತರ ದೀಕ್ಷೆಯುಂ ಗೈದವರ್ಗೆ ಲಿಂಗವನಿತ್ತು ಶಿವಯೋಗಮಂ ಬೋಧಿಸಿ ॥ ೧೫ ॥

ಅವರೆ ಸಾರ್ವಭೌಮಿಕ ಜಗದ್ಗುರುಗಳಾಗಿರುವ-
ರವರ ಶಾಖಾಮಠಕೆ ಪಟ್ಟಚರಮೂರ್ತಿಗಳು-
ಮವರ ಶಾಖಾಮಠಕೆ ಗೃಹಸ್ಥಮಾಹೇಶ್ವರರ್ ನಿಯಮಿತರ್ಕಳಾಗಿ
ತವೆ ಶಿಷ್ಯರಾಚಾರಗಳ ವಿಚಾರಗಳ ತಿ-
ರ್ದುವರವರೆ ಸದ್ಗುರುಗಳಹರಾಶೆಯುಂ ತೊರೆದು
ಶಿವಯೋಗಮಂ ತಮ್ಮ ಸೂತ್ರಗೋತ್ರಜಶಿಷ್ಯರೊಳ್ ಬೋಧಿಪರ್ ಕರುಣೆಯೋಳ್ ॥ ೧೬ ॥

ಗುರುಶಬ್ದದರ್ಥಮಜ್ಞಾನಹಾರಕವಪ್ಪುದು
ಗುರುವಿಂದಲಧಿಕಮಿಲ್ಲೆಂದು ಶ್ರುತಿ ಸಾರುವುದು
ಪರಮಾತ್ಮನಂ ಶಿಲಾಮಯಲಿಂಗದೊಳ್ ನೆಲಸುವಂತೆಸಗಿ ತಲ್ಲಿಂಗವಾ
ಪರಮಶಿಷ್ಯನ ಕರದೊಳಿತ್ತು ಧರಿಸಲ್ಕಲಿಸಿ
ನೆರೆ ಪೂಜಿಸಲ್ ತಿಳಿಸಿ ದೃಷ್ಟಿಸ್ವಾಧೀನಮನವ-
ಗುರುಹಿ ಪರಮಾತ್ಮನೇ ಲಿಂಗಮಾಲಿಂಗಮುದು ತಾಂ ತಾನೆ ಜಗಮಿದೆಂದು ॥ ೧೭ ॥

ತಿಳಿಸಿ ಸಾಕ್ಷಾತ್ಕರಿಸಿ ಪೊರೆವವನೆ ಸದ್ಗುರುವು
ತಿಳಿದು ನಂಬಿರಿ ಗುರುವೆ ಶಿವನೆಂಬುದಾಗಮಂ
ತಿಳಿಯಿರಿನ್ನೊರೆವೆ ನಾಂ ಲಿಂಗತತ್ವವ ನಿಮಗೆ ಸಂಕ್ಷೇಪಮಾಗೀಗಳೆ
ಪೊಳೆವುದಾಗಮಗಳೊಳ್ ಲಿಂಗನಾಮಂ ಶಿವಂ-
ಗಿಳೆ ಮೊದಲುಮಾಗಸಂ ಕೊನೆಯಾಗಿ ಜಗಮೆಸೆದು
ಬೆಳಗುವದು ಲಿಂಗಾಕೃತಿಯೊಳಾಗಳುಂ ಶಿವನ ತನುವೆ ಲಿಂಗಮುದಾಯಿತು ॥ ೧೮ ॥

ಜಗವ ಲಯಕುದ್ಭವಕೆ ಮೂಲಕಾರಣಮೆನಿಸಿ-
ದಗಣಿತ ಪರಬ್ರಹ್ಮವೇ ಲಿಂಗಮೆಂದರಿಯಿ-
ರಘರಹಿತ ಶಿವನದುವೆ ಪರಮಾತ್ಮನದುವೆಯೆಮ್ಮಾತ್ಮನಮುಮೆಂದರಿವುದು
ನಿಗಮಾಗಮ ಶ್ರುತಿ ಸ್ಮೃತಿ ಪುರಾಣಂಗಳೊಳ್
ಸೊಗಸಾಗಿ ಲಿಂಗಮಹಿಮೆಯು ಬಣ್ಣಿಸಲ್ಪಡುವ-
ದಗಜೇಶನುರು ಭಕ್ತಗಾಗಿ ಜ್ಯೋತಿರ್ಲಿಂಗರೂಪದಿಂದೀ ಭುವನದೊಳ್ ॥ ೧೯ ॥

ಉದಿಸಿದಂ ತನ್ಮಹಿಮೆಯಿಂ ಭಕ್ತಿನಿಗಿಲಾಗು
ತೆದೆಯೊಳುರು ಶಿವಲಿಂಗಮಂ ಧರಿಸಲಿಚ್ಛಿಸುತೆ
ಹೃದಯ ಪೂರ್ವಕಮಾಗಿ ಪ್ರಾರ್ಥಿಸತೊಡಂಗಿದರ್ ಶಿವನನಾಭಕ್ತರೊಲಿದು
ಉದಯಿಸಿದನುರೆ ಭಕ್ತಸಂಪ್ರಾರ್ಥನೆಗೆ ಮೆಚ್ಚಿ
ಸದಮಳಿನ ಗುರುರೂಪದಿಂ ಶಿವಂ ಬಂದು ಸ-
ಮ್ಮುದದೆ ಭಕ್ತರ ನೋಡುತವರ ದೃಷ್ಟಿಯೊಳ್ ದೃಷ್ಟಿಯನಿಟ್ಟು ನಿಜಹಸ್ತವಾ ॥ ೨೦ ॥

ಭಕ್ತ ಮಸ್ತಕದೊಳಿಟ್ಟಾ ಬ್ರಹ್ಮ ಚಕ್ರದೊಳ್
ಯುಕ್ತಮಾಗಿಹ ಶಿವಕಳೆಯ ತೆಗೆದು ನಿಜದೃಷ್ಟಿ
ಶಕ್ತಿಯಿಂ ಶುದ್ಧಗೊಳಿಸುತೆ ಶಿಲಾಮಯಮಾದ ಲಿಂಗದೊಳ್ ಸ್ಥಾಪಿಸುತಲೆ
ರಕ್ತಿಯಿಂದವನ ಕರದೊಳ್ ಕೊಟ್ಟು ಲಿಂಗಮಂ
ಸೂಕ್ತ ಲಿಂಗದ ಮಹಿಮೆಯುಂ ಪೂಜಿಸುವ ಕ್ರಮವ
ಸೂಕ್ತಿಯಿಂ ಶಿಷ್ಯಂಗೆ ಬೋಧಿಸಂ ಸದ್ಗುರುವು ನಿಗಮದೊಳ್ ಪೇಳಿದಂತೆ ॥ ೨೧ ॥

ಆಯಿಷ್ಟಲಿಂಗದ ಮಹಿಮೆಯ ನಿಮಗೆ ಪೇಳ್ವೆನಾ
ಸೀಯೆಲ್ಲ ಸಿರಿಯು ಬಯಸದಲೆ ದೊರೆವುದು ಭಕ್ತ-
ಗಾಯಾಸವಿಲ್ಲದಲೆ ಮೋಕ್ಷಮೊದಗುವದು ಭಕ್ತಿಯೊಳೆ ಧರಿಪುದು ಲಿಂಗವಾ
ನ್ಯಾಯಸ್ಥಿತಿಯ ಸರಿಯಿರಿದರ ಧಾರಣದಿಂದೆ
ಪಾಯಾ ಕುಕರ್ಮ ಕಾಲಂಗಳಂಜಿಕೆಯಿಲ್ಲ
ಕಾಯಸ್ಥಮಾಗಿರಲ್ ಸೂತಕದ ಪಾತಕದ ಭೀತಿಯಿಲ್ಲಂ ತಿಳಿಯಿರೈ ॥ ೨೨ ॥

ಮಿಗಿಲು ಜ್ಯೋತಿರ್ಲಿಂಗದಿಂದಿಷ್ಟಲಿಂಗಮಿದು
ಪಿಂಗುವಾತ್ಮಕಲೆಯಿಂದಲೀ ಲಿಂಗಮುದಯಿಪುದು
ಮಿಗೆಯಾತ್ಮಕಾಶ್ರಯಂ ಭಾವಮಾಭಾವಮೆ ಭಾವಲಿಂಗಂ ತಿಳಿಯಿರೈ
ಸೊಗಯಿಪಾ ಭಾವಲಿಂಗಂ ಪ್ರಾಣಲಿಂಗಮಿದೆ
ಸೊಗಯಿಸುವ ಪ್ರಾಣಕಾಧಾರಮಾಗಿಹುದದುವೆ
ಸೊಗಸೀಯುವಿಷ್ಟಲಿಂಗಕೆ ಮೂಲಮಾಗಿರುವವೆರಡರಿವ ಸಾಧನಮಿದೆ ॥ ೨೩ ॥

ಗುರುವಿಷ್ಟಲಿಂಗಮಾ ಪ್ರಾಣಲಿಂಗಂ ಲಿಂಗ-
ಮುರು ಜಂಗಮಂ ಭಾವಲಿಂಗಮೆಂದರಿಯಿರೈ
ಗುರು ಜಂಗಮರ್ ದೊರೆಯದಿರೆ ಲಿಂಗವೊಳಗಿಂತು ಭಕ್ತರರ್ಚಿಪುದರಿಯುತ
ಪರಮಲಿಂಗದ ಮೊದಲಪೀಠಮನು ಬಿಂಪುವದ-
ಸರಿಯೆ ಮೇಲೆಸೆವ ಪೀಠಂ ನಾದಮಿಹುದರಿಯು-
ಲುರೆ ಗೋಮುಖಂ ಕಳೆಯು ಸಕಲ ನಿಷ್ಕಲೆಯೆ ಲಿಂಗದ ನಿಜಂ ನಿಶ್ಚಿತಮಿದು ॥ ೨೪ ॥

ಇಷ್ಟಲಿಂಗವ ಬಿಡದೆ ಧರಿಸಿ ಪೂಜಿಸಿ ನಲೆದು
ದೃಷ್ಟಿಯಂ ನೀವಿಟ್ಟು ಸಾಧನವ ಮಾಡಲ್ಕೆ
ಸ್ಪಷ್ಟಮಿದುಮಾಲಿ ನಿಲೆ ಗಾಳಿ ನಿಲುವುದು ಗಾಳಿ ನಿಲೆ ಮನಂ ನಿಲುವುದಯ್ಯ
ಶಿಷ್ಟರೊಪ್ಪುವ ತೆರದೆ ಮನದಲ್ಲಿ ನಿಲೆ ಲಿಂಗ-
ಮಿಷ್ಟ ಬಿಂದುವು ಕಣ್ಗೆ ತೋರ್ಪುದೈಯದು ತೋರೆ
ಶ್ರೇಷ್ಠ ನಾದಂ ಕೇಳ್ವದದು ಕೇಳೆ ಕಲೆಯೆಸೆವುದದೆ ಪ್ರಾಣಲಿಂಗಮೆಂದು ॥ ೨೫ ॥

ಅರಿಯಿರಾಗಳ್ ಪೊಳೆವುದಾ ನಿಷ್ಕಲೆಯುಮಮಪೆ
ಪರಿಪೂರ್ಣ ಸದ್ಭಾವಲಿಂಗಮಹುದದು ಪ್ರಾಣ
ಪರಲಿಂಗ ವರದೇಷ್ಟಲಿಂಗಗಳಿಗಾದಿಯಹುದಿವುಗಳೊಳಗುದಯಿಸುವವು
ಎರಡೆರಡು ಲಿಂಗಗಳವನೊರೆವೆನಾಲಿಪುದು
ಪರಮೇಷ್ಟಲಿಂಗದೊಳಗಾಚಾರ ಲಿಂಗಮಾ
ಗುರುಲಿಂಗಮಿವು ಪ್ರಾಣಲಿಂಗದೋಳ್ ಶಿವಲಿಂಗ ಚರಲಿಂಗಗಳ್ ಜನಿಪವು ॥ ೨೬ ॥

ಭಾವಲಿಂಗದೊಳಾ ಪ್ರಸಾದಲಿಂಗಂ ತಿಳಿಯೆ
ಪಾವನ ಮಹಾಲಿಂಗಮಾರು ಲಿಂಗಂಗಳಿಂ
ಶೀವುತಿಹವಾರಾರುವೊಂದೊಂದರೊಳಗಾಗಿ ಬ್ರಹ್ಮಾಂಡ ಪಿಂಡಾಂಡ
ವಾವಗಂ ನೆಲ ನೀರುಮಿಷ್ಟಲಿಂಗಮಿದಹುದು
ಪಾವಕಂ ವಾಯುವದು ಪ್ರಾಣಲಿಂಗಂ ಮತ್ತೆ
ಭಾವಲಿಂಗಂ ಗಗನಮಾತ್ಮಮಿಹುದರಿಯಿರಿಡುತಿಷ್ಟಲಿಂಗವೆ ದೃಷ್ಟಿಯಾ ॥ ೨೭ ॥

ಇದೆ ಲಿಂಗತತ್ವಮಹುದಿದು ಸಿದ್ಧಿಸಲ್ ಭಕ್ತ
ಗೊದಗುವದು ಜಂಗಮಕೃಪಾಬಲಂ ತಿಳಿಯಿರೈ
ಮುದದಿಂದೆ ಜಂಗಮಮಹತ್ವಮಂ ನಿಮಗೊರೆವೆನಾಗಮ ರಹಸ್ಯಮಮಪೆ
ಸದಮಲರೆ ಕೇಳಿರೈ ಜಂಗಮನೆ ಪರಶಿವಂ
ಪದುಳಮೆನೆ ಚಿದ್ಬೋಧಕಾಗಿ ಸಾಕಾರತೆಯ
ಸದಯನಾಗಳೆ ಪೊಂದಿ ಜ್ಞಾನಬೋಧೆಯನಿತ್ತು ಪರಕಿಸುತೆ ಸದ್ಭಕ್ತರ ॥ ೨೮ ॥

ಪೊರೆಪನಿವನೀಕ್ಷಿಸಂ ಗೋತ್ರಸೂತ್ರಾದಿಗಳ-
ನುರುಭಕ್ತಿಯೊಂದನಿವನೀಕ್ಷಿಸುವನಿವಗಿಲ್ಲ-
ಮುರೆ ಜಗದ ಜಂಜಡತೆಯಿವನೇ ನಿರಾಭಾರಿ ನಿಷ್ಕಾಮಿ ನಿರ್ಮೋಹಿಯು
ನಿರಘನನುಪಮನಮಲ ಸಚ್ಚಿದಾನಂದ ಘನ-
ನುದುತರಾದ್ವಯನಖಿಲರಾತ್ಮ ಸಾಕ್ಷೀಶ್ವರಂ
ಪರಮಯತಿ ಶಿವಯೋಗಿ ಚರ ವಿರಕ್ತಂ ಜಗದ್ಗುರುವಿವನೆ ಧರ್ಮರಾಗಿ ॥ ೨೯ ॥

ಗುರುವು ನಿಜಗೋತ್ರಸೂತ್ರಜ ಭಕ್ತರಂ ಪೊರೆವ
ನಿರದಿಷ್ಟಲಿಂಗಂ ಸ್ವಧಾರಕರನುದ್ಧರಿಪು-
ದುರುಚರಂ ಭಕ್ತರೆಲ್ಲರ ಸಲಹುವಂ ಜ್ಞಾನಬೋಧೆಯಂ ಮಾಡಿ ನಲಿದು
ಗುರುವು ಶಿಕ್ಷಕನಿಷ್ಟಲಿಂಗಂ ಶಿವನ ರೂಪ-
ಮರಿಯಿತ್ತೈ ಚರನೆ ಪರೀಕ್ಷಕಂ ಭಕ್ತರ್ಗೆ
ಹರನೆ ಮೂರಾಗಿಹಂ ಗುರು ಲಿಂಗ ಚರರಲ್ಲಿ ಶಿವನೆಂಬ ಭಾವವೊಳಿತು ॥ ೩೦ ॥

ತಿಳಿಯೆ ಜಂಗಮಶಬ್ದಕರ್ಥಂ ಸಚೇತನಂ
ಪೊಳೆವ ಪ್ರಾಣಿಗಣಕ್ಕೆ ಜಂಗಮಾಹ್ವಯಮಿರ್ಪ್ಪು-
ದುಳಿದಚೇತನ ತತಿಗೆ ಸ್ಥಾವರಾಖ್ಯೆಯು ಮೆರೆವುದರಿಯೆ ಜಂಗಮವರ್ಗಕೆ
ಪೊಳೆವರಾ ಮಾನವರ್ ಮಿಗಿಲೆನಿಸಿ ನರರಲ್ಲಿ
ಪೊಳೆಯುವರ್ ಶೈವಭಕ್ತರ್ ದೈವಭಕ್ತರೊಳ್
ಪೊಳೆಯುತಿಹರ್ ಲಿಂಗಭಕ್ತರಾ ಭಕ್ತರಂ ಪೊರೆವನೀ ಪರಮ ಚರನೆ ॥ ೩೧ ॥

ಸ್ಥಾವರಕ್ಕಾಧಾರಮಹುದು ಜ್ಯೋತಿರ್ಲಿಂಗ-
ಮಾನಿವಿಧಲಿಂಗಗಳಿಗಿಷ್ಟಲಿಂಗಂ ಮುಖ್ಯ-
ಮೀವಸುಮತಿಯೊಳದಕೆ ಜಂಗಮನೆ ಪ್ರಾಣಮಾಗಿಹನಿದಂ ತಿಳಿಯಿರಯ್ಯಾ
ಪಾವನಾತ್ಮಕ ರೇಣುಕಾದಿ ಪಂಚಾಚಾರ್ಯ
ಭಾವುಕರ ಪ್ರಾರ್ಥನೆಗೆ ಮೆಚ್ಚಿ ಶಿವನಾಗ ನಿಜ
ಭಾವಕಲೆಯಂ ಚರಾಕೃತಿಗೈಸಿ ಕಳುಹಿಸಿದನೆಂದಾಗಮಂ ಸಾರುವುದು ॥ ೩೨ ॥

ಶೂನ್ಯಪೀಠಂ ಜಂಗಮಂಗೆ ಸುಸ್ಥಿರಮಹುದು
ಮಾನ್ಯ ಮೂಲಪ್ರಣವಕಧ್ಯಕ್ಷನಹನಿವಂ
ಧನ್ಯರಾಗಿರಿ ಪೂಜಿಸಿವನನನಿನ್ನೊರೆವೆನಂತರವ ಗುರು ಲಿಂಗ ಚರರ
ಅನ್ಯನಲ್ಲೈ ಗುರುವು ಶಿವನ ಸಕಲಜ್ಞಾನ-
ಮನ್ಯಮಲ್ಲೈ ಲಿಂಗಮದು ಸಕಲ ನಿಷ್ಕಲಮಿ-
ದನ್ಯನಲ್ಲೈ ಜಂಗಮಂ ನಿಷ್ಕಲಜ್ಞಾನಮಿಹುದರಿಯಿರಾಗಮದೊಳೆ ॥ ೩೩ ॥

ಗುರು ಲಿಂಗ ಚರರ ಪೂಜಿಸಲ್ ಸಾಧನಮಹವು
ವರಭೂತಿ ರುದ್ರಾಕ್ಷಿ ಮಂತ್ರಗಳರಿಯಿರವ-
ನೊರೆವೆನನುವಿಂದೆ ಮನವಿಟ್ಟು ಸಲೆ ಕೇಳಿರ್ಸ್ಸೆ ಶಿವಯೋಗಸಾಧಕರೆ ನೀವ್
ಹರನ ಮೈವೆಳಗು ತಾನಾದ ಭೂತಿಗೆ ಭಸ್ಮ
ಮುರು ಭಸಿತಮುಂ ರಕ್ಷೆಯುಂ ಕ್ಷಾರಮೆಂಬ ಪೆಸ-
ರಿರುತಿಹವು ತಿಳಿವುದು ವಿಭೂತಿಯ ಮಹತ್ವಮಿದು ಖ್ಯಾತಮಿಹುದಾಗಮಗಳೊಳ್ ॥ ೩೪ ॥

ಹರನ ಪಂಚಾನನದೊಳೊಗೆದ ಗೋಸಂತತಿಯ
ಪರಮ ಗೋಮಯದಿಂದಲುದಿಸಿದ ವಿಭೂತಿಯೊಳ್
ಗುರುಚರರ ಪಾದತೀರ್ಥಂ ಮಿಶ್ರಮಾಗಲ್ಕೆ ಚಿದ್ಭಸ್ಮಮೆನಿಪುದದನೆ
ಧರಿಸಿದೊಡೆ ದುರ್ಲಿಖಿತಮಳಿಯುತಿಹುದೀ ತನುವು
ಪರಿಶುದ್ಧಮಾಗುವದು ಪಾಪಬುದ್ಧಿಯು ತೊಲಗಿ
ವರಭಕ್ತಿಯುದಿಸುತಿಹುದೀ ಭವಂ ದೂರಾಗಿ ಭೋಗ ಮೋಕ್ಷಂ ದೊರೆವುದು ॥ ೩೫ ॥

ಭೂತಿಶಬ್ದಂ ಕನ್ನಡದೆ ಬೂದಿಯೆಂದಪ್ಪು
ದೋತು ತಿಳಿಯಿರಿ ಜಗವ ದಹಿಸಿದೊಡೆ ಬೂದಿಯಹು
ದೀತೆರದೆ ಬೂದಿಯಂ ಸುಟ್ಟೊಡದು ಬೂದಿಯಲ್ಲದೆ ಬೇರೆ ರೂಪಾಗದು
ಖ್ಯಾತಮಿದು ಬೂದಿಯಾವುದು ಗೋಮಯದ ಬೂದಿ
ಗೈತರದು ಸಮನಾಗಿ ಗೋವುಗಳ ರಕ್ಷಿಸುತೆ
ಪೂತರಹರಮರರಾಕಳವ ನೀವ್ ಕಾಯ್ದು ಭೂತಿಯನೆಸಗಿ ಧರಿಪುದರಿದು ॥ ೩೬ ॥

ವಿಶ್ವಸ್ವರೂಪವಹ ಭಸಿತದ ಮಹತ್ವಮಂ
ವಿಶ್ವಾಸದಿಂದರಿಯಿರಿನ್ನು ರುದ್ರಾಕ್ಷಿಗಳ
ವಿಶ್ವಾಸ್ಯ ಮಹಿಮೆಯಂ ಪೇಳ್ವೆನಾಲಿಪುದರಿದು ಧರಿಸಿ ಶಿವಾಕ್ಷಿಗಳನೆ
ವಿಶ್ವಸ್ಥ ಭೀತಿಗಳ ಕಳೆಯಲಿದು ಜನಿಸಿಹುದು
ವಿಶ್ವಾಕೃತಿಯ ತೋರಲಿದು ಗೋಲಮಾಗಿಹುದು
ವಿಶ್ವೋತ್ತಮಂ ತಾನಹಂ ಶಿವನಿದಂ ಧರಿಸಿ ಬಣ್ಣಿಸಿಹನಾಗಮಗಳೊಳ್ ॥ ೩೭ ॥

ಒಂದರಿಂ ಪದಿನಾಲ್ಕರಂ ಬರಂ ಮುಖಗಳು-
ಳ್ಳಂದವಹ ರುದ್ರಾಕ್ಷಿಯಂ ಭಕ್ತನೆಡಬಿಡದ
ಲೊಂದನಾದಡುಮೊದುಲೆ ಧರಿಸಿಕೊಂಡಡೆ ಸಾಕು ಸರ್ವೇಚ್ಛಿತವನೀವುದು
ಕಂದುಗೊರಲನ ಕಣ್ಣ ರುದ್ರಾಕ್ಷಿಯಿದರರ್ಥ-
ಮೆಂದು ತ್ರಿಪುರದ ದಹನಕಾಲದೊಳ್ ಶಿವನಕ್ಷಿ-
ಯಿಂದೊಗೆದ ಜಲದಿಂದೆ ರುದ್ರಾಕ್ಷಿ ವೃಕ್ಷಮುದಿಸಿಹುದೆಂದು ಶ್ರುತಿಯುಲಿವುದು ॥ ೩೮ ॥

ಇನ್ನರಿಯಿರೈ ಷಡಕ್ಷರ ಮಂತ್ರಮಹಿಮೆಯಂ
ಸನ್ನುತರೆ ನಿಮಗೊರೆವೆನೀಯಸುವ ಗುರುವಿಂದೆ
ಸನ್ನೆಯಿಂ ತಿಳಿದು ಜಪಿಸಿರಿ ಮಾನಸೋಪಾಂಶು ವಾಚಕಕ್ರಮವನರಿದು
ಮನ್ನಣೆಯುಂ ಸಿದ್ಧಿಯಹುದೈ ಸ್ವರ್ಗಭೋಗಮಾ-
ತ್ಮೋನ್ನತಿಯು ದೊರೆವುದೈ ಬ್ರಹ್ಮಾದಿದೇವತೆಗ-
ಳುನ್ನತ ಜಗತ್ಸೃಷ್ಟಿ ಮುಖ್ಯ ಕಾರ್ಯಂಗಳಂ ಮಾಳ್ಪರೀ ಮಂತ್ರಬಲದೆ ॥ ೩೯ ॥

ಆರಕ್ಷರದ ಮಂತ್ರಮಿದುಮಿದರ ವರ್ಣಂಗ-
ಳಾರು ತತ್ವಂಗಳಿಗೆ ಬೀಜಂಗಳಾಗಿರುವ-
ವಾರರ್ಥಗಳ್ ತಿಳಿಯಲೀ ಮಂತ್ರದಿಂದುದಿಸಿ ಜಗಕೆ ಕಾರಣಮಾದವು
ಆರು ಪ್ರಣವಂಗಳಿಗೆ ಸಿಂಹಾಸನಂಗಳಹ-
ವಾರು ಮತ್ತಂ ತಿಳಿಯಿರೀಯಾರು ವರ್ಣಗಳಿ-
ಗಾರು ಜನರಾಚಾರ್ಯರೋರ್ವಂ ನಿರಾಭಾರಿ ಸಾಭಾರಿಗಳುಮೈವರು ॥ ೪೦ ॥

ಇದು ಮಹಾಮಂತ್ರಗಳೇಳುಕೋಟಿಗೆ ಮುಖ್ಯ-
ಮಿದಕೆ ಶಿವಪಂಚಾಕ್ಷರಾಖ್ಯೆಯುಂ ಮೆರೆಯುತಿಹು-
ದಿದರೊಳೀ ವಿಶ್ವಮಡಗುವದಿದಕೆಣೆಯಿಲ್ಲಮಾಮಂತ್ರಂ ತಿಳಿಯಿರೈ
ಇದನರಿದಪಾ ಚರಣತೀರ್ಥಮಹಿಮೆಯು ತಿಳಿವು
ದವರಾ ಮಹಾತ್ಮ್ಯಮಂ ತಿಳಿದನಿತು ಪೇಳ್ವೆ ನಾ-
ನವನೆ ತಿಳಿಯುತ್ತೆ ಗುರು ಲಿಂಗ ಚರತೀರ್ಥಮಂ ಕೊಂಡು ಪಾವನರಾಗಿರೈ ॥ ೪೧ ॥

ಪಾದತೀರ್ಥದ ಬಿಂದುಮಾತ್ರದಿಂ ಕೋಟಿ ತೀ-
ರ್ಥೋದಕಂ ಪಾವನಮೆನಿಸಿಪ್ಪುದರಿಯಿರಿ ಕುಮಾ-
ಯಾದಿ ವಿಜಯಕ್ಕಿದುವೆ ಸಾಧನಂ ಭೋಗಮೋಕ್ಷಾನಂದದಾಯಕಮಿದೆ
ಆದರದೆ ಪ್ರತಿದಿನಂ ಕೊಳ್ಳೆ ಸುಜ್ಞಾನಮದು
ಮೇದಿನಿಯ ಭಕ್ತರ್ಗೆ ಸಾಧ್ಯಮಹುದೆಂದಖಿಲ
ವೇದ ನಿಗಮಾಗಮಗಳುಲಿಯುವವು ಚರಣೋದಕಂ ವಿಶ್ವಜೀವನಮಿದೆ ‖ ೪೨ ‖

ಸುಪ್ರಸಾದದ ಮಹಿಮೆಯುಂ ತಿಳಿಯಿರಿನ್ನೊರೆವೆ-
ನಾಪ್ರಣುತ ಶಿವಷಡಕ್ಷರ ಮಂತ್ರಮಿದಕಾದಿ
ಹೃತ್ಪ್ರಸನ್ನತೆಯಿದರ ಮುಖ್ಯಾರ್ಥಮರಿಯಿರೈ ತೃಪ್ತಿಕಾರಣಮಿಹುದಿದೆ
ಸತ್ಪ್ರಣುತ ಗುರು ಲಿಂಗ ಚರಕರುಣೆಯಿಂಪಡೆದಿಸು-
ತೀ ಪ್ರಸಾದಂ ಶುದ್ಧ ಸಿದ್ಧ ಪ್ರಸಿದ್ಧಮೆಂ-
ದುಂ ಪ್ರಥಿತ ಭೇದತ್ರಯವ ತಳೆಯುವದು ಕ್ರಮದೊಳಾಗಮಸ್ತುತಮಹುದಿದೇ
‖ ೪೩ ‖

ಇದು ವಿಶೇಷ ಪ್ರಸಾದಂ ತಿಳಿಯಿರೈಯಿನ್ನು
ಮುದದಿಂದೆ ಸಾಮಾನ್ಯ ಸುಪ್ರಸಾದದ ನೆಲೆಯ
ಸದಯ ಗುರುಚರಭಾವ ವಾಗ್ದೃಷ್ಟಿಕರಚರಣ ಸ್ಪರ್ಶದಿಂ ಪೂತಮಾದ
ಸಮಲ ಪದಾರ್ಥಮದು ಸಾಮಾನ್ಯಮೆನಿಪುದೈ
ವಿದಿತ ಸದ್ಭಕ್ತಿಯುಳ್ಳವನಾವನಿರಲವಂ-
ಗಿದೆ ಸಲ್ಲುವದು ವಿಶೇಷಂ ದಿಮುಪದೇಶಮಂ ಪಡೆದವಗೆ ಸಲ್ಲುತಿಹುದು ‖ ೪೪ ‖

ಇಂತುಮಷ್ಟಾವರಣಗಳ ಕೇಳ್ದಿರಿನ್ನಿವಂ
ಸ್ವಾಂತದೊಳ್ ಮನನಮಂ ಗೈಯುತಾಚರಿಸಿರೈ
ಶಾಂತಿದಾಯಕ ವಿಶ್ವಧರ್ಮವೆಂದಿವನರಿದು ನೆರೆ ನಿದಿಧ್ಯಾಸಿಸಿರಿ ನೀವ್
ಶಾಂತಭಕ್ತನಿಜಾಂಗಮಿರ್ಪುದಷ್ಟಾವರಣ-
ಮಂತು ಭಕ್ತಪ್ರಾಣಮಿಹುದು ಪಂಚಾಚಾರ-
ಮಂತರಂಗದೊಳಿವೆಲ್ಲವ ವಿಚಾರಿಸಿಕೊಂಡು ಸದ್ಭಕ್ತರಾಗಿರಿ ಸದಾ ‖ ೪೫ ‖

ಪರಮ ಭಕ್ತಸ್ಥಲಮಿದೈ ಮಹಾಶಿವಯೋಗ
ವರ ಸಾಧಕಿದು ಪ್ರಥಮ ಸೋಪಾನಮಿನ್ನೈದು
ಮೆರೆವವೈ ಸೋಪಾನಗಳ್ ಕ್ರಮದೊಳಿವುಗಳಭಿಧಾನಮಂ ಮೊದಲರಿಯಿರಿ
ಉರು ಭಕ್ತ ಮಾಹೇಶ ಸುಪ್ರಸಾದಿಗಳಲ್ಲ-
ಮರೆ ಪ್ರಾಣಲಿಂಗಿ ಶರಣೈಕ್ಯಂಗಳೆಂಬ ಪರ-
ತರ ಷಟ್‌ಸ್ಥಲಂಗಳಿವುವಿವಕಾದಿಯಾಗಿಹವು ತ್ರಿಸ್ಥಲಗಳೊರೆವೆನವನೆ ॥ ೪೬ ॥

ತ್ಯಾಗಾಂಗ ಭೋಗಾಂಗ ಯೋಗಾಂಗಗಳ್ ಮುಖ್ಯ-
ಮಾಗಿರುವವಿವುಗಳೊಂದೊಂದರೊಳಗೆರಡೆರಡು-
ಮಾಗಳೊರೆವಾ ಷಟ್‌ಸ್ಥಲಂಗಳರಿಯಿರಿ ಕ್ರಮದೊಳಾಗಮದ ಸಾರಮಿದುವೆ
ತ್ಯಾಗಾಂಗದೊಳ್ ಜನಿಪ ಭಕ್ತಸ್ಥಲವ ಪೇಳ್ವೆ-
ನೀಗಳೊರೆವೆನಪಾರ ಮಾಹೇಶ್ವರ ಸ್ಥಲವ
ರಾಗದಿಂ ಗುರು ಲಿಂಗ ಚರರಿಗುರೆ ತನುಮನೋಧನವನರ್ಪಿಪ ಭಕ್ತನೇ ॥ ೪೭ ॥

ಪರಮ ಮಾಹೇಶ್ವರ ಸ್ಥಲಕೆ ತಕ್ಕವನಹಂ
ಪರಧನವ ಪರಸತಿಯ ಪರಹಿಂಸೆಯಂ ತೊರೆದು
ಗುರುವಿಂದೆ ತಿಳಿಯುತೆ ಷಡರ್ಥ ಸಂಗ್ರಹವ ಸ್ಥಿರಾಚರಣೆಯೊಳ್ ಶ್ರದ್ಧೆಯು
ನೆರೆ ಬಲಿದು ನಿಷ್ಠೆಯಾಗುಳಿಯಲ್ಕೆ ಭಕ್ತನೆ
ಮೆರೆವ ಮಾಹೇಶ್ವರಂ ತಾನಹಂ ನಿಷ್ಠೆಯೆ
ಸರಸದಿಂ ಸಾವಧಾನಮುದಾಗೆ ಲಿಂಗಮುಖಮುಂ ಚರನೆನಾಗರಿಯುತಾ ॥ ೪೮ ॥

ಸಕಲ ಸುಪದಾರ್ಥಂಗಳಂ ಸಮರ್ಪಿಸುತೆ ಚರ
ನಕಳಂಕ ಸತ್‌ಪ್ರಸಾದವ ಪಡೆದು ಭೋಗಿಸುತೆ
ಸುಕರಮಾಗಿಯೆ ಘೋರ ತಾಪತ್ರಯವ ನೀಗಿ ಜೀವಿಪಂ ಶಾಂತಿಯಿಂದ
ಸುಖವೀವ ಜಂಗಮಂ ದೊರೆಯದಿರೆ ಗುರುವಿನೊಳ್
ಸುಖಿಯಾಗಿಹಂ ಚರನ ಭಾವನೆಯ ತಾಳುತ್ತೆ
ನಿಖಿಲರಂ ಪೊರೆವ ಚರನೆಂದು ಲಿಂಗವ ತಿಳಿದು ಬಾಳುವಂ ಗುರುವಿನವರಿ ॥ ೪೯ ॥

ಈತನೆ ವಿಶೇಷ ಪ್ರಸಾದಿಯಹನರಿಯಿರೈ
ನೀತಿವಿದನಾಗಿ ಲಿಂಗಕೆ ಕೊಟ್ಟು ಭೋಗ್ಯಮಂ
ಸಾತಿಶಯ ಸುಪ್ರಸಾದವ ಗೈದು ಭೋಗಿಪನೆ ಸಾಮಾನ್ಯನಾ ಪ್ರಸಾದಿ
ಓತು ಸದ್ಭಾವಮಿದು ಬಲಿಯೆ ಸದ್ಗುರುವಿನೋಳ್
ಪೂತ ಚಿದ್ಬೋಧಮಂ ಪಡೆದು ಲಿಂಗಾಂಗದ ಸ-
ನಾತನ ಸಕೀಲಮಂ ತಿಳಿದು ಚರಿಸುತ್ತಲಿ ವಿಶೇಷ ಪ್ರಸಾದಿಯೆನಿಸಿ ॥ ೫೦ ॥

ಪ್ರಾಣಲಿಂಗಸ್ಥಲವ ಸಾಧಿಪಂ ಗುರುಕೃಪೆಯೊ-
ಳಾಣವಾದಿ ಮಲಂಗಳಂ ನೀಗಿ ಪರಮ ನಿ-
ರ್ವಾಣ ಪದಹೇತುವಹ ಚಿದನುಭವದೋಳ್ ಸಾವಧಾನಮಿದು ಪೆರೆಯಲವನೆ
ಪ್ರಾಣದಾ ಲಿಂಗದಾ ಸ್ಥಿತಿ ಸಮಂಜಸಮಾಗೆ
ಪ್ರಾಣಲಿಂಗಿಯುಮೆನಿಸಿ ಶರಣಪದಮಂ ಪೊಂದಿ
ಕಾಣುವಂ ಲಿಂಗಮಂ ನಿಜಪತಿಯನಾಗಿ ಮೇಣ್ ತನ್ನ ತತ್ಸತಿಯನಾಗಿ ॥ ೫೧ ॥

ತಿಳಿಯುತಂತಃಕರಣ ನಿಖಿಲೇಂದ್ರಿಯದ ಸುಖವ
ತಳುವ ದರ್ಪಿಸುತೆ ನಿಷ್ಪಂಚನೆಯ ಭಾವನೆಯೊ-
ಳುಳಿಯಲನುಭವ ಪರಿಣಾಮಮಾಗಳ್ ಶರಣಪದದ ಸಿದ್ಧಿಯದಪ್ಪುದೈ
ತಿಳಬಗೆಯೊಳಿಹ ಶರಣ ಪರಿಣಾಮ ಭಾವನೆಯು
ಬಲಿದು ಲಿಂಗದೊಳೆ ಸಮರಸವಾಗಿ ತಾಂ ಲಿಂಗ-
ಮುಳಿಯೆ ತಲ್ಲಿಂಗಮೆ ತಾನಾಗಿ ಪರಸ್ಯೈಕ್ಯನೆನಿಪನ್ಕೆ ತಿಳಿಯಲಿದುವೆ ॥ ೫೨ ॥

ಪರತರೈಕ್ಯ ಸುಸ್ಥಲಂ ಕೊನೆಯ ಸ್ಥಲಮಿದುಮಿಲ್ಲಿ
ಗುರುತರಾಂಗಸ್ಥಲಂಗಳ ವಿಚಾರಂ ಮುಗಿದು-
ದೊರೆದೆನಾನಿವುಗಳಂ ಸಂಕ್ಷಿಪ್ತಮೆನೆ ಪಿಂತೆ ಪೇಳ್ದ ಲಿಂಗಸ್ಥಲಗಳೋಳ್
ಪಿರುಗುವಂಗ ಸ್ಥಲಗಳಂ ಕ್ರಮದೆ ಕೂಡಿಸುತೆ
ಬೆರೆದ ಭೇದಮೊಳಿರ್ಪ ಸದಮಲೈಕ್ಯಂಗೆ ಸಮ
ದರಿಯೆ ಜಗದೊಳಗಿಲ್ಲಶಿವನೆ ಶಿವಯೋಗಿ ಸುಸಿರಾಗಿ ಕುಭವತ್ಯಾಗಿಯು ॥ ೫೩ ॥

ಶಿವಯೋಗಿಯಾದೊಡಂ ಪರವೈಕ್ಯನಾದೊಡಂ
ಶಿವೆ ಸಿದ್ಧನಾದೊಡಂ ಭಕ್ತಿಯಿರವೇಳ್ಕವಗೆ
ಶಿವಭಕ್ತಿಯಿರದಿರ್ದೊಡಾಯೋಗಮಾ ಸಮರಸಂ ಸಿದ್ಧಿಯದು ವ್ಯರ್ಥವೈ
ಶಿವಭಕ್ತಿಯಿಂ ಶಕ್ತಿ ಶಕ್ತಿಯಿಂ ಬ್ರಹ್ಮವೆಸೆ-
ದವಿರತಂ ಸ್ಥಲಸಂಜ್ಞೆಯಿಂ ಪಡೆದು ಲಿಂಗಾಂಗ-
ಮವನಿಯೊಳಗಾಗಿಹುದದೇ ಶಕ್ತಿ ಭಕ್ತಿಗಳ್ ಷಟ್ಷಡ್ವಿಧಂಗಳಾಗಿ ॥ ೫೪ ॥

ಪರಮ ಲಿಂಗಾಂಗಸ್ಥಲಂಗಳಂ ನಿರ್ಮಿಸುತ-
ಲಿರುವವಿದನರಿದು ಗುರುಲಿಂಗಜಂಗಮ ಭಕ್ತಿ
ಪರನಾದವನೆ ವೀರಶೈವನವನು ವಿಮಲ ಶಿವಯೋಗಿಯಾಗುವನಿದೇ
ಹರಯೋಗ ವಿದ್ಯೆಯುಮಿದಂ ಲಿಂಗವಂತರಾ-
ರಿರಲವರ್ ಸಾಧಿಸಲ್ ಶಕ್ಯವರಿದಾಗವಿದೊ-
ಳಿರುವ ಸಿದ್ಧಾಂತಮಿದನರಿಯುತೀ ಶಿವಯೋಗಮಂ ಸಾಧಿಸುತೆ ಸುಖಿಸಿರೈ ॥ ೫೫ ॥

ಎಂದು ಬೋಧಿಸಿ ಯೋಗಿ ಗುರುಕುಮಾರಂ ಮಹಾ-
ನಂದದಿಂ ಲಿಂಗಪೂಜಾಸುಖದೊಳಿರುತಿರಲ್
ಲ್ಕಂದು ನಪೆದಾ ಶಿವಾನುಭವ ವಿಷಯವ ಚರ್ಚಿಸುತೆ ಮನನಂಗೈಯುತೆ
ಅಂಪದೆ ನಿದಿಧ್ಯಾಸಮಂ ಗೈಯುತಾಚರಿಸಿ
ಸಂಪೆಗವ ನೀಗಿ ಶಿವಯೋಗಸಾಧಕರಲ್ಲಿ
ಛಂದದಿಂ ಶಿವಯೋಗ ಜನ್ಯ ಸುಖಮಂ ಪೊಂದಿ ತೃಣಗಾಂಬರಿಹಭೋಗವ ॥ ೫೬ ॥

ಅಂತು ಸಂಧಿ ೨೧ ಕ್ಕೆ ಪದಗಳು ೮೬೧

ಶುಭಂ

– ಶ್ರೀ ಶಿವಗಣೇಭ್ಯೋ ನಮಃ –



## ಇಪ್ಪತ್ತೆರಡನೆಯ ಸಂಧಿ ಪ್ರಾರಂಭ





ಸೂಚನೆ–

ಇಂತೆಸವ ಮಹಿಮೆಗಳ ತೋರಿ ಶ್ರೀ ಗುರುವರ್ಯ ।

ನಂತಿಮದ ಲೀತಿಯಹ ಸಂಗಮೇಶಾರ್ಚನೆಯ ।

ಸಂತಸದಿ ಸ್ಥಿರಗೊಳಿಸಿ ಶಿವಲಿಂಗದೋಳ್ಬೆರೆದ ಶಿವಯೋಗಮಂದಿರದೊಳು ॥

ತನುವಿನ ಗುರುವೆ ಮಹಾದೇವನುರುಲಿಂಗವೇ
ಮನಸಿನ ಮಹಾದೇವನೈ ಜಂಗಮಪ್ರಭುವೆ
ಘನತರಪ್ರಾಣಾಭಿಮಾನದ ಮಹಾದೇವನೀ ಮೂಱುಮಹಾದೇವರು
ಕೊನೆಗೆ ನಿನ್ನೊಂದೆ ಪರವಸ್ತುವಾಗುವವರಿಂ
ನಿನಗಸಮ ಸಹಜ ಸದ್ಭಕ್ತಿಭಾವನೆಯೊಳೀ
ತನುಮನೋಧನಗಳಂ ನಲಿದೀವುದಂ ಕರುಣಿಸೆನಗದ್ವಿತೀಯ ಶಾಂತ ॥ ೧ ॥

ಮೆರೆವಾ ಮುದೇನೂರ ಹೊಳೆಯ ತೀರದೊಳಿರ್ಪ
ವರಸಂಗಮೇಶ್ವರನ ರುದ್ರಾಭಿಷೇಕದೊಡ-
ವೆರೆದ ಪೂಜೆ ನಿರಂತರಂ ನಡೆಯುವಂತೆ ಮಾಡುವದೆಂದು ತದ್ಗ್ರಾಮದ
ಹಿರಿಯರಾಲೋಚಿಸಿ ವಿರಾಟ್ಪುರ ಕುಮಾರೇಶ-
ಗರುಪಲವನೊಪ್ಪಿ ಶಿವಯೋಗಮಂದಿರದಿಂದ
ಪೊರಮಟ್ಟು ತಳರ್ದನಾವೂರಿಗಾಸಂಗಮದ ಜಾತ್ರೆ ಸಾಗಿರ್ದುದಾಗ ॥ ೨ ॥

ಕೂಡಿರ್ದ ಸಭ್ಯರೊಡಗೊಂಡು ಗ್ರಾಮದೊಳ್ಳೈದಿ
ಮಾಡಿದನು ಕೆಲ ಪಗ್ಗಣಿಯನು ತತ್ಪೂಜೆಗಂ-
ದೀಡಾಪನತಿಶಯುಜ್ವರಬ ಥೆಗಿರುಳೆಲ್ಲ ಯಾತ್ರಾಮಹೋತ್ಸವವನು
ನೋಡುತ್ತ ಸಿದ್ಧಗೆಟ್ಟುದುದರಿಂದಿಡನರಿದು
ನಾಡೆಪೇವಿಯ ಹೊಸೂರೆಂಬ ಗ್ರಾಮದೊಳೆಸೆವ
ನಾಡಹಿರಿಯಂ ಚೆನ್ನಬಸವೇಶ್ವರಶ್ರೇಷ್ಠಿಯಲ್ಲಿಗೈತಂದನಾಗ ॥ ೩ ॥

ಈತಂ ಕುಮಾರೇಶ್ವರಪ್ರೇಮವಸ್ತು ವಿ-
ಖ್ಯಾತನುರುಚತುರನತ್ಯಂತಗೌರವಶಾಲಿ
ನೀತಿಯುತನಖಿಲಜನಹಿತಕಾರಿಯುದ್ಯೋಗವಿದ್ಯಾಪ್ರಸಾರಮೋಹಿ
ವೀತದರ್ಪನುದಾರಿ ಪಿಸ್ತಾರ್ಥಿ ಘಾತಕ
ಪಾತಭೀರು ವಿವೇಕಿ ಸುವಿಚಾರಿ ಭೂಪಸಂ-
ಪ್ರೀತನೊಳ್ಪರಃದಾಂತಮಾನ್ಯನೀ ಯತಿಪನಂ ನೋಡಿ ಬಗೆಗುಂದಿ ಪಿಡವೆ ॥ ೪ ॥

ಹಾವೇರಿಗೊಡನೆ ಕರತಂದಾಂಗ್ಲವೈದ್ಯಾದಿ
ಕೋವಿದರನೆಲ್ಲ ಕೂಡಿಸಿ ಪರೀಕ್ಷೆಯಗೈಸಿ
ಪಾವನತರೌಷಧವ ಕೊಡಿಸುವೆವು ಸ್ವೀಕರಿಸಬೇಕೆಂದು ಸೆಟ್ಟಿಯೊರೆಯೆ
ಆ ವಿಧದ ರೋಗಗುಣಬಹುಚಿಕಿತ್ಸೆಯನು ಬ-
ಲ್ಲೀ ವಿರಾಟ್ಪುರದೊಡೆಯನೊಲ್ಲೆವೌಷಧವನಿ-
ನ್ನಾ ವಿಶ್ವನಾಥನೊಳ್ಪಿಂತವೆವದರಿಂ ಬೇಡವೆಂದಗಿಯನೊರೆದನಂದು ॥ ೫ ॥

— ಶ್ರೀ ಶಿವಗಣೇಭ್ಯೋ ನಮಃ —



## ಇಪ್ಪತ್ತೆರಡನೆಯ ಸಂಧಿ ಪ್ರಾರಂಭ





ಸೂಚನೆ—

ಇಂತೆಸವ ಮಹಿಮೆಗಳ ತೋರಿ ಶ್ರೀ ಗುರುವರ್ಯ ।
ನಂತಿಮದ ಲೀಲೆಯಹ ಸಂಗಮೇಶಾರ್ಚನೆಯ ।
ಸಂತಸದಿ ಸ್ಥಿರಗೊಳಿಸಿ ಶಿವಲಿಂಗದೊಳ್ಬೆರೆದ ಶಿವಯೋಗಮಂದಿರದೊಳು ॥

ತನುವಿನ ಗುರುವೆ ಮಹಾದೇವನುರುಲಿಂಗವೇ
ಮನಸಿನ ಮಹಾದೇವನೈ ಜಂಗಮಪ್ರಭುವೆ
ಘನತರಪ್ರಾಣಾಭಿಮಾನದ ಮಹಾದೇವನೀ ಮೂಱುಮಾದೇವರು
ಕೊನೆಗೆ ನಿಸ್ಸೊಂದೆ ಪರವಸ್ತುವಾಗುವದರಿಂ
ನಿನಗಸಮ ಸಹಜ ಸದ್ಭಕ್ತಿ ಭಾವನೆಯೊಳೀ
ತನುಮನೋಧನಗಳಂ ನಲಿದೀವುದಂ ಕರುಣಿಸೆನಗದ್ವಿತೀಯ ಶಾಂತ ॥ ೧ ॥

ಮೆರೆವಾ ಮುದೇನೂರ ಹೊಳೆಯ ತೀರದೊಳಿರ್ಪ
ವರಸಂಗಮೇಶ್ವರನ ರುದ್ರಾಭಿಷೇಕದೊಡ-
ವೆರೆದ ಪೂಜೆ ನಿರಂತರಂ ನಡೆಯುವಂತೆ ಮಾಡುವದೆಂದು ತದ್ಗ್ರಾಮದ
ಹಿರಿಯರಾಲೋಚಿಸಿ ವಿರಾಟ್ಪುರ ಕುಮಾರೇಶ-
ಗರುಹಲವನೊಪ್ಪಿ ಶಿವಯೋಗಮಂದಿರದಿಂದ
ಪೊರಮಟ್ಟು ತಳರ್ದನಾವೂರಿಗಾಸಂಗಮದ ಜಾತ್ರೆ ಸಾಗಿರ್ದುದಾಗ ॥ ೨ ॥

ಕೂಡಿರ್ದ ಸಭ್ಯರೊಡಗೊಂಡು ಗ್ರಾಮದೊಳ್ಪೈದಿ
ಮಾಡಿದನು ಕೆಲ ಪಣ್ಗಣಿಯನು ತತ್ಪೂಜೆಗಂ-
ದೀಡಾವಸತಿಯಜ್ಜರಬ ಧಿಗಿರುಳೆಲ್ಲ ಯಾತ್ರಾಮಹೋತ್ಸವವನು
ನೋಡುತ್ತ ಸಿದ್ಧಗಟ್ಟುದುದರಿಂದಿದನರಿದು
ನಾಡೆಪೇವಿಯ ಹೊಸೂರೆಂಬ ಗ್ರಾಮದೊಳೆಸೆವ
ನಾಡಹಿರಿಯಂ ಚೆನ್ನಬಸವೇಶ್ವರಶ್ರೇಷ್ಠಿಯಲ್ಲಿಗೈತಂದವನಾಗ ॥ ೩ ॥

ಈತಂ ಕುಮಾರೇಶ್ವರಪ್ರೇಮವಸ್ತು ವಿ-
ಖ್ಯಾತನುರುಚತುರನತ್ಯಂತಗೌರವಶಾಲಿ
ನೀತಿಯುತನಖಿಲಜನಹಿತಕಾರಿಯುದ್ಯೋಗವಿದ್ಯಾಪ್ರಸಾರಮೋಹಿ
ವೀತದರ್ಪನುದಾರಿ ಸಿಸ್ಸಾರ್ಥಿ ಪಾತಕ
ವ್ರಾತಭೀರು ವಿವೇಕಿ ಸುವಿಚಾರಿ ಭೂಪಸಂ-
ಪ್ರೀತನೊಳ್ಪಿರಿದಾಂತಮಾನ್ಯನೀ ಯತಿಪನಂ ನೋಡಿ ಬಗೆಗುಂದಿ ಬಿಡದೆ ॥ ೪ ॥

ಹಾವೇರಿಗೊಡನೆ ಕರತಂದಾಂಗ್ಲವೈದ್ಯಾದಿ
ಕೋವಿದರನೆಲ್ಲ ಕೂಡಿಸಿ ಪರೀಕ್ಷೆಯಗೈಸಿ
ಪಾವನತರೌಷಧವ ಕೊಡಿಸುವೆವು ಸ್ವೀಕರಿಸಬೇಕೆಂದು ಸೆಟ್ಟಿಯೊರೆಯೆ
ಆ ವಿಧದ ರೋಗಗುಣಬಹುಚಿಕಿತ್ಸೆಯನು ಬ-
ಲ್ಲೀ ವಿರಾಟ್ಪುರದೊಡೆಯನೊಲ್ಲೆನೌಷಧವನಿ-
ನ್ನಾ ವಿಶ್ವನಾಥನೊಳ್ಪೆಂಪವೆವದರಿಂ ಬೇಡವೆಂದಗಿಯದೊರೆದನರಿದು ॥ ೫ ॥

ಆದಮುಂ ಸ್ನಾನಾರ್ಚನಾರ್ಪಣಾನುಭವವನಾ
ಮೋದದಿಂ ಮಾಳ್ಪುದಂ ಬಿಡಲಿಲ್ಲ ಮನದೊಳ್ಪ-
ಪಾದಮುಂ ಪಡಲಿಲ್ಲ ಕುಳ್ಳಿರುವ ಬಲವಿಲ್ಲದುದರಿಂದ ಗರ್ದ್ದುಗೆಯೊಳು
ಆ ದಿವ್ಯಭಾವದಿಂ ಮಲಗಿಕೊಂಡನುಭವವ
ಸಾಧಿಸುತ್ತಿರ್ದನೀಪರಿ ದಿನದೊಳೆರಡು ಬಾ
ರಾದಿಗುರುಲಿಂಗಜಂಗಮಭಾವದಿಂ ತಪ್ಪದೆಸಗಿದಂ ಶಿವಯೋಗಿಯು ॥ ೬ ॥

ಈ ಮಹಾತ್ಮನ ಸನ್ನಿಧಿಯೊಳು ಗೋಣೀಬೀಡ
ಸ್ವಾಮಿಗಳು ಪರಮಶೀಲಾಚಾರದಿಂ ನಿಚ್ಚ
ನೇಮಕೆ ಸಹಾಯಮಾಗಿರ್ದರೀ ಮಹಿಮನ ಜಡಾಮಯಂ ಪೆರ್ಚ್ಚಿದುದು
ಪ್ರೇಮದಾ ಸೆಟ್ಟಿಗೀ ಕಳವಳಂ ಪಿರಿದಾಗಿ
ಸೋಮಧರನಂ ಭಜಿಸುತಸವಸದೆ ತಂತಿಯಿಂ
ಸ್ವಾಮಿಯಭಿಮತವರಿದು ತಿಳುಪಿದನವ್ಯಪ್ರಸಂಗ ಪ್ರಮುಖಜನರಿಗೆ ॥ ೭ ॥

ನವಲಗುಂದದ ಬಸವಲಿಂಗದೇಶಿಕರು ಬಲು
ತವಕದೆ ಗುಳೇದಗುಡ್ಡದ ಯತಿವರರೊಡನೆ ಬಂ-
ದವನತಿಸಲೊರಗಿರ್ದ ಶ್ರೀಕುಮಾರೇಶ್ವರಂ ಕಂಡು ದೇಶಿಕವರೇಣ್ಯ
ಸುವಿರಾಟ್ಪುರದ ಮಠಕ್ಕಧಿಕಾರಿಯಾದೀಗ
ನವರಿಗಡಸಿದ ಬೇನೆಯಂ ತವಿಸಲೆಂದು ನೀ
ವವರನೀಗಳ್ಕರಿಸಿಕೊಂಡು ನಿಮ್ಮಲ್ಲಿ ವೈದ್ಯರಿಗೆ ತೋರಿಸುವಿರಂತೆ ॥ ೮ ॥

ಯೋಗದಿಂ ಬೇನೆಯಂ ಕಳೆದುಕೊಳ್ಳುವದೆ ಶಿವ-
ಯೋಗಿಗಳ ಧರ್ಮವಿಂತಿದ್ದು ವೈದ್ಯರ್ಕ್ಕಳಿಂ
ನೀಗಿಸುವದಾವ ನಿಮ್ಮಯ ಜಾಣ್ಮೆ ತಿಳಿಯಲಾಗದೆ ಹುಚ್ಚುತನವಿದಲ್ತೇ ?
ಹೀಗೆ ಮಾಡುವದಲ್ಲವುರುಲಿಂಗಸ್ವಾಮಿಗಳಿ-
ಗಾಗಿಸಿರಿ ತಪ್ಪೈದ್ಯರಿಂ ಭಿಷಸ್ವಲವ ಪೆ-
ರ್ಚ್ಚಾಗಿ ನೀವಿನ್ನು ಮೇಣೀಗಳಿದ್ದಿರುವ ಪ್ರಮಥದ್ರೋಹಿಗಳ ಹೋಳಿಯ ॥ ೯ ॥



ಶಿವಯೋಗಮಂದಿರದಲ್ಲಿರುವ

ಲಿಂ. ಹಾನಗಲ್ಲ ಕುಮಾರಸ್ವಾಮಿಗಳವರ ಗದ್ದುಗೆಯ ದೃಶ್ಯ.

ನಿಲ್ಲಿಸುವ ಯತ್ನಮಂ ಮಾಡಿ ಮಾಜನರಿಗಿದು
ಸಲ್ಲವೆಂದೊರೆದರುಪಿ ತದ್ಭಕ್ತಿಯೊಳು ತನ್ನಿ
ಯಲ್ಲಮಪ್ರಭು ಬಸವ ಚೆನ್ನಬಸವಾದಿಗಳ್ಪ್ರಮಥರಲ್ಲೆಂಬ ಪಳಿಯ
ಅಲ್ಲಲ್ಲಿ ಕೇಳ್ದು ಕಲ್ಲಣಗೊಳ್ವುದೆಮಗೆ ಕೊನೆ
ಯಲ್ಲಿ ಸಂಭವಿಸಿದುದು ಶಿವಶಿವಾ ಶಾಸ್ತ್ರಮಂ
ಬಲ್ಲವರದೇಕೆ ಸೈರಿಸುವರೋ ಸಹನವೆಮಗಿಲ್ಲ ತದ್ದುರ್ವಾದವ ॥ ೧೦ ॥

ತಡೆಗಟ್ಟುವನಿತು ಬಲಸಂತರೆವೆಮ್ಮೊಳಗಿಹರು
ನಡೆತಂದು ವಾದಿಸರ್ಕರಿದೊಡಂ ಪೋದೊಡಂ
ತುಡುಗರಿಹರವರು ಮರೆಯೊಳು ನಿಂದು ಹರಳೊಗೆವುತಿಹರು ಮತಶಾಂತಿಯ
ಕೆಡಿಸುವರು ನಿಮಗೆ ಶಿವಕೃಪೆಯುಂಟು ಗೆಲವುಂಟು
ಬಿಡಬೇಡಿಮೆಂದೊರೆದು ದೇಶಿಕರ ಸ್ವಾಮಿಗಳ
ನುಡಿಯನೊಪ್ಪಿಸಿಕೊಂಡನೀ ಸದಾಶಿವಮಹಾಸ್ವಾಮಿ ಧರ್ಮಪ್ರೇಮಿಯು ॥ ೧೧ ॥

ಮುತ್ತಿ ಕೆಂದಿಸುವೀ ಮಹಾಜ್ವರದ ಸಂತಾಪ-
ವೆತ್ತ ಯತಿಸಂಗೌಷಧಂ ಬೇಡವೆಂಬ ಮನ-
ವೆತ್ತ ವೈದ್ಯಾಭ್ಯಾಸವ್ರತಲಿಂಗಚಾವರಿಗೆಸವ ಕಂಬಳವಿದೆತ್ತ
ಮತ್ತೆ ಪ್ರಮಥರ ನಿಂದೆಯಂ ನಿಲ್ಲಿಸುವ ಬೋಧೆ
ಯೆತ್ತ ತನಗಭವನಪ್ಪಣೆಯಾದ ನಂಬುಗೆಯ-
ದೆತ್ತ ಸಹಜಾಚರಣೆಯೆತ್ತ ಪ್ರಮಥಧ್ಯಾನವೆತ್ತವೀ ಶಿವಯೋಗಿಯು ॥ ೧೨ ॥

ಅನಿತರೊಳು ಚಿತ್ರದುರ್ಗದ ಜಗದ್ಗುರುವರೇ-
ಣ್ಯನು ತಪಕದಿಂದ ದಯೆಮಾಡಿಸಿದನೋ ಪ್ರಭುವೆ
ಮನವೊಪ್ಪಿ ಹಿಂದೆ ಮಾತಾಡಿದಂತೀ ಸಮಾಜೋದ್ಧಾರಮಂ ಮಾಡಿರಿ
ಎನುತೀ ಕುಮಾರೇಶನಾಗ ಬಿನ್ನಯಿಸಲಾ
ಘನಮಹಿಮನೈ ನಿಮ್ಮ ಪ್ರಕೃತಿಯೆಂತಿಹುದೊರೆವು-
ದೆನಲಿದೇನೆಮ್ಮೀ ಸಮಾಜವೆಂತಿಹುದೆಂದು ಕೇಳಲಿಲ್ಲೇಕೆ ತಾವು ॥ ೧೩ ॥

ಎಂದೀ ಸದಾಶಿವಂ ಪಡಿನುಡಿಗೊರಲ್ಕೇಳ್ದು
ಮುಂದುವರಿವಳಲಿಂದ ಕಂಬನಿಗಳುದುರಲಕ-
ಟೆಂದೀತನಂದು ನಿಮ್ಮಂ ಪೋಲ್ವ ಮತಸುಧಾರಕಭೂತಿಗಳಾರು ಧಾರಿಣಿಯೊಳು
ಮುಂದೀ ತೆರದ ಮಹಾಶಿವಯೋಗಿಯವತರಿಸಿ
ಬಂದೊಡೆಮ್ಮೀ ಸಮಾಜದ ಪುಣ್ಯವೆಂದು ಮನ
ದಂದಾಡಿದಂ ಜಗದ್ಗುರುವರಂ ಪಲುಬಿದಂ ಪೆರ್ಚಿದನುತಾಪದಿಂದ ॥ ೧೪ ॥

ಜ್ವರಕಿಂದ ಮತಸುಧಾರಣಬಯಕೆ ಹೆಚ್ಚಿದುದು
ಜರೆಗಿಂದ ಶಿವಭಾವನಾಶಕ್ತಿ ಮುಂಚಿದುದು
ಹರಮತಸುಧಾರಣಾಪೇಕ್ಷೆಗಿಂ ಶಿವಭಾವನಾಶಕ್ತಿಗಿಂ ಪೆರ್ಚಿಗೆ
ಜ್ವರಜರೆಗಳೆಚ್ಚರಳವಳಿಸಲಾತುರಿಸಿದವು
ನೆರೆನೆಲ್ಲ ಪ್ರಮುಖರೀ ಶಿವಯೋಗಿ ಲಿಂಗದೊಳು
ಬೆರೆವವೇಳೆಸಮೀಪಿಸಿತೆಂದು ಮುಂದುವರಿವಸಮ ಸದ್ಭಕ್ತಿಯಿಂದ ॥ ೧೫ ॥

ಈ ನಮ್ಮ ಶಿವಯೋಗಿವರ್ಯನ ಸಮಾಧಿಯೀ
ಸ್ಥಾನದೊಳೆ ಸ್ಥಿರಗೊಳ್ಳಬೇಕೆಂದು ಕೆಲಬರುಂ
ಹಾನಗಲ್ಲೊಳಗಾಗಬೇಕೆಂದು ಕೆಲಬರುಂ ಶಿವಯೋಗಮಂದಿರದೊಳು
ತಾನಾಗಬೇಕೆಂದು ಕೆಲಬರೀತೆರದಿಂದ
ನಾನಾಜನರ್ತಮ್ಮತಮ್ಮ ಮತಮಂ ಪೇಳ-
ಲೀ ನಿಗಾಭಾರಿಯಭಿಮತವಾವ ತಾಣದೊಳಗಿಹುದದಂ ತಿಳಿವುದೆಂದು ॥ ೧೬ ॥

ವರಜಗದ್ಗುರುವರಗೆ ಸೆಟ್ಟಿ ಬಿನ್ನಯಿಸಲೋ
ಚರವರ್ಯ ನಿಮ್ಮಯ ಸಮಾಧಿಯಾವೆಡೆಯಲ್ಲಿ
ಸ್ಥಿರಗೊಳ್ಳಬೇಕೆಂದು ಕೇಳ್ವರೀ ಭಕ್ತರೆನೆ ಶಿವಯೋಗಮಂದಿರದೊಳು
ಸಂದಿಹುದು ತಮ್ಮ ತನುಶಕ್ತಿ ನಾಲ್ವತ್ತೆರಡು
ಹರದಾರಿ ದೂರಮಿಹುದಿಲ್ಲಿಗಾಯೋಗಮಂ-
ದಿರವಿಲ್ಲಿಗೆಂತುಳಿದು ಪಲುಪುವಿರಿ? ತಲುಪಿಪನವಾ ಮಹಾಪ್ರಭುಲಿಂಗನು ॥ ೧೭ ॥

ಹಾಗಿರ್ದೊಡಾಲಸ್ಯವೇಕೆ ? ಸೆಟ್ಟರೆ ಶಂಭು
ಯೋಗಮಂದಿರಕೀ ಯತೀಶರಂ ಕರಕೊಂಡು
ಹೋಗಬೇಕೆಂದಾ ಜಗದ್ಗುರುವರಂ ಪೇಳಲೊಡನೇಳ್ದು ತಂತಿಗೊಟ್ಟು
ಆಗಾರು ದೊಡ್ಡಾಶುರಥಗಳಂ ಮತ್ತೆರಡು
ಬೇಗನೋಡುವ ಸಣ್ಣರಥಗಳಂ ತರಿಸಿ ಶಿವ
ಯೋಗಿಯಂ ಸಣ್ಣರಥದೊಳು ಮಲಂಗಿಸಿ ಸಕಲಪರಿವಾರಸಹಿತವಾಗಿ ‖ ೧೮ ‖

ಪೊರಮಡುವ ಸಮಯದೊಳು ಕಣಿಕಸಿಗೆಲವೊ ನೀಂ
ಬರುವರಂ ಕರೆದುಕೊಂಡುಗೆಬಂಡಿಯಲಿ ಬಾ-
ಭರದೆ ಪೋಗೆಂದು ಸಾವಿರಸೌಖ್ಯಕವನಿತ್ತು ಸಿಲ್ದಾಣಕಟ್ಟೆ ಹೊರಟು
ಅರೆ ಚಾವದೊಳ್ಸುರಕ್ಷಿತವಾಗಿ ತಲುಪಿಸಿದ
ನುರೆಸೆಟ್ಟಿ ವಿತರಣದ ಗಟ್ಟಿ ರಸ್ನದ ಪುಟ್ಟಿ
ಸರತರಶ್ರೇಷ್ಠಿಯಿವನಹುದೆಂದು ಪೊಗಳುವಂತಾ ಮಂದಿರಕೆ ಯತಿಯನು ‖ ೧೯ ‖

ಮಾನಸದೊಳನುತಾಪವೊತ್ತರಿಸಿ ಪೈಮರೆದು
ನಾನಾಜನರ್ಮುತ್ತಿದರು ಸನ್ನಿಧಿಯೊಳಿರುವ
ನೂನಶೀಲಾಚಾರದಸಮಗುರುಚರದೇಶಿಕರ್ಮೆಳೀ ಶಿವಯೋಗಿಯು
ಸ್ನಾನಾರ್ಪಣಾಸುಖವಮಂ ಮಾಡಿಸಿದರನಿತ
ಕಾನಿಖಿಲಕರಣಗಳು ನಿಲಲಾದವದನು ತಿಳಿ-
ಯೋ ನಿರಂಜನದೇಶಿಕೋತ್ತಮರೆ ನೀವೆಮ್ಮ ಸಹಜ ಪೋಷಕರಿರುವಿರಿ ‖ ೨೦ ‖

ಪೊರಗೆ ಕ್ರಿಯೆ ಕೆಟ್ಟೊಡಾ ದೋಷವದು ನಿಮ್ಮದೊಳ
ಗಿರುವ ಧ್ಯಾನಂ ಕೆಟ್ಟೊಡಾ ದೋಷವೆಮ್ಮದೆಂ-
ದೊರೆದೆಚ್ಚರಿಂದೊಂದುಗಳಿಗೆ ನಮ್ಮ ಸಮಾಜ
ಮೆರೆವ ನಮ್ಮ ಸಮಾಜವೆಂದು ಕನವರಿಸಿ ಭಾ-
ಸುರಮಾದ ನಮ್ಮೀ ಸಮಾಜಸೇವೆಗೆ ಪಡುಳಿ
ಬರುವನೆಂದೊರೆದು ಬೆರೆದಂ ಮಹಾಲಿಂಗದೊಳ್ಸಿಷ್ಯನಕುಮಾರೇಶನು ‖ ೨೧ ‖

ನೆರೆವರೆಲ್ಲೆಡೆಯು ಗುರುಚರಗಣೇಂದ್ರಾದಿಗಳು
ಹಿರಿಕಿರಿಯರಳಲಿದರು ಶಿವಯೋಗಿವರನಗಲಿ
ಬೆರೆವಂ ಮಹಾಲಿಂಗವೊಳಗಿನನ ದರ್ಶನಮದೆರವಾಮದೆಮಗೆ ಪ್ರಭುವೇ
ಮರೆಯಾದೆಯಾ ಭಕ್ತರಂ ತೊರೆದೆಯಾ ಎಂದು
ಕೊರಗಿ ಸ್ಮರಿಸಿ ಮಹೋತ್ಸವದಿಂ ಸವಿಧಿಯಿಂ
ಚರಮಸಂಸ್ಕಾರಮಂ ಮುಗಿಸಿದರು ಶಿವಯೋಗಮಂದಿರದೊಳೀ ಮಹಿಮನ ॥ ೨೨ ॥

ಕಸವರದ ವರ್ಣಂಗಳಿಂದ ಬರೆವಂತಿರುವ
ಪೋಸಲೀಲೆಗಳನೆಸಗಿದೀ ಕುಮಾರೇಶ್ವರಂ
ಮಿಸುಗುತಿಹಪದಿನೆಂಟುನೂರದೈವತ್ತೆರಡನೆಯ ಶಕದ ಶುಕ್ಲಾಬ್ದದಿ
ಎಸೆವ ಮಾಘದ ಕೃಷ್ಣಪಕ್ಷ ಸಪ್ತಮಿಯ ತಿಥಿ
ಯುಸಮಬುಧವಾಸರದೊಳಸ್ತಗಿರಿಯಂ ಸಾರ್ವ
ಬಿಸರುಹಾಪ್ತನು ಪೋಸು ತಾನುಮುಂ ಬಿಡದೆ ನಿಜಲಿಂಗೈಕ್ಯಮಂ ಸಾರ್ದನು ॥ ೨೩ ॥

ವಿರತಿಯಿಂ ಶಿವಯೋಗನಿಷ್ಠೆಯಿಂ ಷಟ್ಸ್ಥಲಾ
ಚರಣಾತ್ಮಕ ಬ್ರಹ್ಮಸಿದ್ಧಿಯಿಂ ಚರಿಸುತಂ
ವರವೀರಶೈವ ಸಮಯೋದ್ಧಾರಕಾಗಿ ತನ್ನಯ ಜೀವನವನು ತೆತ್ತ
ಚರವರ್ಯನೀ ಪುರಾಣವನೋದುವಾಲಿಸುವ
ಪರಮಭಕ್ತರಿಗವಿರತಂ ದೊರೆಗುಮೇನೊಂದು
ಕೊರತೆಯಿಲ್ಲದ ಸಕಲಸಂಪದಂ ಭಕ್ತಿಸುಜ್ಞಾನಪರಮೋಕ್ಷಂಗಳು ॥ ೨೪ ॥

ಶಾಲಿವಾಹನಶಕದ ಪದಿನೆಂಟುನೂರದಾ
ಮೇಲಿನರುವತ್ತಾರನೆಯ ತಾರಣಾಬ್ದದೊಳು
ಮೇಳಮಾಗಿಹ ವಿಜಯದಶಮಿ ಬುಧವಾರದೊಳು ಚೆನ್ನಕವಿವರ್ಯನಿಂದ
ಲೋಲಮೆನೆ ಪೂರ್ಣಮಾದುದು ವಿರಾಟ್ಸ್ವರದ ಸ-
ಲ್ಲೀಲಾಪಯೋನಿಧಿ ಕುಮಾರನ ಪುರಾಣವಿದು
ಬಾಲಶಶಿಧರನ ಕರುಣೆಯಿದೆಂದು ನೆನೆದು ಕೈಮುಗಿದು ವಿಶ್ರಮಿಪೆ ನಾನು ॥ ೨೫ ॥

ಮಂಗಲಂ ಗುರುಗುಹೇಶ್ವರ ರೇಣುಕಾಚಾರ್ಯ
ಮಂಗಲಂ ಪಾರ್ವತೀಶಪ್ರಮಥಗಣವರ್ಯ
ಮಂಗಲಂ ಬಸವೇಶ ಮಡಿವಾಳ ಮಾಚರಸ ಕಪ್ಪಡಿಯ ಸಂಗಮಾರ್ಯ
ಮಂಗಲಂ ಚೆನ್ನಬಸವಾರಾಧ್ಯಸುವಿಚಾರ
ಮಂಗಲಂ ಮಾರಯ್ಯಭಕ್ತಜನಮಂದಾರ
ಮಂಗಲಂ ನಿಖಿಲಾಘವಾನುಭವಪೀಯೂಷಸುಖಸಾರಧೀರವಾರ ॥ ೨೬ ॥

ಅಂತು ಸಂಧಿ ೨೨ಕ್ಕೆ ಪದಗಳು ೮೫೭

## ಸಮಾಪ್ತಿ ಮಂಗಲಮಹಾ

ಶಾಂತಿಃ ಶಾಂತಿಃ ಶಾಂತಿಃ ಶಾಂತಿಃ ಶಾಂತಿಃ ಶಾಂತಿಃ ಶಾಂತಿಃ ಶಾಂತಿಃ

ಶಿವಂ

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೩ | ೧೬ | ಪತಿನತಿಗಳಿಗೆ | ಪತಿಸುತಿಗಳಿಗೆ |
| ೧೦ | ೬ | ಚಪ್ಪಾಳೆಗಳನಿಟ್ಟದರು | ಚಪ್ಪಾಳೆಗಳನಿಟ್ಟದರ |
| " | ೧೪ | ಶಾಲವಾಹನ | ಶಾಲಿವಾಹನ |
| ೧೫ | ೭ | ಅಂತರಿದೀ | ಅಂತರಿಸದೀ |
| ೧೬ | ೩ | ಜೋಳಿಗೆಯುನಂ | ಜೋಳಿಗೆಯು ನಂಬಿ |
| ೧೯ | ೨೩ | ಅರಿವೆಯುಚಂಡಿ | ಅರಿವೆಯುಂಚಡಿ |
| ೨೩ | ೨ | ಕೇಳದಂ | ಕೇಳಿದಂ |
| ೩೬ | ೨೪ | ಮಾಡ | ಮಾಡು |
| ೩೭ | ೧೬ | ಮಿಹುವೆನ್ನವರ | ಮಿಹುದಿನ್ನವರ |
| ೩೮ | ೯ | ವಿಷಯುಗಳೆಂಬ ಪಂಥ್ಯ | ವಿಯುಗಳೆಂಬಪಥ್ಯ |
| ೬೦ | ೧೩ | ಮಹೋತ್ಸರ್ಷಕವನು | ಮಹೋತ್ಕರ್ಷವನು |
| ೬೨ | ೩ | ನಾರಿಯುರು | ನಾರಿಯುರ |
| ೬೫ | ೧೦ | ಎನುತುಲಿವ | ಎನುತ್ತುಲಿವ |
| ೬೯ | ೧೨ | ಮಹಾಪರಾಥಕ್ಕೆ | ಮಹಾಪರಾಧಕೆ |
| ೭೫ | ೧೯ | ಬೋಧಿಲು | ಬೋಧಿಸಲು |
| ೭೮ | ೧೨ | ಧರ್ಮವನುಪೇಕ್ಷಲಿಲ್ಲ | ಧರ್ಮವನುಪೇಕ್ಷಿಸಲಿಲ್ಲ |
| ೭೮ | ೧೯ | ಕರ್ತವ್ಯವಲ್ಲ | ಕರ್ತವ್ಯವಲ್ಲವೆ |
| ೭೯ | ೮ | ನಡೆಪ್ಪುತಿಪುದಿ | ನಡೆವುತಿಪ್ಪುದಿ |
| ೮೧ | ೨೨ | ಸಿಮೆಯೊಳು | ಸೀಮೆಯೊಳು |
| ೮೫ | ೬ | ನಿವಮಹಂ | ನಿವಹಮಂ |
| ೮೭ | ೨ | ಮೌನಿದರ್ಗದೊಳು | ಮೌನಿವರ್ಗದೊಳ |
| ೮೭ | ೪ | ವೀಮಹಿತ | ವಾಮಹಿತ್ತ |
| ೮೮ | ೨೨ | ನನ್ನಿಂದವನ್ನು | ನನ್ನಿಯಿಂದವನು |
| ೯೦ | ೨೦ | ಚರ್ತ್ರೋತಮನ | ಚರೋತ್ತಮನ |
| ೯೮ | ೩ | ನುವರುಂಟಿ | ಸುವರುಂಟಿ |

| | | | |
|---|---|---|---|
| ೧೦೦ | ೧೯ | ಜೀವನಕೂಲ | ಜೀವನಕ್ಕನುಃಕೂಲ |
| ೧೦೩ | ೫ | ಶಾಸ್ತ್ರವನು | ಶಾಸ್ತ್ರವನುಂ |
| ೧೦೮ | ೪ | ಬಾಲರು | ಬಾಲರುಂ |
| ೧೦೮ | ೧೦ | ಸಮಾದಜನರು | ಸಮಾಜದವರು |
| ೧೧೨ | ೧೦ | ಕಾಲ | ಕಾಲಂ |
| ೧೨೭ | ೮ | ಇದಕ್ಕೆ | ಇದಕೆ |
| ೧೩೭ | ೨೨ | ಆಶ್ರಯಂಗೊಂಡು | ಆಶ್ರಯಂಗೊಡು |
| ೧೩೯ | ೯ | ಬಲ್ಲವನೋರ್ವನಂ | ಬಲ್ಲವನನೋರ್ವನಂ |
| ೧೪೩ | ೧೦ | ತನ್ನಯ | ತನ್ನ |
| ೧೪೪ | ೭ | ಪ್ರಸಾರಗೈವುತಿರ್ದನಾ | ಪ್ರಸಾರಂಗೈವುತಿರ್ದನಾ |
| ೧೪೪ | ೮ | ಕಾರಣಂಗಂಳಿಂದ | ಕಾರಣಂಗಳಿಂದ |
| ೧೫೩ | ೧೩ | ನ್ನತಭಕ್ತಿ | ನ್ನುತಭಕ್ತಿ |
| ೧೫೫ | ೧೯ | ನವರಿಂದ ಸಂತೋಷ | ನವರಿಂದಸಂತೋಷ |
| ೧೬೦ | ೨೪ | ತತ್ವಜ್ಞಾನಿ | ತತ್ವಜ್ಞಾನಿ |
| ೧೭೭ | ೩ | ಅನ.ಕೂಲಿಸಿದ | ಅನ.ಕೂಲಿಸದ |
| ೧೮೦ | ೮ | ಎನಿಸಿಕೊಂಡೆವು | ಎನಿಸಿಕೊಂಡಿಹೆವು |
| ೧೮೦ | ೨೨ | ಶಾಸನದಗ್ಧರ | ಶಾಸನವಿದಗ್ಧರ |
| ೧೮೩ | ೫ | ವೃಡಭಜನೆ | ವ್ಯಡಭಜನೆ |
| ೧೮೬ | ೧೫ | ಧಂಸಲೊಪ್ಪದ | ಧರಿಸಲೊಪ್ಪದ |
| ೧೮೬ | ೨೦ | ಇಂತೆದು | ಇಂತೆಂದು |
| ೧೮೭ | ೧೫ | ಇದೆಂನ್ನ | ಇಂದೆನ್ನ |
| ೧೮೭ | ೧೫ | ಬೀಳುಗಳೆದಿರುವ | ಬೀಳುಗಳೆವರಿವ |
| ೧೮೮ | ೧೧ | ಚಿರೋತ್ತಮ | ಚರೋತ್ತಮ |
| ೧೮೮ | ೧೪ | ಖಾದಿಯವರಿಗೆ | ಖಾದಿಯರಿವೆಗೆ |
| ೧೮೮ | ೧೬ | ಧರಿಸುತಿದರ್ದ್ದನೀ | ಧರಿಸುತಿರ್ದನೀ |
| ೧೮೮ | ೧೮ | ವಸ್ತ್ರದಿಗಳನೀ | ವಸ್ತ್ರಗಳನೀ |
| ೧೯೪ | ೧೧ | ಕುಳ್ಳಿರತಿಲವೊ | ಕುಳ್ಳಿರಲೆಲವೊ |
| ೧೯೪ | ೨೫ | ತಿಳಸಿದಂ | ತೆಳಸಿದಂ |
| ೧೯೭ | ೧೩ | ಪಂಪಾಂಚಿ | ಪಂಪಾಂಬೆ |
| ೧೯೯ | ೭ | ಚಿರಣಿ | ಬೇಣಿ |

| | | | |
|---|---|---|---|
| ೨೦೬ | ೨೬ | ೧೯ | ೨೯ |
| ೨೧೦ | ೨೦ | ಶ್ರೀವಿಷ್ಣುವಂ | ಶ್ರೀವೈಷ್ಣವಂ |
| ೨೧೧ | ೨೨ | ( ) | ಶಿವಧ್ಯಾನದೊಡನೆ |
| ೨೧೩ | ೧೦ | ವರ್ನ್ಣಪರಿ | ಮರ್ನ್ಣವರಿ |
| ೨೧೪ | ೧೩ | ವದತಿಮಿರ್ರಧೊಳು | ಮದತಿಮಿರದೊಳು |
| ೨೧೪ | ೧೪ | ಝೋಂಕಿಸುವ | ಝೇಂಕಿಸುವ |
| ೨೧೫ | ೧೫ | ಪದಾದ್ವ | ಪದಾಧ್ವ |
| ೨೧೬ | ೧೬ | ಸಾಥಿಕರಣಸುನಿರಥಿಕರಣ | ಸಾಧಿಕರಣಸುನಿರಧಿಕರಣ |
| ೨೧೭ | ೨೨ | ಕೇವಲಾತ್ಮ | ಕೇವಲಾತ್ಮರ್ಗೆ |
| ೨೨೫ | ೧೩ | ಲಿಂಗಕ | ಲಿಂಗಕೆ |
| ೨೩೨ | ೫ | ಸದ್ಬಾವಮಿದು | ಸದ್ಭಾವಮಿದು |
| ೨೩೩ | ೧೫ | ಇರುತಿರಲ್ | ಇರುತಿರ |
| ೨೩೪ | ೫ | ಲೀತಿಯಹ | ಲೀಲೆಯಹ |
| ೨೩೮ | ೪ | ಟಿಂದೀತನಂದು | ಟಿಂದೀತನಂದು |
| ೨೩೯ | ೨೩ | ( ) | ಸಮಾಜವೆನ್ಮನಿಶಂ |



## ಪುರಾಣದ ಅಚ್ಚಿಗಾಗಿ
## ಸಹಾಯ ನೀಡಿದ ಮಹನೀಯರು



| | | |
|---|---|---|
| ೧ | ಶ್ರೀ ಮ. ನಿ. ಪ್ರ. ಅನ್ನದಾನಿಮಹಾಸ್ವಾಮಿಗಳು, ಹಾಲಕೆರೆ | ೧೮೧ |
| ೨ | ಶ್ರೀ ಮ. ನಿ. ಪ್ರ. ಬಸವಲಿಂಗಮಹಾಸ್ವಾಮಿಗಳು, ನವಿಲುಗುಂದ | ೧೦೧ |
| ೩ | ಶ್ರೀ ಮ. ನಿ. ಪ್ರ. ಸದಾಶಿವಮಹಾಸ್ವಾಮಿಗಳು, ಹಾನಗಲ್ಲ | ೧೦೧ |
| ೪ | ಶ್ರೀ ಮ. ನಿ. ಪ್ರ. ನೀಲಕಂಠಮಹಾಸ್ವಾಮಿಗಳು, ಗುಳೇದಗುಡ್ಡ | ೧೦೧ |
| ೫ | ಶ್ರೀ ಮ. ಚ. ಸದಾಶಿವಶಿವಾಚಾರ್ಯಸ್ವಾಮಿಗಳು, ಸಖರಾಯಪಟ್ಟಣ | ೧೦೦ |
| ೬ | ಶ್ರೀ ಮ ಚ. ಬಸವಲಿಂಗ ಶಿವಾಚಾರ್ಯಸ್ವಾಮಿಗಳು ಹಿರೇಮಠ, ಬನ್ನೂರ | ೨೫ |
| ೭ | ಶ್ರೀ ಗುರುಲಿಂಗಯ್ಯನವರು ಬಣ್ಣದಮಠ, ಗದಗ | ೧೦೦ |
| ೮ | ಶ್ರೀ ದೊಡ್ಡಪ್ಪನವರು ನಾಗರಾಳ, ಹುನಗುಂದ | ೧೮೦ |
| ೯ | ಶ್ರೀ ಮಲ್ಲಪ್ಪ ಬಸಪ್ಪ ಕಬ್ಬೂರ, ಬ್ಯಾಡಗಿ | ೧೦೦ |
| ೧೦ | ಶ್ರೀ ಕಲ್ಲಪ್ಪ ಮಾಗುಂಡಪ್ಪ ಹಲಕುರ್ಕಿ, ಬದಾಮಿ | ೮೦ |
| ೧೧ | ಶ್ರೀ ನಾಗಪ್ಪನವರು ಬ್ಯಾಳಿ, ಬಾಗಲಕೋಟ | ೧೨ |
| ೧೨ | ಶ್ರೀ ಕೊಟ್ರಯ್ಯನವರು ಮುಖಂಡಮಠ, ಅಣ್ಣಿಗೇರಿ | ೫ |
| ೧೩ | ಶ್ರೀ ವೀರಭದ್ರಪ್ಪ ಹಂಡಿ, ಐಹೊಳೆ | ೫ |
| ೧೪ | ಶ್ರೀ ಗುಸಿದ್ದಪ್ಪ ಪಾವಡೆ, ಬಾಗಲಕೋಟ | ೪ |





